ಶ್ರೀ

# ಕರ್ಣಾಟಕ ರಘುವಂಶ

ವಿದ್ವಾನ್ ವೈ. ನಾಗೇಶಶಾಸ್ತ್ರಿ

ಸರ್ವದರ್ಶನತೀರ್ಥ, ಬಳ್ಳಾರಿ.

ಇವರಿಂದ ವಿರಚಿತವಾದುದು



ನಾರಾಯಣ ಪವರ್ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿದೆ,

ಬಳ್ಳಾರಿ.

೧೯೩೨.

*Dedicated*

*By Gracious Permission*

*to*

*His Highness*

**SRI KRISHNA RAJA ODEYAR BAHADUR**

**G·C.S·I·, G·B·E·,**

*Maharaja of Mysore.*

---

ಈ ಗ್ರಂಥವು

ಮೈಸೂರು ಸಂಸ್ಥಾನದ ಮಹಾಪ್ರಭುಗಳಾದ

ಶ್ರೀಕೃಷ್ಣರಾಜ ಒಡೆಯರ್ ಬಹಾದುರ್

ಸಿ. ಎಸ್. ಐ., ಜಿ. ಬಿ. ಇ.,

ಮಹಾಸ್ವಾಮಿಯವರಿಗೆ

ಅಪ್ಪಣೆಯನ್ನು ಪಡೆದು

ಅರ್ಪಿಸಲ್ಪಟ್ಟಿದೆ

---



ಮೈಸೂರು ಸಂಸ್ಥಾನದ ಮಹಾಪ್ರಭುಗಳಾದ
ಶ್ರೀ ಕೃಷ್ಣರಾಜ ಒಡೆಯರ್ ಬಹಾದುರ್
ಜಿ. ಸಿ. ಎಸ್. ಐ., ಜಿ. ಬಿ. ಇ.



ಈ ಗ್ರಂಥರಚನೆಗೆ ಪ್ರೋತ್ಸಾಹಕರೂ ಗ್ರಂಥಕರ್ತೃವಿನ ಸನ್ಮಿತ್ರರೂ ಆದ
ಶ್ರೀಮಾನ್. ವೈ. ಮಹಾಬಲೇಶ್ವರಪ್ಪನವರು
ಡಿಸ್ಟ್ರಿಕ್ಟ್ ಬೋರ್ಡು ಪ್ರೆಸಿಡೆಂಟರು, ಬಳ್ಳಾರಿ.



ವಿದ್ವಾನ್, ವೈ. ನಾಗೇಶಶಾಸ್ತ್ರಿ,
ಸರ್ವದರ್ಶನತೀರ್ಥ, ಬಳ್ಳಾರಿ.

# ಮುನ್ನುಡಿ.

ಕವಿಕುಲಸಾರ್ವಭೌಮನಾದ ಕಾಳಿದಾಸನು ಸಂಸ್ಕೃತದಲ್ಲಿ ರಚಿಸಿದ ರಘುವಂಶಮಹಾಕಾವ್ಯವನ್ನು 'ಕರ್ನಾಟಕರಘುವಂಶ, ವೆಂಬ ಹೆಸರಿನಿಂದ ನಾನು ಪರಿವರ್ತಿಸಿರುವೆನಷ್ಟೆ. ಕಾಳಿದಾಸನೂ ಆತನ ರಘುವಂಶಕಾವ್ಯವೂ ಲೋಕಪ್ರಸಿದ್ಧವಾಗಿರುವುದರಿಂದ ಆವಿಷಯವನ್ನಿಲ್ಲಿ ವಿವರಿಸದೆ, ಕರ್ನಾಟಕರಘುವಂಶದ ವಿಷಯವಾಗಿ ಒಂದೆರಡು ಮಾತುಗಳನ್ನು ತಿಳಿಸುವೆನು.

ಉದ್ದೇಶ—ಪ್ರತಿಯೊಂದು ಭಾಷೆಯ ವಾಙ್ಮಯಾಭಿವೃದ್ಧಿಗೆ ಇತರಭಾಷೆಗಳಲ್ಲಿರುವ ಉತ್ತಮಗ್ರಂಥಗಳ ಪರಿವರ್ತನವೂ ಒಂದು ಮುಖ್ಯಸಾಧನವಾಗಿರುವುದೆಂದು ತಿಳಿದು, ಅನೇಕಪಂಡಿತರು ಸಂಸ್ಕೃತ, ಇಂಗ್ಲೀಷು ಮೊದಲಾದ ಭಾಷೆಗಳ ಉತ್ತಮಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸಿ, ಕನ್ನಡಸಾಹಿತ್ಯಾಭಿವೃದ್ಧಿಯನ್ನು ಮಾಡಿಯೂ ಮಾಡುತ್ತಲೂ ಇರುವುದು ಸರ್ವವಿದಿತವಾಗಿರುವುದು. ನಾನಾದರೂ ಸಂಸ್ಕೃತದ ಒಂದೆರಡು ಗ್ರಂಥಗಳನ್ನು ಪರಿವರ್ತಿಸಿ ಕನ್ನಡಸಾಹಿತ್ಯದ ಸೇವೆಯನ್ನು ಮಾಡಬೇಕೆಂಬುದ್ದೇಶದಿಂದ ಯಾವ ಗ್ರಂಥಗಳನ್ನು ಪರಿವರ್ತಿಸಬೇಕೆಂಬ ಯೋಚನೆಯಲ್ಲಿಯೇ ಕಾಲಕ್ರಮಣಮಾಡುತ್ತಿದ್ದೆನು. ಆಗ, ನನ್ನ ಸನ್ಮಿತ್ರರಾದ ಶ್ರೀಮಾನ್, ವೈ. ಮಹಾಬಲೇಶ್ವರಪ್ಪನವರು— ಕನ್ನಡಕವಿಗಳು ಸಂಸ್ಕೃತ ಪ್ರಸಿದ್ಧನಾಟಕಗಳನ್ನೆಲ್ಲಾ ಕನ್ನಡಕ್ಕೆ ಪರಿವರ್ತಿಸಿರುವರು. ಆದರೆ, ಅವರು ಸಂಸ್ಕೃತದ ಪ್ರಸಿದ್ಧಕಾವ್ಯಗಳ ಕಡೆಗೆ ಹೆಚ್ಚು ಗಮನಕೊಟ್ಟಿರುವಂತೆ ಕಾಣಲಿಲ್ಲ. ನೀವು ಶ್ರೀಕಾಳಿದಾಸನ ರಘುವಂಶ ಕುಮಾರಸಂಭವ ಕಾವ್ಯಗಳನ್ನು ಹೈಸ್ಕೂಲು ಕಾಲೇಜುಗಳ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಗಿಡುವಂತೆ ಪದ್ಯರೂಪದಿಂದ ಪರಿವರ್ತಿಸುವುದು ಯೋಗ್ಯವೆಂದು ಸೂಚಿಸುವುದಲ್ಲದೆ, ತುಂಬಾಪ್ರೋತ್ಸಾಹವನ್ನಿತ್ತು ಪರಿವರ್ತನವನ್ನು ಪ್ರಾರಂಭಿಸುವಂತೆ ಮಾಡಿದರು. ಅವರ ಪ್ರೋತ್ಸಾಹದಿಂದ ಮೊದ

ಲು, ಈರಘುವಂಶವನ್ನು ಕನ್ನಡಿಸಿರುವೆನು. ಇದರಿಂದ ಕನ್ನಡಿಗರಿಗೆ ಕಿಂಚಿತ್ತಾದರೂ ಪ್ರಯೋಜನವಾದರೆ ನನ್ನಉದ್ದೇಶವು ಕೆಲವುಮಟ್ಟಿಗೆ ಪೂರೈಸಿದಂತೆ ಭಾವಿಸುವೆನು.

ಪರಿವರ್ತನದ ಪದ್ಧತಿ— ಈಕಾವ್ಯವು ವಾರ್ಧಕಷಟ್ಪದಿಯಲ್ಲಿ ಪರಿವರ್ತಿಸಲ್ಪಟ್ಟಿದೆ. ಸಂಸ್ಕೃತಮೂಲಗ್ರಂಥದ ಎರಡೆರಡು ಶ್ಲೋಕಗಳು ಒಂದೊಂದು ಷಟ್ಪದಿಯಲ್ಲಿ ಮುಗಿದಿರುವವು. ಬಹುತರವಾಗಿ, ಷಟ್ಪದಿಯ ಪೂರ್ವಾರ್ಧಕ್ಕೊಂದು ಶ್ಲೋಕವೂ ಉತ್ತರಾರ್ಧಕ್ಕೆ ಮತ್ತೊಂದು ಶ್ಲೋಕವೂ ಮುಗಿಯುವಂತೆ ಪರಿವರ್ತಿಸಲ್ಪಟ್ಟಿದೆ. ಸರ್ಗಾಂತದ ಶ್ಲೋಕಗಳು ದೊಡ್ಡವಿದ್ದುದರಿಂದ ಅವುಗಳಲ್ಲಿ ಕೆಲವು ಶ್ಲೋಕಗಳೂ, ಗ್ರಂಥಾದಿಯ ಮಂಗಳಶ್ಲೋಕವೂ ಮಾತ್ರ ಒಂದೊಂದೇ ಷಟ್ಪದಿಯಲ್ಲಿ ಮುಗಿಸಲ್ಪಟ್ಟಿವೆ. ಆಶ್ಲೋಕಗಳ ಸಂಖ್ಯೆಯು ಪುಸ್ತಕದ ಕೊನೆಯಲ್ಲಿ ಸೂಚಿತವಾಗಿದೆ. ಪ್ರತಿಸರ್ಗದ ಆರಂಭದಲ್ಲಿರುವ ಸೂಚನೆಯ ಪದ್ಯಭಾಗಗಳೂ, ೧ನೆಯ ಸರ್ಗದ ಮೂರನೆಯ ಪದ್ಯದ ಉತ್ತರಾರ್ಧವೂಮಾತ್ರ ಸ್ವಕಲ್ಪಿತವು. ನನ್ನ ಅಲ್ಪಮತಿಗೆ ತಿಳಿದಮಟ್ಟಿಗೆ ಮೂಲಗ್ರಂಥದ ಅರ್ಥಕ್ಕೆ ನ್ಯೂನಾಧಿಕ ಭಾವವುಂಟಾಗದಂತೆ ಯತ್ನಿಸಿರುವೆನು. ಇದರ ಗುಣದೋಷವಿಮರ್ಶನವು ಪಂಡಿತರ ಭಾಗದ್ದಾಗಿರುವುದು.

ಅಭಿಪ್ರಾಯಗಳು—ನನ್ನ ವಿಜ್ಞಾಪನೆಯಂತೆ ಈಕಾವ್ಯದ ವಿಷಯವಾಗಿ ತಮ್ಮ ಅಭಿಪ್ರಾಯಗಳನ್ನು ಬರೆದು ಕಳುಹಿದ ಬುದ್ಧಿವೃದ್ಧರ ಉಪಕಾರವು ಚಿರಸ್ಮರಣೀಯವಾಗಿರುವುದು. ಆ ಮಹೋದಯರ ಅಭಿಪ್ರಾಯಗಳು ಮುಂದೆ ಮುದ್ರಿತವಾಗಿರುವವು. ಕರ್ನಾಟಕಕವಿಚರಿತ್ರಕಾರರಾದ ಆರ್. ನರಸಿಂಹಾಚಾರ್ಯರು ತಮ್ಮ ಅಭಿಪ್ರಾಯದ ಲೇಖನದಲ್ಲಿ ಹಳಗನ್ನಡದ ದೃಷ್ಟಿಯಿಂದ ಕೆಲವು ಶಬ್ದಗಳ ಶುದ್ಧಾಶುದ್ಧತೆಯನ್ನು ಎಂದರೆ, ಏರಿ, ವೊಲ್, ಐದಿದ, ಆಗಳ್, ಈಗಳ್ ಎಂದಿರುವುದಕ್ಕೆ ಪ್ರತಿಯಾಗಿ-ಏರ್ದು, ಒಲ್, ಐದ, ಆಗಂ, ಈಗಂ, ಇತ್ಯಾದಿಯಾಗಿದ್ದ ಶಬ್ದಗಳಪ್ರಯೋಗವನ್ನು ತೋರಿಸಿ, ಇವುಗಳು ಇಲ್ಲದಿರುವುದು ಉತ್ತಮವೆಂದು ಸೂಚಿಸಿರುವರು. ಅವರ ಸೂಚನೆಯು ನನಗೆಗ್ರಾಹ್ಯವೇ. ಆದರೆ, ನಾನು ಪರಿವರ್ತನದಲ್ಲಿ ಮೇಲೆ ತೋರಿಸಿದ ಎರಡೂವಿಧದ ಶಬ್ದಗಳನ್ನೂ ಪ್ರಯೋಗಿಸಿರುವೆನು

ಆಪ್ರಯೋಗಗಳು ಸಮಗ್ರಗ್ರಂಥಾವಲೋಕನದಿಂದ ಪಾಠಕರಿಗೆ ಗೊತ್ತಾಗ ಬಹುದೆಂದು ಅವನ್ನು ಇಲ್ಲಿ ಸೂಚಿಸಿಲ್ಲ. ಹೀಗೆ ಪ್ರಯೋಗಿಸಲಿಕ್ಕೆ ನಾನು ತಿಳಿದುಕೊಂಡ ಕಾರಣವು ಕೆಳಗೆ ಬರೆದಂತಿರುವುದು.

ಷಟ್ಪದೀಕಾವ್ಯಗಳು ಸುಮಾರು ೧೨ ನೆಯ ಶತಮಾನದಿಂದಲೂ ರಾಘವಾಂಕ ಮೊದಲಾದ ಕವಿಗಳಿಂದ ರಚಿಸಲ್ಪಟ್ಟು, ಹೆಚ್ಚಾಗಿ ಪ್ರಚಾರಕ್ಕೆ ಬಂದಿರುವವೆಂಬುದು ಕರ್ನಾಟಕಕವಿಚರಿತ್ರದಿಂದ ತಿಳಿದುಬರುವದು. ಷಟ್ಪದೀಕಾವ್ಯಗಳಲ್ಲಿ ಹಳಗನ್ನಡಹೊಸಗನ್ನಡದ ಮಿಶ್ರಪ್ರಯೋಗವೇ ಬಹಳವಾಗಿ ಕಂಡುಬರುವುದು. ಚಂಪೂಕಾವ್ಯಗಳನ್ನು ಹಳಗನ್ನಡದಲ್ಲಿಯೂ ಷಟ್ಪದೀಕಾವ್ಯಗಳನ್ನು ಮಿಶ್ರಮಾರ್ಗದಲ್ಲಿಯೂ ರಚಿಸುವ ರೂಢಿಯು ೧೨ ನೆಯ ಶತಮಾನದಿಂದ ಇದುವರೆಗೂ ಇದ್ದಂತೆ ತಿಳಿಯುವುದು. ೧೨ ನೆಯ ಶತಮಾನದ ಹರೀಶ್ವರನ ಗಿರಿಜಾಕಲ್ಯಾಣಚಂಪುವೂ, ರಾಘವಾಂಕನ ಷಟ್ಪದೀಕಾವ್ಯಗಳೂ, ಆಧುನಿಕಕವಿಯಾದ ಬಸವಪ್ಪಶಾಸ್ತ್ರಿಯ ದಮಯಂತೀಸ್ವಯಂವರಚಂಪುವೂ ಷಟ್ಪದೀರೂಪದ ಸಾವಿತ್ರೀಚರಿತ್ರೆ ಇವೇ ಮೊದಲಾದ ಗ್ರಂಥಗಳು ಮೇಲಿನ ಮಾತಿಗೆ ನಿದರ್ಶನಗಳಾಗಿರುವವು. ಷಟ್ಪದೀಕಾವ್ಯಗಳ ಈ ಮಿಶ್ರಮಾರ್ಗಪದ್ಧತಿಗೆ ದೇಶಕಾಲಪರಿಸ್ಥಿತಿಯೇ ಮೊದಲಾದ ಅನೇಕಕಾರಣಗಳಿದ್ದಂತೆ ತಿಳಿದುಬರುವುದು ಇದನ್ನು ತಿಳಿದೇ ನಾನಾದರೂ ಮಿಶ್ರಮಾರ್ಗದಿಂದಲೇ ಪರಿವರ್ತಿಸಿದೆನು. ಷಟ್ಪದಿಯಿಂದ ರಚಿಸಿದ ಪ್ರಸಿದ್ಧಗ್ರಂಥಗಳ ಲಕ್ಷ್ಯಾನುಸಾರವಾಗಿ ವ್ಯಾಕರಣವೊಂದನ್ನು ರಚಿಸಿ, ಷಟ್ಪದಿಗಳ ಮಿಶ್ರಮಾರ್ಗಪದ್ಧತಿಯನ್ನು ಸರಿಗೊಳಿಸುವವರೆಗೂ ಷಟ್ಪದಿಗಳನ್ನು ಬರೆಯುವವರ ಮೇಲೆ ಪ್ರಯೋಗದ ಶುದ್ಧಾಶುದ್ಧತೆಯ ಆಕ್ಷೇಪಗಳು ಹೋಗಲಾರವೆಂದು ನಾನು ಭಾವಿಸಿರುವೆನು. ಕರ್ನಾಟಕಸಾಹಿತ್ಯಪರಿಷತ್ತಿನಂತಹ ವಾಙ್ಮಯಸೇವಾಸಂಘಗಳು ಪಂಡಿತರಿಂದ ಮಿಶ್ರಮಾರ್ಗವನ್ನು ಸರಿಗೊಳಿಸುವ ವ್ಯಾಕರಣವನ್ನು ಬರೆಯಿಸುವುದು ಅತ್ಯವಶ್ಯಕವೆಂದು ಹೇಳಿದರೆ ತಪ್ಪಾಗಲಾರದು.

ಅರ್ಪಣ—ಈ ಕಾವ್ಯವನ್ನು ತಮಗೆ ಅರ್ಪಿಸಲು ಅಪ್ಪಣೆಯನ್ನು ದಯಪಾಲಿಸಿದುದಕ್ಕಾಗಿ ಕರ್ನಾಟಕದೇಶಾಧೀಶ್ವರರಾದ ಮೈಸೂರಿನ ಶ್ರೀಮನ್ಮಹಾರಾಜರವರಿಗೆ ನನ್ನ ಕೃತಜ್ಞತೆಯನ್ನು ನಮ್ರಭಾವದಿಂದ ತಿಳಿಸುತ್ತೇನೆ.

ಪ್ರೋತ್ಸಾಹ— ಮುಂಬಯಿ ಗೌರ್ನಮೆಂಟಿನ ವಿದ್ಯಾಶಾಖೆಯವರು ಈಗ್ರಂಥವನ್ನು ಸೆಕೆಂಡ್ರಿಸ್ಕೂಲುಗಳ ಪಠ್ಯಪುಸ್ತಕವಾಗಿಯೂ, ಲೈಬ್ರರಿ ಪುಸ್ತಕವಾಗಿಯೂ, ಪ್ರೈಮರಿಸ್ಕೂಲುಗಳ ಬಹುಮಾನದ ಪುಸ್ತಕವಾಗಿ ಯೂ ಇಡುವಂತೆಯೂ, ಮೈಸೂರು ಗೌರ್ಮೆಂಟಿನ ವಿದ್ಯಾಶಾಖೆಯವರು ಹೈಸ್ಕೂಲು ನಾರ್ಮಲ್ ಸ್ಕೂಲುಗಳ ಲೈಬ್ರರಿ ಪುಸ್ತಕವಾಗಿಡುವಂತೆಯೂ ಒಪ್ಪಿಗೆಯನ್ನಿತ್ತಿರುವರು. ಮತ್ತು ಮದ್ರಾಸು ಟೆಕ್ಸ್ಟಬುಕ್ ಕಮಿಟಿಯು ವರಾದರೂ ಇದನ್ನು ಸ್ಕೂಲುಗಳಿಗಾಗಿ ಅಂಗೀಕರಿಸಿರುವರು. ಈವಿಧವಾಗಿ ಪ್ರೋತ್ಸಾಹವನ್ನಿತ್ತ ಇವರೆಲ್ಲರ ಉಪಕಾರವು ಸ್ಮರಣೀಯವಾಗಿರುವುಬು. ತಕ್ಕಸಮಯಕ್ಕೆ ಹೊಸದಾಗಿ ಅಕ್ಷರಗಳನ್ನು ತರಿಸಿ ಈಪುಸ್ತಕವನ್ನು ಅಂದ ವಾಗಿ ಮುದ್ರಿಸಿಕೊಟ್ಟು ಪ್ರೋತ್ಸಾಹಪಡಿಸಿದ ನಾರಾಯಣಮುದ್ರಾಲ ಯದ ಕರ್ತೃಗಳೂ ಸ್ಮರಣೀಯರೇ ಆಗಿರುವರು.

ವಿಜ್ಞಪ್ತಿ—ದ್ವಿತೀಯಸರ್ಗದ ೧೧ ನೆಯ ಪದ್ಯವನ್ನು ಮುದ್ರಿಸುವ ಕಾಲಕ್ಕೆ ಕಣ್ಣುತಪ್ಪಿ ಬಿಟ್ಟುದ್ದಕ್ಕಾಗಿ ಅದನ್ನು ೧೧ (A) ಯೆಂಬ ಗುರ್ತಿ ನಿಂದ ಶುದ್ಧಿಪತ್ರಿಕೆಯಾದಿಯಲ್ಲಿ ಮುದ್ರಿಸಿರುವೆವು. ಇಂತಹ ದೋಷಗಳು ಮುದ್ರಣದಲ್ಲಾಗಲಿ ಪ್ರಯೋಗದಲ್ಲಾಗಲಿ ಇನ್ನೂಕೆಲವು ಕಂಡರೆ ಅವೆಲ್ಲ ವನ್ನೂ ಪಂಡಿತೋತ್ತಮರು ಬರೆದು ತಿಳಿಸಬೇಕೆಂದು ವಿಜ್ಞಾಪಿಸಿ ಕೊಳ್ಳುವೆನು.

ಬಳ್ಳಾರಿ.
ತಾ॥ ೧–೧೨–೩೨.

ವಾಙ್ಮಯಸೇವಾಭಿಲಾಷಿ,
ವೈ. ನಾಗೇಶ ಶಾಸ್ತ್ರಿ.

—o—

# ಅಭಿಪ್ರಾಯಗಳು.

Dear Sir,

Many thanks to you for so kindly sending me a copy of your KARNATAKA RAGHUVAMSA. It has given me immense pleasure to go through it. Your rendering is not only close but also chaste. The shatpadi metre was going out of use latterly, because of the difficulty in the versification. But you have in adopting it succeeded exceedingly well. Your work further reveals poetic talent of a high order. These merits will, I believe, give your work a very important place in Kannada literature.

Pray accept may hearty congratulations on your highly praise worthy production.

Wishing you all success in your literary endeavours.

Vonti Koppal
Mysore,
29—6—32.

I am
Yours sincerely,
V. SUBRAHMANYA IYER.
(Retired Registrar,
Mysore University.)

---

ವಿದ್ವಾನ್ ವೈ. ನಾಗೇಶಶಾಸ್ತ್ರಿಗಳ "ಕರ್ಣಾಟಕ-ರಘುವಂಶ ಕಾವ್ಯವನ್ನು ಅಲ್ಲಲ್ಲಿ ಓದಿನೋಡಿದೆನು. ಭಾಷಾಸರಣಿಯೂ ಎಲ್ಲಿಯೂ ಕ್ಲಿಷ್ಟವಾಗಿರದೆ ಸರಳವಾಗಿಯೂ ಸರಸವಾಗಿಯೂ ಬಂದಿದೆ. ಮೂಲ ಗ್ರಂಥದ ಆಶಯಕ್ಕೆ ಯಾವ ವ್ಯತ್ಯಯವೂ ಬಾರದಂತೆ ಪದ್ಯಗಳು ರಚಿತ ವಾಗಿವೆ. ಒಟ್ಟಿನಲ್ಲಿ ಈ ಗ್ರಂಥವು ಕನ್ನಡಸಾಹಿತ್ಯಸಂಪತ್ತಿಯಲ್ಲಿ ಸೇರಲು ತಕ್ಕುದಾಗಿದೆ ಎಂಬುದು ನಿರ್ವಿವಾದವಾದುದು.

ಧಾರವಾಡ.
೧–೭–೧೯೩೨.

ಶಿ. ಶಿ. ಬಸವನಾಳ, ಎಮ್. ಎ.
ಎಮ್. ಆರ್. ಎ. ಎಸ್.

ಶ್ರೀಮಾನ್ ಮ॥ರಾ॥ ನಾಗೇಶಶಾಸ್ತ್ರಿಗಳಲ್ಲಿ ಮಾಡುವ ವಿಜ್ಞಾಪನೆ. ಉಭಯಕುಶಲೋಪರಿ. ನಿಮ್ಮ ಕಾರ್ಡು ತಲಪಿತು. ರಘುವಂಶದ ಕೆಲವು ಭಾಗಗಳನ್ನು ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರೂ ಶ್ರೀಮಾನ್ ಬಸಪ್ಪಶಾಸ್ತ್ರಿಗಳೂ ಪರಿವರ್ತನಮಾಡಿದ್ದಾರೆ. ನೀವು ಗ್ರಂಥವನ್ನು ಪೂರ್ತಿಯಾಗಿ ವಾರ್ಧಕಷಟ್ಪದಿಯಲ್ಲಿ ಪರಿವರ್ತನಮಾಡಿದ್ದೀರಿ. ಪದ್ಯಗಳು ಸರಳವಾಗಿವೆ. ಬಂಧದಲ್ಲಿ ಕ್ಲಿಷ್ಟತೆ ವಿಶೇಷವಾಗಿ ಕಾಣುವುದಿಲ್ಲ. ಆದರೆ ಅಲ್ಲಲ್ಲಿ ಕೆಲವು ಪ್ರಯೋಗಗಳು ಅಷ್ಟು ಶುದ್ಧವಾಗಿರುವಂತೆ ಕಾಣುವುದಿಲ್ಲ. ಕೆಲವು ಷಟ್ಪದೀಗ್ರಂಥಗಳಲ್ಲಿ ಇಂಥ ಪ್ರಯೋಗಗಳು ಕೆಲವು ದೊರೆಯಬಹುದು, ಆದರೂ ಅವನ್ನು ಬಿಡುವುದು ಯುಕ್ತವೆಂದು ತೋರುತ್ತದೆ. ಪುಟ ೧ ಏರ್ದು (ಏರಿ), ಇರ್ಪೊಲ್ (ಇರ್ಪವೊಲ್), ಪುಟ ೫ ಆಗಂ (ಆಗಳ್), ಪುಟ ೬ ಜನನಾಥನೈದ (ಜನನಾಥನೈದಿದ), ಪುಟ ೯ ಭಯದೊಳೀ ಅರಸಿಯಂ (ಭಯದೊಳೀ ಯರಸಿಯಂ), ಪುಟ ೧೦ ಈಗಂ (ಈಗಳ್) ಇತ್ಯಾದಿ. ಇವು ಅಷ್ಟೇನು ದೊಡ್ಡ ತಪ್ಪುಗಳಲ್ಲ ಆದರೂ ಇಲ್ಲದಿರುವುದು ಉತ್ತಮ. ಒಟ್ಟಿನಲ್ಲಿ ನೀವು ಈ ಗ್ರಂಥರಚನೆಯಲ್ಲಿ ಪಟ್ಟಿರುವ ಶ್ರಮವು ಶ್ಲಾಘಸತಕ್ಕುದಾಗಿದೆ. ದೊಡ್ಡ ಷಟ್ಪದಿಯನ್ನು ಅವಲಂಬಿಸಿರುವುದರಿಂದ ಮೂಲವನ್ನು ಕೆಲವುಕಡೆ ವಿಸ್ತರಿಸಿದೆ. ಯತ್ನವಿಲ್ಲ.

ಮಲ್ಲೇಶ್ವರ, ಬೆಂಗಳೂರು.
೧೨—೭—೩೨.

ಇಂತೀವಿಜ್ಞಾಪನೆ,
ರಾ. ನರಸಿಂಹಾಚಾರ್ಯ.

---

ಮ॥ರಾ॥ ಶ್ರೀ. ನಾಗೇಶಶಾಸ್ತ್ರಿಗಳವರ ಸನ್ನಿಧಾನಕ್ಕೆ.

ತಮ್ಮ ಕರ್ಣಾಟಕ ರಘುವಂಶವನ್ನು ನಾನು ಓದಿನೋಡಿದೆನು ಕವಿತಾಶೈಲಿಯು ಬಹಳ ಸರಳವಾಗಿಯೂ, ಶುದ್ಧವಾಗಿಯೂ ಇರುವುದರೊಡನೆ, ಬಹಳಕಡೆಗಳಲ್ಲಿ ವರ್ಣನಾ ವಿಷಯಗಳು, ಮಹಾಕವಿ ಶ್ರೀ ಕಾಳಿದಾಸನ ಭಾವಗಳನ್ನು ಚನ್ನಾಗಿ ಉದ್ಘಾಟಿಸಿ ತೋರಿಸುತ್ತವೆ. ಮೂಲಗ್ರಂಥದಲ್ಲಿರುವ ಅನುಷ್ಟುಪ್ ಮುಂತಾದ ಸಣ್ಣ ಶ್ಲೋಕಗಳಿಗೆ ವಾರ್ಧಕಷಟ್ಪದಿಯು ಸ್ವಲ್ಪದೊಡ್ಡವೃತ್ತವಾದರೂ, ಅನವಶ್ಯಕವಾಗಿ ಕೇವಲ

ಪಾದಪೂರಣಕ್ಕಾಗಿ ಉಪಯೋಗಿಸಿದ ಪದಗಳೇನೂ ಹೆಚ್ಚಿಲ್ಲದೆ, ಓದುವ ವರಿಗೆ ಸುಲಭವಾಗಿ, ಒಳ್ಳೇ ಕವಿತಾಲಕ್ಷಣವನೊಳಕೊಂಡಿದೆ ಯೆಂಬುದ ರಲ್ಲಿ ಸಂದೇಹವಿಲ್ಲ.

ಟ್ರಿಪ್ಲಿಕೇನ್, ಮದ್ರಾಸು. ೨೫—೭—೧೯೩೨.

ತಮ್ಮ ವಿಶ್ವಾಸಪಾತ್ರ,
ಯಂ. ಡಿ. ಅಳಸಿಂಗರಾಚಾರ್ಯ.
(ಪಂಡಿತ, ಪ್ರೆಸಿಡೆನ್ಸಿ ಕಾಲೇಜು)

---

ಬಳ್ಳಾರಿ ವಾರ್‌ಡ್ಲಾ ಹೈಸ್ಕೂಲು ಕನ್ನಡಪಂಡಿತರಾದ ವಿದ್ವಾನ್, ನಾಗೇಶಶಾಸ್ತ್ರಿಗಳು ರಚಿಸಿದ 'ಕರ್ಣಾಟಕರಘುವಂಶಂ' ಎಂಬ ಗ್ರಂಥವು ಸಂಸ್ಕೃತರಘುವಂಶದ ಪರಿವರ್ತನವು. ಸಾಹಿತ್ಯಪ್ರಪಂಚದಲ್ಲಿ ಗ್ರಂಥ ರಚನೆಯೇ ಕಷ್ಟವಾದುದು. ಅದರಲ್ಲಿ ಪರಿವರ್ತನರೂಪವಾದ ರಚನೆಯು ಕಷ್ಟತರವಾದುದು, ತತ್ರಾಪಿ ಸಂಸ್ಕೃತದಲ್ಲಿ ಮಹಾಕಾವ್ಯಗಳಲ್ಲಿ ಒಂದೆಂಬ ದಾಗಿ ಪರಿಗಣಿಸಲ್ಪಟ್ಟ ರಘುವಂಶಕಾವ್ಯವನ್ನು ವಾರ್ಧಿಕಷಟ್ಪದಿಯಲ್ಲಿ ಪರಿವರ್ತಿಸುವುದು ಕಷ್ಟತಮವಲ್ಲವೇ? ಇಂತಹ ಕಷ್ಟತರವಾದ ಕಾರ್ಯ ವನ್ನು ಕೈಕೊಂಡು ಕೊನೆಮುಟ್ಟಿಸಿದುದು ಪರಮಶ್ಲಾಘನೀಯವು. ಈ ಗ್ರಂಥವನ್ನು ನಾನು ಆಮೂಲಾಗ್ರವಾಗಿ ನೋಡದಿದ್ದರೂ ಅದರಲ್ಲಿನ ಅನೇ ಕಭಾಗಗಳನ್ನು ಮೂಲಗ್ರಂಥದೊಂದಿಗೆ ಹೋಲಿಸಿನೋಡಿದ್ದೇನೆ. ಈ ಪರಿವರ್ತನವು ಬಹುಪ್ರಾಮಾಣಿಕವಾದುದೆಂದು ನಿಸ್ಸಂದೇಹವಾಗಿ ಹೇಳ ಬಹುದು, ಮೂಲದಲ್ಲಿನ ಅಭಿಪ್ರಾಯಗಳನ್ನು ಕನ್ನಡದಲ್ಲಿ ಸಂಕ್ಷೇಪಾಕಾರ ವಾಗಿ ಹೇಳುವದಕ್ಕೆ ಸಾಧ್ಯವಾಗದಕಡೆ ಮೂಲಸ್ಥಪದಗಳನ್ನೇ ಪ್ರಯೋಗ ಮಾಡುವುದು-ಇವೇ ಮುಂತಾದ ಕ್ರಮಗಳನ್ನು ಗ್ರಂಥಕರ್ತರು ಅನುಸರಿಸಿ ದಂತೆ ಕಾಣುತ್ತದೆ. ಕವಿತಾಧೋರಣೆಯು ನಿರರ್ಗಳಪ್ರವಾಹದಂತಿದ್ದು ಭಾಷಾಶೈಲಿಯು ಸರಳವಾಗಿಯೂ ಸುಲಭವಾಗಿಯೂ ಇದೆ. ಪದಗಳು ಮಂಜುಳಗಳಾದ ಸ್ವರವ್ಯಂಜನಗಳಿಂದ ಯುಕ್ತವಾಗಿ ಮೃದುಮಧುರಗ ಳಾಗಿಯೂ ಲಲಿತಗಳಾಗಿ ಬಹುಶ್ರಾವ್ಯಗಳಾಗಿವೆ. ಭಾಷಾಭಿಮಾನಿಗಳೂ ಮತ್ತು ಸಾಹಿತ್ಯ ಪಕ್ಷಪಾತಿಗಳೂ ಆದ ಮಹನೀಯರಿಗೆ ಈಗ್ರಂಥದ ಉತ್ಕರ್ಷಗೆ ಅನುಗುಣವಾದ ಪ್ರಚಯಪ್ರಚಾರಗಳನೊದಗಿಸಿಕೊಟ್ಟು,

ಗ್ರಂಥಕರ್ತರಿಗೆ ಉತ್ತೇಜನವನ್ನು ಕೊಡುವುದು ಒಂದು ದೊಡ್ಡ ಕರ್ತವ್ಯವೆಂದು ನನ್ನ ಭಾವನೆ. ಸರ್ಕಾರದ ವಿದ್ಯಾಖಾತೆಯವರು ಈಪುಸ್ತಕದಲ್ಲಿನ ಕೆಲವು ಭಾಗಗಳನ್ನು ಉದ್ಧಾರಮಾಡಿ ಸರ್ಕಾರೀ ಪರೀಕ್ಷೆಗಳಿಗೆ ಪಠ್ಯಗ್ರಂಥಗಳನ್ನಾಗಿ ನಿಯಮಿಸಿದಲ್ಲಿ ಗ್ರಂಥಕರ್ತರಿಗೆ ಬಹುಪ್ರೋತ್ಸಾಹವನ್ನು ಕೊಟ್ಟಂತೆ ಆಗುತ್ತದೆ. ಈಗ್ರಂಥಕ್ಕೆ ತಕ್ಕಪ್ರೋತ್ಸಾಹವು ದೊರೆತಲ್ಲಿ ಇಂತಹ ಗ್ರಂಥಗಳಿನ್ನೂ ಅನೇಕಗಳು ಹೊರಬೀಳುವವೆಂದು ನನ್ನ ದೃಢಪ್ರತ್ಯಯ. ಈಗ್ರಂಥವು ಕರ್ಣಾಟಕಪ್ರಪಂಚದಲ್ಲಿ ಚನ್ನಾಗಿ ಹರಡಿ, ಜಯಶೀಲವಾಗಲಿ ಎಂದುಪ್ರಾರ್ಥಿಸುವ

ಬಳ್ಳಾರಿ.
ತಾ॥ ೧—೮—೩೨.

ಭಾಷಾಭಿಮಾನಿ,
A. BHIMACHAR, M. A. L. T.
Chairman Kannada & Tamil Bd, of Studies
Andhra University.

---

ಶ್ರೀ ವಿದ್ವಾನ್. ವೈ. ನಾಗೇಶಶಾಸ್ತ್ರಿಗಳು 'ಸರ್ವದರ್ಶನ ತೀರ್ಥ' ಬಳ್ಳಾರಿ. ಇವರು ರಚಿಸಿರುವ "ಕರ್ಣಾಟಕ ರಘುವಂಶ" ವನ್ನು ಅತ್ಯಾನಂದದಿಂದ ಓದಿದೆನು. ಒಂದು ಭಾಷೆಯಲ್ಲಿರುವ ಕಾವ್ಯವನ್ನು ಮತ್ತೊಂದು ಭಾಷೆಗೆ ಮೂಲಾರ್ಥವು ಕೆಡದಂತೆ, ಮೂಲಕವಿಯ ಭಾವಕ್ಕೆ ಕುಂದು ಬಾರದಂತೆ ಪರಿವರ್ತಿಸುವುದು ಬಹುಕಠಿಣವು. ಪರಿವರ್ತಿಸುವವರು ಮೂಲಕವಿಯ ಭಾವನೆಯನ್ನು ಚನ್ನಾಗಿ ಮನಗಂಡವರಾಗಿರಬೇಕಲ್ಲದೇ ಸಹಜಕವಿತಾಸಾಮರ್ಥ್ಯವುಳ್ಳವರಾಗಿರಬೇಕು. ಅದರಲ್ಲಿ ಜಗತ್ಪ್ರಸಿದ್ಧವಾದ ಕಾಳಿದಾಸಕವಿಕೃತ "ರಘುವಂಶ" ವನ್ನು ಕನ್ನಡಿಸುಪ್ರವೇಶವಿ ಸಾಧರಣವಾದ ಕೆಲಸವಲ್ಲ. ವೈ. ನಾಗೇಶಶಾಸ್ತ್ರಿಗಳು ಉಭಯಭಾಷಾಪ್ರವೀಣರೂ ಮತ್ತು ಸಹಜಕವಿತಾಸಂಪದವುಳ್ಳವರೂ ಆಗಿದ್ದು ಈಕಷ್ಟಸಾಧ್ಯಕಾರ್ಯವನ್ನು ಜಯಪ್ರದವಾಗಿ ಪೂರೈಸಿ ಕರ್ಣಾಟಕಭಾಷಾಯೋಷಾಮಣಿಗೆ ಒಂದು ಅನರ್ಘ್ಯರತ್ನಾಭರಣವನ್ನು ಅರ್ಪಿಸಿದ್ದಲ್ಲದೇ ಕನ್ನಡವಾಙ್ಮಯಚರಿತ್ರೆಯಲ್ಲಿ ತಮ್ಮನಾಮವು ಚಿರಸ್ಮರಣೀಯವಾಗಿ ಉಳಿಯುವಂತೆ ಮಾಡಿರುವರು. ಈಬಗ್ಗೆ ನಾನು ಅವರಿಗೆ ಧನ್ಯವಾದವನ್ನು ಅರ್ಪಿಸದೇ ಇರಲಾರೆನು. ಅವರು ಬಳ್ಳಾರಿ ನಿವಾಸಿಗಳಿದ್ದುದರಿಂದ ಬಳ್ಳಾರಿಮಂಡಲದ ಕನ್ನಡಿಗರು ವಿಶೇಷ ಗರ್ವಿಸಬೇಕಾಗಿದೆ.

ಪರಿವರ್ತನೆಯು ವಾರ್ಧಿಕಷಟ್ಪದಿಯಲ್ಲಿರುವುದರಿಂದ ಕವಿತಾಲಹರಿಯು ಮಂಜುಳವಾಗಿಯೂ, ನಿರರ್ಗಳವಾಗಿಯೂ ಮತ್ತು ನೈಸರ್ಗಿಕ ಗತಿಯಿಂದ ಪ್ರವಹಿಸಲೂ ಅನುಕೂಲವಾಗಿರುತ್ತದೆ. ಭಾಷಾಶೈಲಿಯಾದರೂ ಆ ಲಹರಿಗನುಗುಣವಾಗಿದ್ದು ಹೃದಯಂಗಮವಾಗಿರುತ್ತದೆ, ಪದಗಳು ಬಹುಮುದ್ದಾಗಿ ಜೋಡಿಸಲ್ಪಟ್ಟಿವೆ, ಸಂಸ್ಕೃತ ಮೂಲಕಾವ್ಯವನ್ನೋದದವರು ಇದೊಂದು ಸ್ವತಂತ್ರಕಾವ್ಯವೆಂದೇ ಭಾವಿಸುವರು. ಇದು ಪರಿವರ್ತನೆಯ ಲಕ್ಷಣವು.

ಈಕಾವ್ಯವು ಕಳಾಶಾಲೆಗಳಲ್ಲಿ ಪಠ್ಯಪುಸ್ತಕವಾಗಿರಲು ಸರ್ವವಿಧದಿಂದಲೂ ಯೋಗ್ಯವಾಗಿರುತ್ತದೆ, ವಿದ್ಯಾಶಾಖಾಧಿಕಾರಿಗಳು ಇಂಥಾಯೋಗ್ಯಗ್ರಂಥಗಳನ್ನು ಪಠ್ಯಪುಸ್ತಕಗಳನ್ನಾಗಿ ನಿಯೋಜಿಸಿದರೆ ಕರ್ಣಾಟಕ ವಾಙ್ಮಯಪ್ರಸಾರಕ್ಕೆ ಉತ್ತೇಜನವನ್ನು ಕೊಟ್ಟಂತಾಗುವುದು.

ಇದೇರೀತಿ, ವೈ. ನಾಗೇಶಶಾಸ್ತ್ರಿಗಳು ಸಂಸ್ಕೃತದಲ್ಲಿರುವ ಮಹಾಕಾವ್ಯಗಳನ್ನು ಕನ್ನಡದಲ್ಲಿ ಭಾಷಾಂತರೀಕರಿಸುವ ಸಂಕಲ್ಪವನ್ನು ಮಾಡಿಕೊಂಡಿದ್ದು, ಈಶನ ಕೃಪೆಯಿಂದ ಇವರ ಸತ್ಸಂಕಲ್ಪವು ಈಡೇರಲೆಂದೂ ಕನ್ನಡಿಗರೆಲ್ಲರೂ ಇವರ ಉದ್ಯಮಕ್ಕೆ ಯೋಗ್ಯಪ್ರೋತ್ಸಾಹವನ್ನು ಕೊಡಲೆಂದೂ ಹಾರೈಸುವೆನು.

ಬಳ್ಳಾರಿ. ⎫ ಟಿ. ಹೆಚ್. ಎಂ. ಸದಾಶಿವಯ್ಯ,
೧—೧೨—೩೨. ⎭ ಎಂ. ಎ., ಬಿ. ಎಲ್.,

---

ಇನ್ನೂ ಕೆಲವು ಮಹನೀಯರ ಅಭಿಪ್ರಾಯಗಳು ಬರತಕ್ಕವಿದ್ದು ಸದ್ಯಕ್ಕೆಬರಲಿಲ್ಲವಾದುದರಿಂದ ಅವು ದ್ವಿತೀಯಮುದ್ರಣದಲ್ಲಿ ಮುದ್ರಿತವಾಗುವವು.

—: ವಂದನೆ :—

ಈ ಅಭಿಪ್ರಾಯಕರ್ತರಿಗೂ ಮುದ್ರಣಕಾಲದಲ್ಲಿ ಪ್ರೂಫುಗಳನ್ನು ತಿದ್ದಿ ಸಹಾಯಮಾಡಿದ ಶ್ರೀಯುತ ಕೆ. ಸಂಜೀವಮೂರ್ತಿ ರಾವು. ವೇ. ಪಿ. ಯಂ. ಸೋಮಶೇಖರಶಾಸ್ತ್ರಿ. ಮೊದಲಾದ ಮಿತ್ರವರ್ಗಕ್ಕೂ ನನ್ನ ಮನಃಪೂರ್ವಕವಾದ ವಂದನೆಗಳನ್ನರ್ಪಿಸುವೆನು.

ಗ್ರಂಥಕರ್ತ.

ಓಂ ತತ್ ಸತ್.

# ಕರ್ನಾಟಕರಘುವಂಶಂ.

## ಪ್ರಥಮಸರ್ಗಂ.

ಸೂ:— ತರಣಿಕುಲಭೂಪಂ ದಿಲೀಪ ನಾತ್ಮಜರಿಲ್ಲ।
ದಿರೆ ಗುರುವಸಿಷ್ಠನಾಶ್ರಮಕೆರಸಿಯೊಡನೆ ತಾಂ।
ತೆರಳ್ದು ನಿಜಸಂತತಿಪ್ರತಿಬಂಧಪರಿಹಾರಮಂ ತಿಳಿದನಾಮುನಿಪನಿಂ॥

ವಾಗರ್ಥಯುಗಳದಂತಾವಗಂ ಸಂಮಿಳಿತ ೧
ರಾಗಿರ್ದು ಭುವನತ್ರಯಕ್ಕೆ ಜನನೀಜನಕ
ರಾಗಿ ರಂಜಿಸುತಿರ್ದ ಪಾರ್ವತೀಪರಮೇಶ್ವರರ ಪಾದಪಂಕಜಕ್ಕೆ॥
ರಾಗದಿಂದೆರಗುವೆಂ ಪರಮಕರುಣಾಚಿತ್ತ
ರಾಗಿ ತಾಮವರೀರ್ವರೆನ್ನ ಮಾನಸಕೆ ಸಲೆ
ವಾಗರ್ಥನಿಕರದಮಲಜ್ಞಾನಮಂ ಕರುಣಿಸುವರೆಂಬ ನಂಬುಗೆಯೊಳು॥

ಎಲ್ಲಿ ಸೂರ್ಯಪ್ರಭವವಂಶಮದು ನೋಡೆ ತಾ ೨
ನೆಲ್ಲಿ ನನ್ನಲ್ಪವಿಷಯದ ಬುದ್ಧಿಯದು ತೆಪ್ಪ
ದಲ್ಲಿ ಮೋಹದೊಳೀರ್ದು ದುಸ್ತರದ ಸಾಗರದ ದಾಂಟಲ್ಕೆಳಸುವೆಂ॥
ಬಲ್ಲ ಕವಿಗಳ ಜಸದ ಬಯಸಿ ನಾಂ ಮೂಢನಿ
ಯಲ್ಲಿ ನಗೆಗೆಡೆಯಪ್ಪೆ ನುನ್ನತರ್ಗೆ ಲಭ್ಯ
ಫುಲ್ಲಸಿತಫಲಕೆ ಕಡುಲೋಭದಿಂ ಕೈಯೆತ್ತಿ ನಿಂದ ವಾಮನನತೆರದಿಂ॥

ಅಂತಲ್ಲದೊಡೆ ಪೂರ್ವಸೂರಿಕೃತವಾಗ್ದ್ವಾರ ೩
ದಾಂತ ತದ್ವಂಶದೊಳ್ ನನ್ನ ಗತಿಯಕ್ಕುಮದು
ತಂತುವಿನಗಮನಮಿರ್ಪೋಲ್ ವಜ್ರದಿಂದಮುತ್ಕೀರ್ಣಮೆನಿಸಿದಮಣಿಯೊಳು॥
ಇಂತೆಂದು ಬಗೆದು ಕವಿವರಕಾಳಿದಾಸನೊಲ
ವಾಂತು ಗೆಯ್ದೀ ರಘುವಂಶಕಾವ್ಯಮಂ
ಸಂತಸದೆ ಕನ್ನಡಿಸುತಿರ್ಪೆ ನನ್ನಲ್ಪಬುದ್ಧಿಗೆ ತಿಳಿದ ಮಾರ್ಗದಂದದಿಂ॥

ಜನನಾದಿಯಿಂದೆ ಶುದ್ಧರ ಫಲಪ್ರಾಪ್ತ್ಯಂತ ೪
ಮೆನಿಪ ಕೃತಿಯುಳ್ಳವರ ಕಡಲುಡಿಗೆಯಾದ ಭೂ
ವನಿತೆಯಧಿನಾಯಕರ ನಾಕಪರ್ಯಂತರಥಪಥದ ನಡೆವವರ ಮತ್ತಂ॥
ಅನುಸರಿಸಿ ವಿಧಿಯನಗ್ನಿಕ್ರಿಯೆಯ ನೆಸಗುವರ
ಮನದಿಷ್ಟವಿತ್ತತಿಥಿಗಳ ನರ್ಚಿಸುವರ ತ
ಪ್ಪನಿತವಕೆ ತಕ್ಕ ದಂಡನನೆಗೆಯ್ವರ ಯಥಾಕಾಲಬೋಧನಶೀಲರ॥

ತ್ಯಾಗಕ್ಕೆ ಧನವ ಗಳಿಸುವರ ಸತ್ಯದ ರಕ್ಷೆ ೫
ಗಾಗಿ ಮಿತವಚನವುಳ್ಳವರ ಕೀರ್ತಿಯ ಕಾಂಕ್ಷೆ
ಗಾಗಿ ವಿಜಯವ ಬಯಸುವರ ಸಂತತಿಯನೆಳಸಿ ಕಾಂತೆಯರ ಕೈವಿಡಿವರ।
ರಾಗದಿಂ ಬಾಲ್ಯದೊಳ್ ವಿದ್ಯೆಯಂ ಕಲಿತವರ
ಭೋಗೇಚ್ಛೆಯಂ ಯೌವನದೆ ತೀರಿಸುವರ ಮು
ಪ್ಪಾಗೆ ಮುನಿವೃತ್ತಿಯಂ ವಿಡಿಯುವರ ಕಡೆಗೊಡಲ ಯೋಗದಿಂ ಸಂತ್ಯಜಿಸುವರ

ಆ ರಘುಕ್ಷಿತಿಪರನ್ವಯವ ಕಥಿಸುವೆನಾಂ ವಿ ೬
ಚಾರಿಸುವೊಡಲ್ಪವಾಗ್ವಿಭವನಾಗಿರ್ದೊಡಂ
ಪ್ರೇರಿಸಿದುದಲ್ತೆ? ತದ್ಗುಣಗಣಂ ನನ್ನ ಕಿವಿದೂರುತೀ ಚಾಪಲಕ್ಕೆ॥
ತೋರಿಸಲ್ಕುಳ್ಳ ಗುಣದೋಷಮಂ ಸಂತರಧಿ
ಕಾರಿಗಳಿದಂ ಕೇಳಲರ್ಹರವರೇ, ನೋಡೆ
ತೋರುಗುವುದಲ್ತೆ? ಹೇಮದ ಶುದ್ಧಿಯಿಲ್ಲವೆಯಶುದ್ಧಿ ತಾಂ ವಹ್ನಿಯಲ್ಲಿ॥

ವೇದಂಗಳಿಗೆ ವಿಲಸದೋಂಕಾರದಂತೆ ತಾ ೭
ನಾದಿನೃಪನೆನಿಸಿ ಭೂಪತಿಗಳಿಗೆ ಬುಧಸೇವ್ಯ
ನಾದ ಮನುವೊಪ್ಪುತಿರ್ದಂ ಭೂತಲಾಗ್ರದೊಳ್ ವೈವಸ್ವತಾಭಿಧಾನಂ।
ಆದೊರೆಯ ಶುದ್ಧಿಯುತವಂಶದೊಳ್ ಶುದ್ಧತರ
ನಾದ ರಾಜೇಂದುವಮೃತಾಂಬುನಿಧಿಯೊಳ್ ಜನನ
ವಾದ ಚಂದ್ರಮನಂತೆ ಜನಿಸಿದಂ ರಂಜಿಪ ದಿಲೀಪನೆಂಬೊಳ್ಪೆಸರಿನಿಂ॥

ಪೇರುರದೆ ವೃಷಭಭುಜಶಿರದೆ ಮತ್ತಂ ಶಾಲ ೮
ಭೂರುಹೋನ್ನತಿಯಿಂದೆ ನಿಡುದೋಳ್ಗಳಿಂದೆ ಗಂ
ಭೀರನಿಜಕರ್ಮಕ್ಷಮಾಂಗನಾಂತಾ ಕ್ಷಾತ್ರಧರ್ಮದಂತೆಸೆಯುತಾತಂ

ಮೇರುಗಿರಿಯಂತೆ ಸರ್ವಾತಿರಿಕ್ತಸ್ಫುರಿತ
ನಾತನುಂ ಸರ್ವತೇಜೋಭಿಭಾವಿಯುಮೆನಿಸಿ
ತೋರುವಾ ಸರ್ವೋನ್ನತಾತ್ಮದಿಂ ಭೂತಲವನಾಕ್ರಮಿಸಿ ಮೆರೆಯುತಿರ್ದಂ॥

ಗಣಿಪೊಡಾಕಾರಸದೃಶಪ್ರಜ್ಞೆ ಯಾಪ್ರಜ್ಞೆ ೯
ಗನುಗುಣಾಗಮ ಮಾಗಮಂಗಳ್ಗೆ ಸದೃಶಮೆಂ
ದೆನಿಸುವಾರಂಭ ಮಾರಂಭಕನುಗುಣಮಪ್ಪ ಫಲಸಿದ್ಧಿಯಾಂತುವುತ್ತಂ॥
ಜನಪತಿಗುಣಂಗಳಿಂ ಭೀಮಕಾಂತಂಗಳಿಂ
ಜನಪನುರೆ ಜಲಜಂತುರತ್ನಂಗಳಿಂದಮಾ
ವನಧಿಯಂತಾಶ್ರಿತರ್ಗನಭಿಭವನೀಯನಾಶ್ರಯಣೀಯ ನೆಂದೆನಿಸಿದಂ॥

ಮನುಕಾಲದಿಂ ನುರಿತು ಬಂದ ಪದ್ಧತಿಯ ಗೆರೆ ೧೦
ಯನಿತುಮಂ ದಾಂಟದಿರ್ಕುಂ ತತ್ಪ್ರಜಾಳಿ ನೆ
ಟ್ಟನೆ ನಡೆಯಿಸುವ ಸಾರಥಿಯ ರಥದ ಚಕ್ರಧಾರಾವಳಿಯ ಮಾಳ್ಕೆಯಿಂದಂ॥
ಜನರೇಳ್ಗೆಯನೆ ಮಾಳ್ಪ ಕತದಿನವರಿಂದಮಾ
ಜನಪಂ ಕರಗ್ರಹಣಮಂ ಮಾಳ್ಪನೊಲ್ಮೆಯಿಂ
ಕೊನೆಗೆ ಸಾಸಿರ್ಮಡಿಯ ಜಲವ ಕುಡಲೆಂದವಂ ತಾಂ ಕೊಳ್ವನಲ್ತೆ? ದಿನಪಂ॥

ಧರಣಿಪಂಗಾತಂಗೆ ತನ್ನ ಪಡೆ ರಾಜೋಪ ೧೧
ಕರಣಮಾತ್ರಮದರ್ಥಸಾಧಕಂಗಳ್ ನೋಳ್ಪೊ
ಡೆರಡೆ ಶಾಸ್ತ್ರದೊಳಕುಂಠಿತಬುದ್ಧಿಯುಂ ಶರಾಸನಕೇರಿಸಿದನೌರ್ವಿಯುಂ॥
ಮರೆಮಾಡಿಕೊಳ್ಳುವಾಕಾರೇಂಗಿತಂಗಳಿಂ
ನೆರೆ ಗುಪ್ತಸದ್ವಿಚಾರಂಗಳಿಂ ಕೂಡಿದಾ
ಮೊರೆಯುಪಾಯಂಗಳ್ ಫಲಾನುಮೇಯಂಗಳಾಪೂರ್ವಸಂಸ್ಕೃತಿಗಳಂತೆ।

ಪೊರೆದ ನಂಗವ ಸಭಯನಾಗಿ, ಸಂಪಾದಿಸಿದ ೧೨
ನಿರವ ಧರ್ಮವನನಾತುರನಾಗಿ, ಗಳಿಸಿದಂ
ಪರಧನವ ಲೋಭವಿರಹಿತನಾಗಿ, ಸೊಗವಡೆದನಾಸಕ್ತಿದೂರನಾಗಿ॥
ಪರಿಲಸಜ್ಜ್ಞಾನದೊಳ್ ಮೌನಮುರುಶಕ್ತಿಯೊಳ್
ನೆರೆ ತಾಳ್ಮೆಯುಂ ದಾನದೊಳ್ ಸುತಿವಿರತಿಯೊಪ್ಪೆ
ನರಪನಾತನೊಳಿಂತು [illegible] ರೋಧದಿಂ ಭ್ರಾತೃಗಳೊಲಿಕುಮ ಗುಣಗಣಂ।

ಖ್ಯಾತನಾ ವಸುಧಾಧಿಪಂ ತಿಳಿದುಕೊಂಡಂ ಪ್ರ
ನೀತವೃಥಚಿತ್ತಳಾದವಳುಮಂ ಸಿರಿಯುಮಂ
ಪ್ರೀತಿಯುಕಳತ್ರರೆಂದಂತೆ· ಪುರಾಂಗನೆಯ ರಧಿಕಜನರಿಂದೊಪ್ಪಿದಂ ತಾಂ||

ಕ್ಷಿತಿನಾಥನಾತ್ಮಾನುರೂಪಳೆಂದೆನಿಸಿದಾ ೧೮
ಸತಿಯಲ್ಲಿ ಕರಮಾತ್ಮಜನ್ಮಲಾಲಸನಾಗು
ತತಿವಿಲಂಬಿತಫಲಮನೋರಥಂಗಳಿನೆನಿತೊ ಕಾಲಮಂ ಕಳೆಯುತಾಗಂ||
ಕ್ಷಿತಿಯ ಗುರುಭಾರಮಂ ನಿಜಭುಜದಿನಿಳುಹಿ ತಾಂ
ಮತಿವಂತರಾದ ಸಚಿವರೊಳಿಟ್ಟು ನಾತ್ಮಸಂ
ಮತಸುಸಂತಾನಾರ್ಥಮುಪ್ಪಸುಷ್ಠಾನಂಗಳಂ ಬಿಡದೆ ಮಾಡಲೆಳಸಿ||

ಬಳಿಕೊಂದು ದಿನದೊಳಾದಂಪತಿಗಳಿರ್ವರುಂ ೧೯
ಸಲೆ ಶುದ್ಧರಾಗಿ ತಾಂ ಪುತ್ರಾಭಿಲಾಷೆಯಿಂ
ಜಲಜಭವನಂ ಸಮರ್ಚಿಸಿ ಗುರುನಿಜಾಶ್ರಮಕೆ ತೆರಳಲನುವಾದರು||
ಮಳೆಗಾಲದಂಬುದದ ವಿದ್ಯುದ್ವಿರಾಸತಂ
ಗಳವೇರುವಂತೆ ತಾವಾರೋಹಣಂಗೆಯ್ದು
ದೊಲವಿಂದೆ ಮಧುರಗಂಭೀರನಿರ್ಘೋಷನಾದದೊಂದು ದಿವ್ಯರಥಮಂ||

ಜನಿಸಬಾರದು ತದಾಶ್ರಮಮನೆಯ್ದುತಿರ್ದ ೨೦
ಮೆಸುತೆ ಪರಿಚರರ ಪರಿಯುತಿಯಿಂದೆ ಬಂದೊಡಂ
ಘನವಾದ ನಿಜತೇಜದಿಂದವರ್ ಬನವನೆಯುಂ ಬೆಳಗಿಸುವಂತೆಸೆದರು||
ಜನಿಯಿಸಿ ಸುಖಸ್ಪರ್ಶಮಂ ಸರ್ಜತರುನಿಚಯ
ಜನಿತಗಂಧದ ನಿತ್ತು ಪುಷ್ಪರೇಣುವ ಸುರಿಸಿ
ವನರಾಜಿಗೆಸಗಿ ನಸುಚಲನಮಂ ಸುಳಿವೆಲರ್ ಸೇವಿಸಿತು ಸಫಲದೊಳವರಂ||

ಧರಣಿಯೊಳ್ ರಥನೇಮಿರವಕೆ ಮೊಗವೆತ್ತಿ ನಿಂ ೨೧
ದಿರುವ ಶಿಖಿಗಳ್ ಧ್ವನಿಪರಾಗಿ ಷಡ್ಜಸ್ವರದೆ
ನೆರೆ ಕೂಗುತಿರ್ಪ ಪ್ರವೃತ್ತ್ಯುದಯಮುಪ್ಪ ಕೇಗುಗಳ ಕೇಳುತಂ ಮುದಮುಂದಿಸುತ್ತುಂ||
ಹರಿದು ನಿಂದತಿಸಮೀಪದೊಳೆ ನಿಜರಥದೊಳೆ
ಪ್ಪಿರುವ ದಿಟ್ಟಿಗಳ ಮೃಗದಂಪತಿಗಳೊಳ್ ಪರ
ಸ್ಪರನೇತ್ರಸಾದೃಶ್ಯಮಂ ನೋಡುತಂ ತೆರಳುತಿರ್ದಾ ದಂಪತಿಗಳ್.

ನಿಲಿಸದೆಯೆ ಕಂಬಮಂ ಕಟ್ಟಿರ್ದ ತೋರಣೋ ೨೨
ಜ್ವಲಮಾಲೆಯಂದದಿಂ ಸಾಲಾಗಿ ಸಂಚರಿಪ
ಕಲರವದ ಸಾರಸವ್ರಜದಿನುನ್ನಮಿತಮುಖರಾಗಿ ಕಿರಿದೆಡೆಗಳಲ್ಲಿ॥
ಸಲೆ ತೆರಳುತವರಿಷ್ಟ ಸಿದ್ಧಿ ಸೂಚಕಮೆನಿಸಿ
ಚಲಿಸುತಿರೆ ಪವನನನುಕೂಲದಿಂ ರಥವಾಜಿ
ಗಳಿನೆಳ್ದ ಧೂಳಿಯಂ ಸೋಂಕದಿರ್ಪಲಕವೇಷ್ಟನರಾಗಿರಂಜಿಸಿದರು॥

ತೆರೆಯ ವಿಕ್ಷೋಭದಿಂದಂ ತಣ್ಪನಾಂತುದಂ ೨೩
ನೆರೆ ತಮ್ಮ ನಿಶ್ವಾಸವನುಕಾರಿಯಪ್ಪುದಂ
ಸರಸಿಗಳೊಳಿರ್ದ ಕಮಲಂಗಳಾಮೋದಮಂ ಸಲವಿನಾಘ್ರಾಣಿಸುತ್ತಂ ॥
ಹರಿಸದಿಂದಾತ್ಮದತ್ತಮೆನಿಪ್ಪ ಯೂಪಭಾ
ಸುರಚಿಹ್ನದಾ ಗ್ರಾಮವೃಂದದೊಳ್ ಯಜ್ವಕುಲ [ವರು॥
ಮುರೆಕೊಡುವಸಫಲಮಾದರ್ಘ್ಯದೊಡವೆರೆದವರಕೆಯುಪಡೆದುಪೋದರವ

ನರುನೆಯ್ಯನಾಗಳೇ ಕಾಸಿದುದ ಕೈಕೊಂಡು ೨೪
ಬರುವ ಹಳ್ಳಿಯ ಗೋಪವೃದ್ಧರಂ ಬಟ್ಟೆಯು
ಲ್ಲಿರುತಿರ್ಪ ವನ್ಯಭೂರುಹಕುಲದ ನಾಮಂಗಳಂ ಕೇಳುತಿಂತುಮುದದಿಂ॥
ತೆರಳುತಿರ್ಪಾ ಶುದ್ಧವೇಷದುಭಯರ್ಗೆ ಹಿಮ
ಪರಿಮುಕ್ತ ಚಿತ್ರಾನಿಶಾಕರರ್ಗೆಂತಂತೆ
ದೊರೆಯೆಯೋಗಮುವನಿರ್ವಚನೀಯಮಪ್ಪಸಂಶೋಭೆಯುಂತಾನಿತ್ತುದು॥

ತೋರಿಸುತ್ತಂ ಕಂಡಕಂಡದ್ಭುತಂಗಳಂ ೨೫
ಚಾರುವರ್ತನನಾ ಬುಧೋಪಮಂ ಪ್ರಿಯಸತಿಗೆ
ವಾರಿಯಂ ಬಂದುದೆನಿತೆಂಬುದಂ ತಿಳಿಯದವನಾಗಿರ್ದನುರ್ವೀಧವಂ॥
ಈರೀತಿಯಿಂದೆ ನಡೆತಂದು ಬಳಲಿರೆ ತನ್ನ
ತೇರಿನಶ್ವಂಗಳನಿತರಲಭ್ಯಕೀರ್ತಿ ತಾಂ
ಸೇರಿದಂ ರಾಣಿಯೊಡಗೂಡಿ ಸಂಜೆಯೊಳಾಶ್ರಮದ ನಿಜಾನ್ವಯದಗುರುವ॥

ಜನನಾಥನೈದ ಸಮಯಕ್ಕಾಶ್ರಮದೊಳಿತರ ೨೬
ವನದಿಂ ಸಮಿತ್ಕುಶಫಲಾಳಿಯಂ ಕೈಕೊಂಡು
ವಿನುತತಾಪಸರೈದಿ ತುಂಬಿದವರದೃಶ್ಯವಹ್ನಿಯುಪಿದಿರ್ಗೊಳೆ ತಮ್ಮನು॥

ತೃಣಧಾನ್ಯಭಾಗಮಂ, ಮೆಲ್ವಕತದಿಂವ ಮೆಲೆ
ವನೆಯ ಬಾಗಿಲ್ಗಡ್ಡ ನಿಂದ ಮೃಗಸಂಕುಲಂ
ಮುನಿಪತ್ನಿಯರ ಮಕ್ಕಳಂತೆ ಶೋಭಿಸುತಿರ್ದುದಾ ಮುನಿಸ್ಥಾನದಲ್ಲಿ॥

ಒಸೆದಾಲವಾಲಯುದಕವ ಕುಡಿವ ಪಕ್ಕಿಗಳ ೨೭
ವಿಸರಕಾಗುಗೆ ಸುವಿಶ್ವಾಸಮೆಂದಲ್ಲಿರದೆ
ಋಷಿಕನ್ಯೆಯರ್ ಸೇಚನಾಂತದೊಳೆ ಬಿಟ್ಟ ಕಿರುಗಿಡುಗಳಿಂಮತ್ತಮಲ್ಲಿ॥
ಬಿಸಿಲೆಲ್ಲ ಪೋಗೆ ರಾಶಿಯಗೆಯ್ದ ತೃಣಧಾನ್ಯ
ವಿಸರದಿಂದೊಪ್ಪುವೆಲೆವನೆಯಂಗಣದೊಳು ಶಯ
ನಿಸಿವಮೃಗಕುಲದಮೆಲ್ಕುಗಳಿಂದೆತವೆವಿರಾಜಿಸಿದುದಾಮುನಿಯಾಶ್ರಮಂ॥

ಜ್ವಲಿತಾಗ್ನಿಗಳ ಸೂಚಿಸುತೆ ವಾಯುವಿಂದೆ ಸಂ ೨೮
ಚಲನಮಂ ಪೊಂದುತಾಹುತಿಗಂಧದಿಂ ತಳ್ತು
ಸುಳಿವ ಪೊಗೆ ಯಾತ್ರವೋನ್ಮುಖರೆನಿಸುವತಿಥಿಗಳ ಪಾವನಂಗೊಳಿಪುದಲ್ಲಿ॥
ಬಳಿಕಾ ನರೇಶ್ವರಂ ಸಾರಥಿಗೆ ಕುದುರೆಗಳ
ಬಳಲಿಕೆಯನಾರಿಸೆಂದಾಣತಿಯನಿತ್ತು ರಥ
ದೊಳಗಿಂದೆ ನಿಜಸತಿಯನಿಳಿಸಿ ತಾನಿಳಿದವಳಕೂಡಿಕೊಂಡೈತಂದನು ॥

ಪರಿರಕ್ಷಕಂ ಶಾಸ್ತ್ರಚಕ್ಷುವುಂ ಪೂಜಾರ್ಹ ೨೯
ನರಸಂಗೆ ಪತ್ನಿಸಹಿತಂಗತಿಥಿಸತ್ಕೃತಿಯ
ವಿರಚಿಸಿವರೈದೆ ವಿಜಿತೇಂದ್ರಿಯರ್ ಸಭ್ಯರುಮೆನಿಪ್ಪ ಮುನಿಗಳ್ಬಳಿಕ್ಕಂ॥
ಧರಣಿಪಂ ಸಂಧ್ಯಾಸುವಿಧಿಯಂತ್ಯದೊಳ್ ಬಳಿಯೊ
ಳಿರುತೆ ಸಂಸೇವಿಸುವರುಂಧತಿಯು ಕೂಡಿರ್ದ
ಗುರುವಂ ವಸಿಷ್ಠನಂ ಸ್ವಾಹಾನ್ವಿತಾಗ್ನಿಯಂತಿರುವನಂ ಕಂಡನೊಲವಿಂ॥

ಅವರೀರ್ವರಡಿಗೆರಗಿದರ್ ರಾಜನುಂ ರಾಣಿ ೩೦
ಯುವರುಭಯರಂ ಗುರುವಸಿಷ್ಠನುಂ ಗುರುಪತ್ನಿ
ತವೆಮೋದವಾಂತು ಗೌರವಿಸಿದರ್ ನಿರುಪಮಾಶೀರ್ವಾದಮುಖ್ಯದಿಂದಂ॥
ತವಿಸಿರೆ ಕೃತಾತಿಥ್ಯಮದು ರಥಕ್ಷೋಭಸಂ
ಭವಪರಿಶ್ರಮವ ನರಸಂಗೆ; ಮುನಿ ಕೇಳ್ದನುರೆ [ರೆಯಾ॥
ತವಕದಿಂಕುಶಲಮಂರಾಜ್ಯದೊಳ್ರಾಜ್ಯಾಶ್ರಮದ ವಿಮಲಮುನಿಯ ದೊ

ಸಮನಂತರಂ ವಿಜಿತರಿಪುಪುರಂ ವಕ್ತೃವರ| ೬೧
ಸಮಿತಾರ್ಥಪತಿ ಭೂಮಿಪತಿ ಯಾ ಅಥರ್ವನಿಧಿ
ಯಮಿರಾಜನೋದಧಿಚಂದ್ರಮನ ಮುಂದೆ ಸಾರವಚನವನಿಂತು ಬಿತ್ತರಿಸಿದಂ
ಸಮನಿಸಿಪುದಪ್ತಿ! ಸಪ್ತಾಂಗದೊಳ್ ಹಿತನೆ! ಕುಶ
ಲಮದು ದೇವತೆಗಳಿಂದಂ ಮನುಜರಿಂದೆಯುಂ
ಸಮನಿಸುವ ನನ್ನ ಸರ್ವಾಪತ್ತುಗಳ ನಿವಾರಕನೆ ನೀನಿರುವಕತದಿಂ॥

ಗುರುವೆ ಸನ್ಮಂತ್ರಕರ್ತೃವೆ! ದೂರದೊಳೆ ರಿಪುವು ೬೨
ನರವ ನಿಗ್ರಹಿಪ ನಿನ್ನಯ ಮಂತ್ರಸ್ತವದಿಂ
ಶರಸನವನಾಂತೊಲಿಕ್ರ್ವಾಂ ಕಂಡಗುರಿಯನಾರಿಸುವನ್ನಯ ಕಣೆಗಳು
ಪರಿಕಿಸೆ ವಿಧಿಯನನುಸರಿಸಿ ನೀನಗ್ನಿಗಳೊ
ಳಿರಿಸಿದ ಹವಿಸ್ಸೆ ವೃಷ್ಟಿಯ ವಿಘಾತದಿ ನೊಣಗು
ತಿರುವಸಸ್ಯಂಗಳಂ ಪೊರೆವ ಮಳೆಯಾಗಿ ಪರಿಣಮಿಸುವುದು ಹೋತೃವರ್ಯ॥

ಇರವೆ ಕೆಡುಕುಗಳೀತಿಬಾಧೆಗೆಡೆಗುಡವಂತೆ ೬೩
ಧರಿಸಿ ಪೂರ್ಣಾಯುಷ್ಯಮಂ ನನ್ನಯ ಪ್ರಜೆಗ
ಳುರೆ ಸುಖದೆ ನೆಲಸಲ್ಕೆ ನಿನ್ನಯಾ ಬ್ರಹ್ಮತೇಜವೆ ಕಾರಣಮದು ನಿಜಮಂ॥
ಗುರುವರನೆ! ಸರಸಿಜೋದ್ಭವಕುಮಾರನೆ! ನೀನು
ನಿರುತ ಪ್ರೀತಿಯಿಂದೆನ್ನ ಶುಭಚಿಂತನಮೊ
ಳಿರೆ ತೊಡಕುಗಳಿಗೆಗುರಿಯಾಗದೆನ್ನಯಸಿರಿಗೆಸಮನಿಸುವುದೆಂತು ಭಂಗಂ

ಆದೊಡೆಲೆ ತಂದೆ! ನಿನ್ನೀ ಸೊಸೆಯೊಳನುರೂಪ ೬೪
ವಾದ ಸಂತಾನರತ್ನವ ಕಾಣದೆನಗೆ ತಾಂ
ಮೋದಮುಂ ಕುಡವು ದೀವಿಗಳನೊಳಕೊಂಡ ಧರೆ ರನ್ನಗಳನಿತ್ತೊಡಂ"
ಆದಪುದು ನನ್ನ ಸಮನಂತರಂ ಪಿಂಡವಿ
ಚ್ಛೇದಮೆಂದರಿದು ಪಿತೃಗಳ್ ತೃಪ್ತಿಯಪ್ಪಂತೆ
ಯಾವಮುಣದಿರ್ದು ನಾನಿತ್ತ ಪಿಂಡವನದಂ ಸಂಗ್ರಹಿಸುತಿರ್ಪರಕ್ಕ॥

ತಿಳಿದು ನನ್ನಿಂ ಮುಂದೆ ದುರ್ಲಭಮದೆಂಬುದಂ ೬೫
ಜಲವ ನಾನಿತ್ತುದಂ ಪೂರ್ವಜರ್ ಸೋಂಕಿ ತಾ [ಗುರುವೆ
ಮೊಳಲ್ದು ಬಿಸುಸುಯ್ಗಳಿಂ ನಸುಗಾವ ವಾರಿಯನದಂ ಕುಡಿಪ್ಪರಾವಗಂ

ಸಲೆ ಗೆಯ್ವ ಜನ್ಮದಿಂದಾಂ ಪೂತನಾದೊಡಂ
ತಳೆಯದೆಯೆ ಸಂತಾನಮಂ ಕಾಂತಿಗೆಟ್ಟಿರ್ಪ
ಬೆಳಗುಕಳ್ತಲೆಗಳಿಂ ತಳ್ತ ಲೋಕಾಲೋಕಭೂಧರದೊಲಾವೆನಲ್ತೆ॥

ಪರತಪೋದಾನಂಗಳಿಂದೊಗೆವ ಪುಣ್ಯದಿಂ ೨೬
ದೊರೆವಪುದು ಪರಲೋಕಸೌಖ್ಯಮೊಂದೇ, ಶುದ್ಧ
ತರವಂಶಭವಸಂತತಿಯದಿಹದ ಪರದ ಸೌಖ್ಯಕ್ಕೆ ನೆಲೆಯೆನಿಪುದಲ್ತೆ॥
ಮರುಕದಿಂ ನೀನೆ ನೀರೆರೆದು ಪೊರೆದಾಶ್ರಮದ
ಕಿರುಗಿಡುವ ಬಂಜೆಯಾದುದ ನೀಕ್ಷಿಪಂತೆವೊಲ್
ನಿರುಕಿಸುತೆ ಸಂತಾನರಹಿತನಾದೆನ್ನನೀಕಳಲದಿರ್ಪೈ ವಿಧಾತ್ರಾ॥

ನೀರಾಟಮಿಲ್ಲದಿರ್ಪರ್ಭಕೆ ಮರ್ಮಸ್ಥಲವಿ ೨೭
ದಾರಕಮೆನಿಪ್ಪ ಬಾಳ್ಗಂಬವಂತೆನಗೆ ತಾಂ
ಘೋರದುಃಖಮನೀವುದಾ ಪಿತರ ರಿಣಮೆಂಬುದದನರಿದುನೋಡು ತಾತಾ॥
ಪಾರಿಸಲ್ಕಿಂತಪ್ಪುದಾರಿಣವನಂತೆ ಸುವಿ
ಚಾರದಿಂ ಮಾಡಲರ್ಹಂ ನೀನೆ ನಿನ್ನ ಕೈ
ಸೇರಿರ್ಪುದಲ್ತೆ ಮನುವಂಶಜರ ಮಹತ್ತ್ವಸ್ವಪಾದ ವಸ್ತುಗಳ ಸಿದ್ಧಿ॥

ಧರಣಿಪದಿಲೀಪನೀರೀತಿಯಿಂ ಬಿನ್ನವಿಸೆ ೨೮
ವರಮುನೀಂದ್ರಂ ಮುಚ್ಚಿ ಕಣ್ಗಳಂ ಧ್ಯಾನದಿಂ
ಮರೆ ಸುಮ್ಮನಿರ್ದನೊಂದುಕ್ಷಣಂ ಸುಸ್ತಿಮಿತದ ಮಹದಾನಂದದಿಂದಂ॥
ಅರಿದು ತಾಂ ಪ್ರಣಿಧಾನದಿಂ ಸಂತತಿಗೆ ಬಂಧ
ಕರಕಾರಣವನಾಗ ಶುದ್ಧಾತ್ಮನಾದ ತ
ದ್ಗುರುಪುಂಗವಂ ಧ್ಯಾನದಂತಮಂ ದಿಲೀಪಂಗೆ ಪೇಳಲುದ್ಯತನಾದನಿಂತು॥

ಅರಸ ಕೇಳ್ ನೀಂ ಪೂರ್ವದಲ್ಲಿ ಸಗ್ಗಕೆ ಪೋಗಿ ೨೯
ಸುರಪತಿಯ ಸೇವೆಯಂಗೆಯ್ದು ಧರೆಗೈತರ್ಪ
ಸರಣಿಯೊಳ್ ಕಲ್ಪವೃಕ್ಷದ ನೆರಳನಾಶ್ರಯಿಸಿಕೊಂಡಿರ್ದಮರಧೇನು॥
ದೊರೆವಪ್ಪುದು ಧರ್ಮಲೋಪಮದೆಂಬ ಭಯದೊಳೀ
ಅರಸಿಯಂ ಸಲೆ ಋತುಸ್ನಾತೆಯಂ ಸ್ಮರಿಸುತಂ
ಬರುವ ನೀಂ ಸತ್ಕರಿಸಲಿಲ್ಲಂ ಪ್ರದಕ್ಷಿಣಕ್ರಿಯೆಗೆ ತೆರಳ್ದ ಸುರಭಿಯಂ

" ನೀನು ನನ್ನಂ ತಿರಸ್ಕೃತಿಗೆಯ್ದುಕತದೆ ಸಂ ೪೦
ತಾನಮಾಗದು ನಿನಗೆ ಮತ್ಸಂತತಿಯೆನಿಪ್ಪ
ಧೇನುವಂ ಪೂಜಿಸದೊ''ಡೆಂದು ತತ್ಸುರಭಿ ನಿನಗಿತ್ತುದೈ ಶಾಪವಂದು॥
ನೀನುಮಾನಿನ್ನಸಾರಥಿಯುಮಾದೊಡಂ ಶಾಪ
ದಾ ನುಡಿಯ ಕೇಳ್ದುದಿಲ್ಲುದ್ದಾಮದಿಗ್ಗಜ
ಸ್ನಾನಕೆಡೆಗೊಟ್ಟ ಬಾಂದೊರೆಯಘೋಷಂಬಪ್ರೋನಲುಲಿಯುಲ್ಲಿಘೋಷಲ್ಲಭಾ॥

ಕಾಮಧೇನುವಿಗೊದಗಿವಪಮಾನವೇ ನಿನ್ನ ೪೧
ಕಾಮಿತಾರ್ಥಕ್ಕೆ ತಡೆಯಾದುದೆಂವರಿ ನೀನು
ಭೂಮಿಪನೆ! ಪೂಜ್ಯಪೂಜಾವ್ಯತಿಕ್ರಮುಮಲ್ತೆ ಮಂಗಳಪ್ರತಿಬಂಧಕಂ॥
ಆಮುಹಿತಸುರಭಿಯಾಗಂ ವರುಣನುರೆ ಮಾಳ್ಪ
ರಾಮಣೀಯಕದೀರ್ಘಸತ್ರಕ್ಕೆ ಹವಿಯ ತಾಂ [ಸುಗುಂ
ಪ್ರೇಮದಿಂ ಕುಡುತೆ ಪಾತಾಳದೊಳ್ ಭುಜಗಪಿಹಿತದ್ವಾರದೊಳ್ ನೆಲ

ವಸುಮತೀಶ್ವರನೆ! ತತ್ಕುಲದೊಳುದಿಸಿದ ಹಸುವ ೪೨
ನೆಸಗಿ ತತ್ಪ್ರತಿನಿಧಿಯುನದನೆ ಸತಿಯೊಡನೆ ಪೂ
ಜಿಸು ಶುಚ್ಯನಾಗಿ ಸಂಪ್ರೀತಿಯಾಂತಾಧೇನು ನಿನಗಿಷ್ಟವೀವುದೆಂದು॥
ಉಸಿರುತಿರೆ ಮುನಿಯನಿತರೊಳೆ ಹೋತ್ರವೆನಿಸುವಾ
ಋಷಿಯ ಹೋಮಾಹುತಿಸುಸಾಧನಂ ತುರುವು ತಾಂ
ಪೆಸರಿಂದೆ ನಂದಿನಿಯನಿಂದ್ಯಮೈತಂದಿತಾನಂದದಿಂದಡವಿಯಿಂದಂ॥

ಪಸೆಯುಲ್ಲಿ ಪೊಳೆವ ನಸು ಬಾಗಿರ್ದ ಬೆಳುಗೂಡ ೪೩
ಲಿನ ಮುತ್ತಿಯಂ ತಳೆದು ತಳಿರ ಕೆಂಪಾಂತ ತುರು
ಮಿನುಗುವ ಸುಧಾಂಶುಕಳೆಯಂತಳೆವಸಂಜೆಯಂತಿರೆಶೋಭಿಸುತ್ತೆಮತ್ತಂ॥
ತನತು ಕರುವಂ ನೋಡೆ ಕೊಡಗೆಚ್ಚಲಿಂ ಸುರಿವ
ಗಣಿಸಲವಭೃತದ ಪರಿಶುದ್ಧಿಯಿಂದಂ ಮಿಗಿಲ
ವೆನಿಪ ನಸು ಬಿಸಿಯಾಂತ ಪಾಲಿಂದಮಾಶ್ರಮಸ ಲವ ಸಿಂಪಿಸುತಮಾಗಂ॥

ವರತೀರ್ಥಜಲವೆ ಪರಿಶುದ್ಧಿಗೈವಂತೆ ನಿಜ ೪೪
ಖುರಪುಟದಿನೆಳ್ದ ಧೂಳಿಯಿನಂತಿಕದೊಳಿರ್ಪ
ಧರಣಿಪನ ತನುವ ಪರಿಪೂತವನೆ ಮಾಡುತ್ತೈತಂದುದಾನಂವದಿಂದಂ॥

ನಿರುಕಿಸಿ ನಿಮಿತ್ತಜ್ಞನಾದಾ ತಪಸ್ವಿಯಾ
ತುರುವ ವರಪುಣ್ಯದರ್ಶನವ ಪೂಜ್ಯನೆನಿಪ್ಪ
ನರನಾಥನಂ ಸಫಲನಿಜಮನೋರಥನನೀಕ್ಷಿಸಿ ಮತ್ತಮಿಂತೆಂದನು॥

ವಸುಧೇಂದ್ರ ನಿನ್ನ ಮನದಿಷ್ಟಸಿದ್ಧಿಯದು ಕೈ ೪೫
ವಶಮಪ್ಪುದಕ್ಕೆ ತಡವಾಗದಿನ್ನೆಂದು ತಿಳಿ
ಪೆಸರೆತ್ತಿದೊಡನೆ ಯಿಾಹೊಸಗೆಯೊಗರದ ಹಸುವೆಸೆಯುತ್ತೈ ತಂದಕತದಿಂ॥
ಮಿಸುಪ ತುರುವಿದರ ಬೆಂಬಿಡದಿರ್ದು ಸಂತತಂ
ಪಸಿವನಡಗಿಸಿಕೊಳುತೆ ಫಲಮೂಲದಿಂದವಮ
ಭ್ಯಸನದಿಂ ವಿದ್ಯೆಯನದೆಂತಂತೆವೋಲಿದಂ ನೀನೊಲಿಸಿಕೊಳ್ಳಲರ್ಹಂ॥

ಈನಂದಿನಿಯು ಪೋಗೆಪೋಗು ನಿಂದೊಡೆನಿಲ್ಲು ೪೬
ತಾನಿರದೆ ಕುಳಿತುಕೊಂಡೊಡೆ ಕುಳಿತುಕೊಳ್ಳು ನೀಂ
ಪಾನೀಯಮಂ ಕುಡಿಯೆಕುಡಿ, ಧರಾಭಾಮಿನೀಪ್ರಾಣಕಾಂತನೆ! ನಿನ್ನಯಾ॥
ಮಾನಿನಿಯುಮುರೆ ಭಕ್ತಿಯಿಂದಮರ್ಚಿಸುತಮಿಾ
ಧೇನುವಂ ಪೋಗುಗಿವರೊಡನೆ ಪ್ರಭಾತದೊಳ್
ತಾನಾಶ್ರಮಾಂತಂಬರಂ ಮತ್ತೆ ಸಂಜೆಯೊಳಿದಿರ್ಗೊಳ್ಗಿದಂ ಸಂತತಂ॥

ಇಂತು ಧೇನುವಿದು ನಿನಗೊಲಿವವರೆಗಂ ಮನ ೪೭
ಶ್ಶಾಂತಿಯಿಂ ಸೇವಿಸುತ್ತಿರು ನಿನ್ನ ವಿಘ್ನಮಳಿ
ವಂತಳೆಗೆ, ಸತ್ಪುತ್ರವಂತರೊಳ್ ಗರುವನಾಗೆಲೆ ನಿನ್ನ ಪಿತನೊಲೆಂದು॥
ಸಂತಸದಿನುಪದೇಶಿಸಿದ ಗುರುವಿನಾಣತಿಯ
ನಂತಾಗಲೆಂದು ನಮಿಸುತೆ ಪರಿಗ್ರಹಿಸಿದಂ
ಕಾಂತೆಯೊಡನಾ ದೇಶಕಾಲಜ್ಞನಾದ ಶಿಷ್ಯಂ ದಿಲೀಪಂ ಪ್ರೀತಿಯಿಂ॥

ಸಮನಂತರಂ ಸತ್ಯಹಿತವಚನಪಂಡಿತಂ ೪೮
ಕಮಲಜಾತನ ಸುತಂ ಗುರುವಸಿಷ್ಠಂ ರಾತ್ರಿ
ಸಮಯದೊಳ್ ನಿದ್ರೆಗಾಣತಿಯಿತ್ತನರಸಂಗೆ ಸಿರುಪಮಶ್ರೀಯುತಂಗೆ॥
ಅಮಿತಂ ತಪಃಸಿದ್ಧಿ ತನಗಿರ್ದೊಡಂ ಮುನಿಪ
ನಮಲಕಲ್ಪಜ್ಞನಾಭೂಪತಿಗೆ ಕುಶದಿಂದೆ
ಸಮೆದ ತಲ್ಪವನೆ ಕಲ್ಪಿಸಿದನಾ ಕಾಲವೇ ವ್ರತಕೆ ಮೊದಲಾಗಲೆಂದು॥

ಸೇರುತಂ ಕುಲಪತಿವಸಿಷ್ಠನೊಲವಿಂ ತನಗೆ ೬೯
ತೋರಿಸಿರ್ದೆಲೆವನೆಯ ಸಲ್ಲಿಕುಶನಿರ್ಮಿತದ
ಚಾರುಶಯನದೊಳ್ಪೈದೆ ಮಲಗುತಂ ಪತ್ನೀದ್ವಿತೀಯಭೂಪಂ ದಿಲೀಪಂ॥
ಧೀರಸುತ ತನ್ಮುನೀಶ್ವರನ ಶಿಷ್ಯರ್ ಮಾಳ್ಪ
ಸಾರಸಿಗಪಾಧ್ಯಯನದಿಂ ತಿಳಿಪಿದವಸಾನ [ಸುಖಮಂ
ಪಾರಜನಿಯಂ ಕಳೆದನಾಶ್ರಮಸ್ಥಾನದೊಳ್ ಪಿರಿಯುತರವನೆಯ

---

# ದ್ವಿ ತೀ ಯ ಸ ರ್ಗ ೦.

ಸೂ:— ಮನುವಂಶಜನ ದಿಲೀಪನ ಸೇವೆಗೊಲಿಯುತಾ
ಮುನಿಚಂದ್ರಮನ ವಸಿಷ್ಠನ ನಂದಿನೀನಾಮ
ವನಘಧೇನುವದು ಸಂತಾನಪ್ರದವ ವರವನಿತ್ತುದಾಭೂಮಿಪಂಗೆ॥

ಬಳಿಕಂ ಪ್ರಭಾತದೊಳ್ ಸತಿಯಿತ್ತಗಂಧಸ ೧
ಲ್ಲಲಿತಮಾಲೆಯಿ ನಲಂಕೃತಿವೆತ್ತ ತುರುವನಾ
ನೆಲಪೆರೆಯನ್ಪೈದೆ ತೆರಳಿಸಿದನಡವಿಗೆ ತಾಯ ಮಲೆಯುಂಡ ಕರುವ ಕಟ್ಟಿ॥
ಒಲಪಿನೊಳಪಾಂಸುಲಾಗ್ರೇಸರಳೆನಿಪ್ಪ ನೃಪ
ಲಲನೆಯಾ ಧೇನುಖುರಪಿನ್ಯಾಸಪೂತಪಾಂ [ಯಿಂದಂ
ಸುಲಪಥದೊಳನುಗಮಿಸಿದಳ್ ಶ್ರುತಿಯನನುಸರಿಸುವಾ ಸ್ಮೃತಿಯುಪಾಳ್ಕೆ

ಧೃತದಯತೋರಮ್ಯನುಂ ಸವಯಸರಸಂ ಮರಳಿ ೨
ಸುತೆ, ಸತಿಯನಲ್ಲಿಂ ಪಯೋಧರೀಭೂತವರ [ದಂ
ಚತುರಂಬುಸಿಧಿಯ ಗೋರೂಪಧರೆಯಪ್ಪಿಳೆಯ ಪೊರೆವಂತೆ ತುರುವಪ್ಪೊರೆ
ವ್ರತಕಾಗಿ ಪಸುಗಾವ ತಾಂ ತನ್ನಯನುಯಾಯಿ
ತತಿಯನಾಶ್ರಮದೊಳೇ ಇರವೇಳ್ದನಾ ನೃಪಂ
ಗಿತರರೇಕಂಗರಕ್ಷೆಗೆ ಮನುಕುಲಕ್ಕೆ ನಿಜತೇಜಮೇ ರಕ್ಷೆಯುಪ್ಪೆ॥

ಸಲಿಸುತೆಳೆವುಲ್ಲ ಕವಳವನೊಡಲ ತುರಿಸುತುಂ ೩
ಸಲೆ ನಿವಾರಿಸುತಮ್ಮೆತರ್ಪ ನೊಳವಿಂದ ತುರು
ವೆಳಸಿವತ್ತಂ ಪೋಗೆ ತನೆಗ್ಗುಮಂತವರ ಸೇವೆಯೊಳ್ ನಿರತನಾಗಿ॥

ನೆಲದೆರೆಯನದು ತೆರಳೆ ತೆರಳೆ ನಿಂದೊಡೆ ನಿಂದು
ಕುಳಿತುಕೊಂಡೊಡೆ ಕುಳಿತು ಮತ್ತಮಾಪಸು ಕುಡಿಯೆ
ಜಲವ ತಾನುಂ ಕುಡಿಯುತಿಂತವರ ನೆಳಲಂತೆ ಬೆಂಬಿಡದೆ ಪೋಗುತಿರ್ದಂ॥

ಇರದೊಡಂ ನೃಪಚಿಹ್ನಮಧಿಕತರತೇಜದಿಂ ೪
ವರುಪುವಾ ನೃಪಶೋಭೆಯಾಂತೆಸೆವನುದ್ವಿಪಂ
ಪೊರದೋರದೆಯೆ ದಾನರೇಖೆಯುಂ ಗೂಢಮದವಾಂತ ಗಜರಾಜನಂತೆ॥
ಕುರುಳನೇರಿಸಿಕಟ್ಟಿ ವನಲತೆಯ ಕುಡಿಗಳಿಂ
ಧರಿಸುತೆದೆಯೇರಿಸಿದ ಬಿಲ್ಲನಾತಂ ಮುನಿಯ [ಯುವಂ
ತುರುವ ಪೊರೆಯುವನೆನದೆ ದುಷ್ಟಜಂತುಗಳ ದಂಡಿಪನೊಲದವಿಯೊಳಲೆ

ಕೆಲದೊಳನುಚರರಿಲ್ಲದಾ ವರುಣಸಮನಪ್ಪ ೫
ನೆಲದೆರೆಯನಿಗೆ ಕೆಲವ ತರುಗಳುನ್ಮದಿತಖಗ
ಕುಲರವದೆ ತಾಂ ಜಯಧ್ವಾನಮಂ ಮಾಳ್ಪವೆಂಬಂತೆತೋರ್ಪ್ಪುಂಬನದೊಳು॥
ಸಲೆ ಮರುತ್ಪ್ರೇರಿತಂಗಳ್ ಬಾಲವಲ್ಲಿಗಳ್
ಬಳಿಯಿರ್ದ ತನ್ಮರುತ್ಸಖತೇಜನೃಪನಮೇ
ಲಲರನುದಿ ಸುರಿಸುಗುಂ ಪುರಕನ್ಯೆಯರ್ ಸುರಿಸುವಾಚಾರಲಾಜದಂತೆ॥

ತಳಿಪ ನಿರ್ಭರಮನಿಜಾಂತಃಕರಣಮದು ನೃಪಂ ೬
ತಳೆದೊಡಂ ಧನುವ ನಾತನ ತನು ಮಯೂರಸಕೆ
ನೆಲೆಯೆಂಬುದಂ ಮೃಗಗಳಾ ಪಡಲನೋಡಿ ನಿಡುಗಣ್ಣ ಸಫಲತೆಯುಮವೆಗುಂ॥
ಎಲರಿರದೆ ತುಂಬಿ ರಂಧ್ರದೊಳುಲಿವ ಕೀಚಕಂ
ಗಳೆ ಸುಷಿರವಾದ್ಯಂಗಳಾಗೆ ಕುಂಜಂಗಳೊಳ್
ನೆಲಸಿ ವನದೇವತೆಗಳುರೆ ಕೀರ್ತಿಸುವ ತನ್ನ ಕೀರ್ತಿಯುಂ ಕೇಳ್ದನರಸಂ॥

ಗಿರಿಚ್ಯುತತುಷಾರದಿಂ ನಾಂದು ತರುಕುಲಪುಷ್ಪ ೭
ಪರಿಮಳವನಾಂತು ಬೀಸುವ ಗಾಳಿ ಸೇವಿಸಿತು
ತೊರೆದಾತಪತ್ರಮುಂ ಬಿಸಿಲಿಂದೆ ತಪ್ತನಾದರಸನಂ ಪ್ರತಪ್ರಾತನಂ॥
ಪೊರೆದನ ತನ್ನೃಪತಿ ಬನಮುಂ ಪುಗೆ ದವಾಗ್ನಿ ಮಳೆ
ಬರದೆ ನಂದಿತು ಫಲಸುಮದ ವೃದ್ಧಿ ಪಿರಿದಾಯ್ತು
ಬೆರಚಿಸದ ಬಾಧೆಯುಂ ಬಡಮಿಗಂಗಳಿಗಧಿಕಬಲಮುಳ್ಳ ಜಂತುತತಿಯುಂ॥

ಪಿರಚಿಸಿ ದಿಗಂತದೊಳ್ ವಿಪುಲಸಂಚಾರದಿಂ ೮
ಪರಿಶುದ್ಧಿಯಂ, ಸಂಜೆಯಾಗೆ ನಿಲಯಕ್ಕೆ ತಾಂ
ಮರಳಿದುದು ಕೆಂದಳಿರಬಣ್ಣದಿಂ ಕಂಗೊಳಿಪ ನಂದಿನಿಯ ನೂನಕಾಂತಿಯುಂ|
ಪರದೇವಪಿತೃತಿಥಿಕಾರ್ಯಾರ್ಥಮೆನಿಸಿದಾ
ತುರುವ ಪಿಂತೆಯೆ ಪೋಗೆ ನೃಪತಿಯುಮನಿಂ ತಳ್ತು
ಮೆರೆದುದಾ ಧೇನು ಸಾಕ್ಷಾತ್ತದು ವಿಧಿಯಿಂದೆ ಕೂಡಿರ್ದ ಶ್ರದ್ಧೆಯಂತೆ||

ಕಿರುವೆಂಚೆಗಳಿನೆಲ್ಲ ಕಿಱುಗಳಿಂ ಮೇಣ್ಣಸತಿ ೯
ತರುಗಳಿಂ ಸೇರ್ದ್ದು ಸೋಗೆಗಳಿಂದೆ ಬಾದ್ವಲದೊ
ಳುರಿ ನೆರೆದ ಮೃಗಗಳಿಂ ತಳ್ತು ಬಾಮುಲವನದ ನೋಡುತ್ತೆ ತಂದವನರಸಂ||
ಪಿರಿದೆನಿಪ ಕೆಚ್ಚಲಿಂ ಪೊರಲಾರದಾ ಗೃಷ್ಟಿ
ಗುರುವಪ್ಪುದಾ ಧೂಪನುಂ ತಪೋವನಕೆ ತಾಂ
ಬರುತಾತ್ಮಚಾರುಗಮನಂಗಳಿನಲಂಕರಿಸಿದರ್ ತದಾಶ್ರಮಮಾರ್ಗಮಂ||

ಗುರುವಿನಾ ತುರುವಿನನುಚರನಂ ವನಾಂತದಿಂ ೧೦
ಬರುವ ಪತಿಯಂ ತಪಧಾರಂಗಿ ಯೆವೆಯಿಕ್ಕದೆಯೆ
ನಿರುಕಿಸಿದಳುಪವಾಸವಾಂತೆಂಬಕಂಗಳಿಂ ಬರೆಸೇದು ಕುಡಿವಳೆನೆ ತಾಂ।
ಸರಣಿಯೊಳ್ ನೃಪನಿಂ ಪುರಸ್ಕೃತಂ ಮುತ್ತವಾ
ಧರಣೀಶಪತ್ನಿಯಿಂ ಸಂಮುಖೀಕೃತ ಮಪ್ಪ
ತುರು ರಾಜಿಸಿದುದವರ ಮಧ್ಯದೊಳ್ ಪಗಲಿರುಳನಡುವಿರ್ಪ ಸಂಜೆಯಂತೆ||

ಅರಿಭಯಂಕರ ದಿಲೀಪಂ ಗುರುತದಧಾರಂಗಿ ೧೧
ಯುರ ಪಾದಕೆರಗಿ, ಸಂಧ್ಯಾವಿಧಿಗಳಂ ನೆರಪಿ
ಮರಳಿ ಪಾಲ್ಗರೆದು ಕುಳಿತಿರ್ದ ತುರುವಂ ಸೇವಿಸಲ್ಕದಂ ಪ್ರೇಮಂ ತಾಗಂ|
ಅರಸಿಯೊಡಗೂಡಿ ಬಲಿದೀಪಂಗಳಂ ಬಳಿಯೊ
ಳಿರಿಸಿ ಕುಳಿತಿರ್ದ್ದ, ಪಸುವದು ಮಲಗೆ ಮಲಗಿ ದಿನ
ಕರನುದಯದಲ್ಲಿ ತಾನೇಳ್ವನನವರತವಾಧೇನುವೇಳ್ವುದಕೆ ಮೊದಲ್||

ಪಲವಿಂದವಿಂತು ಸಂತತಿಗಾಗಿ ನೋಂಪಿಯಂ ೧೨
ತಳೆದು ಸತಿಯೊಡನೆ, ದೀನೋದ್ಧರಣಪರಿಚಿತಂ
ನೆಲವೆರೆಯನಿರೆ ಕಳೆದುವಾಗ ತಾನೇಕವಿಂಶತಿದಿನಂಗಳ್ ಕಾಲದ||

ಬಳಿಕನ್ಯದಿನದೊಳಾತ್ಮಾನುಚರಭಾವಮಂ
ಸಲೆ ತಿಳಿಯಲೆಳಸಿ ಮುನಿಧೇನು ಗಂಗೆಯ ತಡಿಯ
ಬಳಿಯೊಳೆಳೆವುಲ್ಲಿಂದೆ ಕಂಗೊಳಿಸುತಿರ್ಪ ತುಹಿನಾದ್ರಿಗುಹೆಯಂಸೇರ್ದುದು॥

ತುರುವಿದಕೆ ಕೇಡನೆಸವ ಬಗೆಯೊಳಂ ಕ್ರೂರ ೧೩
ತರಮೃಗಂಗಳವೆಂದು ಗಿರಿಕೋಣೆಯೊಳ್ ದಿಟ್ಟ
ಯರಿಸಿವರಸಂ ನೋಡದಂತೆ ಸಿಂಗಂ ಪಾರಿ ಪಿಡಿದುದಾ ಪಯವನಾಗಂ॥
ತುರುವಿನಸಳಲಿನ ಕೂಗು ಗವಿಯ ಪಡಿನುಡಿಯಿಂದೆ
ಪಿರಿದಾಗಿ ದುಃಖಿತಚಿತ್ತೈಷಿಯಾದಾ ನೃಪನ
ಧರಣೀಧರದೊಳಿಟ್ಟ ದಿಟ್ಟಿಯುಂ ಪಗ್ಗದಿಂ ಕಟ್ಟೆಳೆಯುವಂತೆಳೆದುದು॥

ಗಿರಿಯ ಗೈರಿಕರಂಜಿತೋರ್ಧ್ವಪ್ರದೇಶದೊಳ್ ೧೪
ನೆರೆ ಪೂತಲೋಧ್ರತರುವಂ ನೋಳ್ಪವೊಲ್ ಚಾಪ
ಧರನೃಪಂ ಕೆಂಬಣ್ಣದಾಧೇನುಗೆರಗಿರ್ಪ ಕೇಸರಿಯ ಕಂಡನಾಗಂ॥
ಪರಿಗಾಪು, ಶರಣರಕ್ಷಕ ಜಿತವಿಪಕ್ಷನಾ
ನರಪಂ ಪರಾಭವಂ ತನಗಾದುದೆಂದು ಸಂ
ಪರಿಸಲ್ಕೆ ತಕ್ಕ ಪರಿಯಿಂ ಕೊಲಲ್ಕಂಬುವಂ ತೆಗೆಯಲೆಳಸಿದನಿಷುಧಿಯಿಂ॥

ಕೊಲಲೆಳಸಿದಾ ನೃಪನ ಬಲಹಸ್ತದಂಗುಲಿಯ ೧೫
ಬೆಳಗಿನಿಂ ಪೊಳೆವ ಗರಿಯುಳ್ಳ ಶರಪುಂಖದೊಳ್
ಚಲಿಸದೆಯೆ ಸಿಲ್ಕಿದ ನಖಂಗಳಿಂ ಚಿತ್ರದೊಳ್ ಬರೆದಂತೆ ನಿಂದುದಾಗಂ॥
ನೆಲವೆರೆಯನಾತ್ಮಭುಜವಲುಗದಿರೆ ಮುಳಿದು ತಾಂ
ಬಳಿಯಿರ್ಪ ದೋಷಿಗಂಟಿದ ತನ್ನ ತೇಜದಿಂ
ದೊಳಗೆಬೆಂದಂ ನಾಡೆ ಮಂತ್ರೌಷಧಂಗಳಿಂ ಬಲಪಿಳಿದ ಸರ್ಪದಂತೆ॥

ತುರುವ ಪಿಡಿದಿರ್ಪ ಸಿಂಗಮದು ಸತ್ಪಕ್ಷನುಂ ೧೬
ಹರಿಬಲಂ ತನಗಾದಪರಿಗೆ ವಿಸ್ಮಿತನುಮ
ಪ್ಪರಸಂಗೆ ಮತ್ತಮಚ್ಚರಿವುಟ್ಟುವಂತೆ ನರವಚನದಿಂದಿಂತೊರೆದುದು॥
ನರಪ! ಬಳಲದೆ ಸುಮ್ಮನಿರು ಸಾಕು ನನ್ನಮೇ
ಲುರವಣಿಸಿ ನೀನೆಸೆಸುವ ಶರಕೆ ಫಲಮಿಲ್ಲ ತಿಳಿ
ಕಿರುಗಿಡುವ ಕಿಳ್ತೊಗೆವ ಬಲಮುಳ್ಳಮಾರುತಂಗಿರಿಯನಲುಗಿಸಬಲ್ಲುದೇಂ॥

ತಿಳಿ ರಜತಗಿರಿಯಂತೆ ಪೊಳೆವ ವೃಷಭನನೇರ ೧೭
ಲೆಳಪ ಶಿವನಂಘ್ರಿವಿನ್ಯಾಸಪ್ರಸಾದನಿ
ರ್ಮಳಪೃಷ್ಠನಾಂ ನಿಕುಂಬನಸಖಂ ಕುಂಭೋದರಾಖ್ಯನೀಶ್ವರಸೇವಕಂ॥
ಸಲೆ ನಿನ್ನ ಮುಂದೆ ತೋರ್ಪೀದೇವದಾರುವಂ
ನೆಲದೆರೆಯ ನೋಡು ನೀಂ ಗುಹಜನನಿ ತಾಂ ಹೇಮ
ಕಲಶಕುಚದಿಂದೆರೆದ ಪಯಮೀಂಟಿ ಬೆಳೆದುದಂ ಮಗನಂತೆ ಶಂಭುಬಗೆವಂ॥

ಒಂದುದಿನಮೀತರುವ ಮದಗಜಂ ತಿಕ್ಕೆ ಕಟ ೧೮
ದಿಂದೆ ಸಿಗುರೆದ್ದುದಿವರಲ್ಲದಕೆ ಗಿರಿಜೆ ತಾ
ನಂದು ಸೇನಾನಿಯಸುರಾಸ್ತ್ರವಿಕ್ಷತನಾಗೆ ದುಃಖಿಸಿದೊಲಳಲಾಂತಳ್॥
ಅಂದುಮೊದಲಿಲ್ಲಿ ವನಕರಿಗಳಂ ಭಯಗೊಳಿಸ
ಲಿಂದುಧರನೆನಗೆ ಸಿಂಹಾಕೃತಿಯನಿತ್ತು ಬಳಿ
ಸಂದ ಜೀವಿಗಳನೇ ತಿಂದಿರುವುದೆಂಬಾಣತಿಯೊಳೆನ್ನನಿರಿಸಿರ್ಪನು॥

ಪಸಿವನಾಂತೆನಗೆ ಶಿವನಿರ್ದಿಷ್ಟಕಾಲದೊಳ್ ೧೯
ಪಸು ರಕ್ತಪಾರಣೆಗೆ ದೊರೆವತ್ತು ರಾಹುವಿಗೆ
ಸಸಿಯಮೃತಕಳೆಲಬ್ಧವಾದೊಲಿವನುಂಡುನಾಂತೃಪ್ತಿಯಂ ಪಡೆವೆನೀಗಂ॥
ವಸುಧೇಂದ್ರ! ನಾಣುಳಿದು ಪೋಗು ಗುರುವಿಗೆ
ಸಮರ್ಪಿಸಿದೆ ನೀಂ ಶಿಷ್ಯಭಕ್ತಿಯನಸ್ತ್ರಧಾರಿಗಳ
ಜಸವ ಕೆಡಿಸದು ಶಸ್ತ್ರರಕ್ಷಣೆಗಶಕ್ಯಮಾಗಿರೆ ರಕ್ಷಣೀಯವಸ್ತು॥

ಕರಿರಿಪುವಿನೀತೆರದ ಚತುರವಚನವ ಕೇಳಿ ೨೦
ಪುರಮಥನಮಹಿಮೆಯಿಂದಾಂ ಕುಂಠಿತಾಸ್ತ್ರನಾ
ಗಿರುವೆನೆಂದರಿದು ತನ್ನೊಳ್ ಜನಿಸಿದಪಮಾನಮಂ ತೊರೆದನಾಗಳುತ್ತಂ॥
ಸರಳೆಸುಗೆಯೊಳ್ ತನಗಿದೇ ಮೊದಲ ಭಂಗಮೆನಿ
ಸಿರೆ ನೃಪಂ ವಿಫಲಯತ್ನಂ ವಜ್ರಮೋಚನಾ
ತುರದೊಳಭವೇಕ್ಷಣದೆ ನಿಶ್ಚಲಿತನಾದಿಂದ್ರನಂತಾಗಿ ಪೇಳ್ದನಿಂತು॥

ಪ್ರತಿರುದ್ಧಚೇಷ್ಟನಾದಾನುಸಿರಲೆಳಪ ಮಾ ೨೧
ತತಿಹಾಸ್ಯಮಾದೊಡಂ ಹರಭಕ್ತನೇ! ಪ್ರಾಣಿ
ತತಿಯ ಹೃದ್ಗತಸರ್ವಭಾವಮಂ ನೀನರಿವಕತದಿಂದಮನುವನೊರೆವೆನು॥

ಅತಿಪೂಜ್ಯನೆನಗೀ ಚರಾಚರಂಗಳ ಜನಿ
ಸ್ಥಿತಿಮೃತಿಗೆ ಕಾರಣನೆನಿಪ್ಪ ಶಿವನುಂ ಹೋಮ
ಕೃತಿಯ ಗುರುಧನಮಗ್ರವಲ್ಲಿ ನಾಶಿಪುದಿದುಮುಪೇಕ್ಷಿಸಲ್ಕರ್ಹಮಲ್ಲಂ॥

ಆದರಿಂದಮೆನ್ನೊಡಲ ನಿನ್ನುಣಿಸಿಗಾಗಿ ಕೊ ೨೨
ಳ್ವುದಕನುಗ್ರಹಿಸುತಂ ಸಂಜೆ ಬರೆ ಕಳವಳದೊ
ಳಿದಿರ ನೋಳ್ಪೆಳೆಗರುವಿನೀ ತಾಯಿಯಂಬಿಡುವುದೆಂದುಸಿರೆನೃಪತಿಬಳಿಕಂ॥
ಒದಗೆ ನಿಜವಂಷ್ಟ್ರಾಮಯೂಖಂಗಳಿಂ ನಾತ
ಮುದು ಗಿರಿಯ ಗುಹೆಗಳೊಳ್ ಪುದಿದಿರ್ದ ಕತ್ತಲೆಗೆ
ಮುದವನಾರಿಸೇವಕಂ ನಸುನಕ್ಕು ಮತ್ತಮಾಭೂಮಿಪತಿಗಿಂತೆಂದನು॥

ಜಗದೇಕಛತ್ರಾಧಿಪತ್ಯಮುಂ ನವವಯಂ ೨೩
ಬಗೆಗೊಳ್ವ ಸುಂದರಾಂಗಮುಮೆಂಬಿವೆಲ್ಲಮುಂ
ಬಗೆವಡತ್ಯಲ್ಪಫಲಕಾಗಿ ಸಂತ್ಯಜಿಪ ನೀಂ ಮತಿಶೂನ್ಯನಾಗಿ ತೋರ್ಕ್ಕಂ॥
ಮಿಗೆ ಭೂತದಯೆಯ ನೀಂ ತೋರಿಸುವಡೊಂದೆ ತುರು
ವಿಗೆ ಶುಭಮುದಪ್ಪುದೆನಗೀಯೆ ನಿನ್ನೊಡಲ, ಮೇಣ್
ಜಗವನೆಡರಡಸವಂತಾವಗಂ ತಂದೆಯೊಲ್ ಪೊರೆವೆ ಜೀವಿಸೆ ಭೂಮಿಪಾ॥

ತುರುವೊಂದಕಾಗಿ ನಿನ್ನಪರಾಧದಿಂ ಕನ ೨೪
ಲ್ದುರಿ ಜೆಂಕಿಯಾದ ಮುನಿಗಂಜುವೆಯ ನೀಂ ಶಕ್ತ
ನಿರುವೆಕೊಡವಾಲ್ಗರೆವಹಸುವಕೋಟಿಯನಿತ್ತುಮುಳಿಸಿಳಿಸಲಾತಪಸಿಯಾ
ಅರಿದಿದಂ ಸುಖಪರಂಪರೆಯ ಭೋಗಿಪ ನಿನ್ನ
ವರತೇಜವೊಡಲ ರಕ್ಷಿಸು ದೊರೆಯೆ! ಋದ್ಧಿಯಿಂ
ಮೆರೆವರಾಜ್ಯಂ ಭೂತಲಸ್ಪರ್ಶಮಾತ್ರಭಿನ್ನಂ ದೇವಲೋಕಮತ್ತೆ॥

ಪರಿಯಿಂತು ನುಡಿದು ಮೌನವ ಧರಿಸೆ ಗುಹೆಗಳಿಂ ೨೫
ಹೊರಪೊಮ್ಮಿದಾ ಪ್ರತಿಧ್ವನಿಯಿಂದೆ ಗಿರಿರಾಜ
ನಿರದೆ ತಾನುಂ ಸತ್ಕ್ರಿಯಿಂ ತಪರ್ಘನನೆ ಮಗ ಪೇಳ್ವನೆಂಬಂತೆ ತೋರೆ॥
ಧರಣಿಪಂ ಕೇಳ್ದು ಶಂಕರಕಿಂಕರನ ನುಡಿಯ
ತುರು ತಪಾಕ್ರಮಣಕಾತರನೇತ್ರದಿಂ ತನ್ನ
ನಿರುಕಿಸುತ್ತಿರೆ ಪರಾಘಸನಾಗಿ ಮರಳಿದುಂ ತಾಂ ಪೇಳ್ವನೀತೆರದೊಳ್॥

ಕ್ಷತದಿಂದೆ ರಕ್ಷಿಪ್ಪವರಿಂ ಕ್ಷತ್ರಶಬ್ದಮೀ ೩೬
ಕ್ಷಿತಿಯೊಳ್ ಪ್ರಸಿದ್ಧಮಿರೆ ತದ್ವಿರುದ್ಧಕ್ರಿಯಾ
ಯುತನಾದವಂಗಿರುವ ರಾಜ್ಯದಿಂದೇಂ ಮತ್ತಮಾನಿಂದಿತಾಸುವಿಂದೇಂ||
ಯುತಿಗೆ ಕೊಡವಾಲ್ಗರೆವ ಬೇರೆ ಗೋವ್ರಾಗಳನೀ
ಯುತೆ ತತ್ಪ್ರಸಾದಮಂ ಪಡೆಯಲಳವೇಂ ಹರಿಯೆ!
ಸುತಧೇನುವದು ಸುರಭಿಯುಂ ನ್ಯೂನಮಲ್ಲಿದಂ ಶಿವತೇಜದಿಂ ಪಿಡಿದೆನೀಂ||

ಗಣಿಸಲಂತಪ್ಪ ತುರುವಿವ ನೆನ್ನತನುವನು ೩೭
ರ್ಪಣಮಮಾಳ್ಪವಂ ಕೊಟ್ಟು ನಿನ್ನಿಂದೆ ಬಿಡಿಸುವುದೆ
ಘನಧರ್ಮಮಿಂತಾಗೆ ನಿನ್ನುಣಿಸಿಗಂ ಮುನಿಯ ಕಜ್ಜಕ್ಕಮಿಲ್ಲ ಭಂಗಂ||
ಅನುದಿನಂ ಜತನದಿಂ ದೇವದಾರುವ ಕಾವ
ನಿನಗೆ ಪರತಂತ್ರಂಗೆ ತಿಳಿಯುದೇನಾಳು, ರ
ಕ್ಷಣಮಪಾಳ್ಪುದಂ ಕಳಿದು ತಾನೊಡೆಯನಿದಿರಲ್ಲಿ ನೋಡಿಪ್ಪಲ್ಲದೆಂತುನಿಲ್ಗಂ||

ತಿಳಿವೊಡೆನ್ನಂ ವಧ್ಯನಲ್ಲೆಂದು ನೀನೀಗ ೩೮
ಸಲೆ ನನ್ನ ಜಸದ ಮೆಯ್ಯೊಳ್ ಕರುಣಮಂ ತೋರು
ನಿಲದೆ ಕಡೆಗಳಿವ ಮಣ್ಡೊಡಲಲ್ಲಿ ಮದ್ವಿಧದ ಜನಕಾಶೆಯಿಲ್ಲ ನಿಸದಂ||
ಕೆಳೆಗೆ ಸಂಭಾಷಣಂ ಪ್ರಥಮಕಾರಣಮೆಂಬ
ರೆಲೆ ಶಿವಾನುಚರ! ವನದಲ್ಲಿ ಕಲೆತೆಮ್ಮೊಳದು
ನೆಲಸಿತದರಿಂ ಕೆಳೆಯನಾದೆನ್ನ ಬಯಕೆಯಂ ಕೆಡಿಸತಕ್ಕವನಲ್ಲನೀಂ||

ಅಂತಾಗಲೆಂದೊರೆದ ಹರಿಗೆ ಸದ್ಯದೊಳೆ ಭೂ ೩೯
ಕಾಂತಂ ವಿಮುಕ್ತಭುಜಬಂಧನೆನಿಸಿರ್ದು ತಾಂ
ಸಂತ್ಯಜಿಸುತಸ್ತ್ರಮಂ ಮಾಂಸಪಿಂಡದ ಮಾಳ್ಕೆಯಿಂ ತನ್ನ ತನುವೀಯುತೆ||
ಸಂತಸದೆ ಸಿಂಗದ ಭಯಂಕರ ನಿಪಾತಮಂ
ತಾಂ ತಳೆಯಲೆಳಸಿ ತಲೆವಾಗಿದಾತನ ಮೇಲ
ನಂತವಿದ್ಯಾಧರಸುಕರಮುಕ್ತಸುಮವೃಷ್ಟಿಪತನಮಾಯ್ತಾಕ್ಷಣದೊಳು||

ತರುಳ! ನೀನೆದ್ದು ನಿಲ್ಲೆಂಬ ಸವಿನುಡಿಗೇಳು ೪೦
ತರಸನಿರವೆತ್ತು ನಿಂದಿದಿರಲ್ಲಿ ಮೊಲೆವಾಲ
ಸುರಿವ ನಿಜಜನನಿಯಂತಿರ್ಪ ಗೋವಂ ಕಂಡು ಕೇಸರಿಯ ಕಾಣದಿರ್ದಂ||

ಬೆಱಗಾಗೆ, ತುಱುವಿಂತು ನುಡಿದುದೆಲೆಸಾಧು ನಾಂ
ವಿರಚಿಸುತೆ ಮಾಯೆಯಂ ನಿನ್ನಂ ಪರೀಕ್ಷಿಸಿದೆ
ನಿರದುಮುನಿಮಹಿಮೆಯಿಂದೆನಗೆಯುಮಭೀತಿಯುಂಮತ್ತಿನವರೇಗೆಯ್ವರು।

ಗರುವಿನೊಳ್ ಭಕ್ತಿಯುಂ ಸನ್ನೀತಿಕರುಣಮುಂ ೩೧
ಮೆಱೆವ ನಿನಗೊಲಿದೆನೆಲೆಮಗನೆ ವರಮುಂ ಬೇಡು
ಬರಿಯ ಪಾಲ್ಗಱೆವ ತುರುವಲ್ಲ ಪ್ರಸಾದದಿಂ ಕಾಮದುಘೆಯೆಂದೆನ್ನನು॥
ಅಱಿಯೆಂದು ಪಸು ಪೇಳೆ ಸನ್ಮಾನಿತಾರ್ಥಿ ನಿಜ
ಕರಸಮಾರ್ಜಿತವೀರಶಬ್ದನುಮೆನಿಪ್ಪ ನೃಪ
ನೆಱೆದನುರೆ ಕೈಮುಗಿದು ಕುಲಕೀರ್ತಿಗೆಱೆಯನಂಸುತನಂಸುದಕ್ಷಿಣೆಯೊಳು॥

ಮುನಿಧೇನುವಂತಾಗಲೆಂದು ಸಂತತಿಗೆಳಸ ೩೨
ಜನಪತಿಗೆ ವರಮಿತ್ತು ಮತ್ತಮೆಲೆಮಗನೆ ಸ
ಸ್ನಿನಿವಾಲ ಕರೆದು ಭುಂಜಿಸು ನೀನು ಪತ್ರಕೃತಪಾತ್ರೆಯಲ್ಲೆಂದು ಪೇಳ್॥
ಜನನಿ! ಕರುವೀಂಟೆ ಮೇಣ್ ಹೋಮಮುಂಗೆಯ್ದುಳಿದು
ದನೆ ನಿನ್ನ ಪಯದ ಸುರ್ವಿಯ ಷಷ್ಠಭಾಗಮೊಂ
ದನೆಕೊಳ್ವತೆರದಿಂದೆಕೊಂಡು ಮುನಿಯಾಜ್ಞೆಯಿಂದದನೀಂಟಲೆಳಸಿರ್ದನು॥

ಧರಣೀಶನಿಂತು ಬಿನ್ನವಿಸೆ ಕಡುನಲ್ಮೆಯಂ ೩೩
ಧರಿಸುತೆ ವಸಿಷ್ಠನಂದಿನಿಯಾತನೊಡಗೊಂಡು
ವರತುಹಿನಗಿರಿಕುಕ್ಷಿಯಿಂದಮುಶ್ರಮದೊಳೈತಂದುದಾ ಆಶ್ರಮಕ್ಕೆ॥
ನೆರೆತನ್ನ ಹರ್ಷಭಾವಮೆ ಸೂಚಿಸಿರೆ ಋಷಿಯ
ತುರುಗೆಯ್ದನುಗ್ರಹವನಾಪ್ರಸನ್ನೇಂದುಮುಖ
ನರಸುಪುನರುಕ್ತಿಯಂತಿರ್ದನುಡಿಯಿಂದದಂಮುನಿ ಗರುಪಿಸತಿಗಮೊರೆದಂ॥

ಧರಣಿಪಂ ಕರುವೀಂಟೆ ಹವನಮುಂಗೆಯ್ದುಮುಳಿ ೩೪
ದಿರುವ ನಂದಿನಿಯ ಪಾಲಂ ಗುರುವಿನನುಮತಿಯ
ನುರೆ ಪೊಂದಿ ನಲ್ಮೆಯಿಂಕುಡಿದನಾಮೂರ್ತಸಿತಕೀರ್ತಿಯಂ ಕುಡಿವಂತಿರ್॥
ಮರುದಿವಸದುದಯದೊಳ್ ವ್ರತಭೋಜನಾಂತದೊಳ್
ವರವಸಿಷ್ಠಂ ಪ್ರಯಾಣದ ಪರಕೆಗಳನಿತ್ತು
ಹರುಷದಿಂದಾ ರಾಜದಂಪತಿಗಳಂ ತಮ್ಮ ಪಟ್ಟಣಕೆ ಬೀಳ್ಕೊಟ್ಟನು॥

ಒಲವಿಂದೆ ಬಲವಂದು ಹುತಹೋಮವಹ್ನಿಯಂ ೭೫
ಬಳಿಕಂ ತಪಸ್ವಿಯಂ ತತ್ಸತಿಯುಮಂ ವತ್ಸ
ಮಿಳಿತನಂದಿನಿಯುಮಂ ನಮಿಸಸನ್ಮಂಗಳೋದ್ವೃತ್ತ ಭಾಸಂ ದಿಲೀಪಂ॥
ಸಲೆ ಕಿವಿಗೆ ಸಲವೀವ ದನಿಯಿಂದ ಕೂಡಿ ಮೇಣ್
ತಳೆಯದುದ್ಘಾತಮಂ ಸುಖವೀವ ರಥದಲ್ಲಿ
ಫಲಯುಕ್ತನಿಜಮನೋರಥದಲ್ಲಿ ಪೋಪಂತೆ ಪೋದಂ ಸುಪತ್ನಿಯೊಡನೆ॥

ಜನಿತದರ್ಶನಸಮುತ್ಕಂಠನುಮದರ್ಶನದೆ, ೭೬
ಜನಿತದೇಹಕ್ಷಯಂ ತಾಂ ಪ್ರಜಾರ್ಥವ್ರತದಿ
ನೆನಿಪನ ನವೋದಯನ ನೃಪನ ಚಂದಿರನನೆಂತಂತೆ ಪೊಳ್ ಪ್ರಜೆಗಳೆಲ್ಲಂ।
ತಣಿಯದಕ್ಷಿಗಳಿಂದೆ ನೋಡುತಂ ನುತಿಸೆ ಸುರ
ಪನ ವೈಭವದೆ ಕೇತನಾದಿಭೂಷಿತನಗರಿ
ಯನು ಪೊಕ್ಕುಶೇಷಸಮಭುಜಬಲದಿನಾಂತನಾತಂ ಮತ್ತೆ ಧಾರಿಣಿಯ ಭಾರಮಂ

ಸಮನಂತರದೊಳಂತರಿಕ್ಷಮತ್ರಿಯ ನೇತ್ರ ೭೭
ಸಮುದಿತಜ್ಯೋತಿಯಂ ಸುರತರಂಗಿಣಿ ಮತ್ತ
ಮುಮಳಾಗ್ನಿನಿಕ್ಷಿಪ್ತಮುಪ್ಪಗೌರೀಪತಿಯ ತೇಜಮಂ ಧರಿಸಂತಿರೆ
ಸುಮಹಿತರೆನಿಪ್ಪಷ್ಟಲೋಕಪಾಲರ್ಕಳಾ
ರಮಣೀಯಕಾಂತಿಗಳನೊಳಕೊಂಡ ಗರ್ಭಮಂ
ಕಮಲಸಖವಂಶವರ್ಧನಮನುನುರೆ ಧರಿಸಿ ಮೆರೆದಳ್ ದಿಲೀಪನ ಪತ್ನಿಯುಂ॥

---

# ತೃತೀಯ ಸರ್ಗಂ.

ಸೂ:— ತುರಗಮೇಧತ ತುರಂಗಮುವನಪಹರಿಸಿದ
ಸುರಪನಂ ಕದನದೊಳ್ ಮೆಟ್ಟಿಸಿದ ರಘುವೆಂಬ
ವರಕುಮಾರಂಗೆ ರಾಜ್ಯಾಭಿಷೇಕವನೆಸಗಿದಂ ದಿಲೀಪಾಸನೇಶಂ॥

ಬಳಿಕಂ ದಿಲೀಪನ ಫಲೋನ್ಮುಖಮನೋರಥವ
ಕೆಳದಿಯರ ಕಣ್ಗೆ ಕೌಮುದಿಯುತ್ಸವವ ದಿನಪ
ಕುಲಸಂತತಿಯ ನಿದಾನವ ಗರ್ಭಲಕ್ಷಣವ ಪಡೆದೆಸೆದವಳರಸಿ ಮತ್ತಂ॥
ತಳೆದು, ಸೊರಗಿದ ತನುಗೆ ತಕ್ಕ ಮಿತಭೂಷಣವ
ಲಲನೆ ತಾಂ ಲೋಧ್ರಸಿತವದನೆಯೊಪ್ಪಿದಳು ನಸು
ಪೊಳೆವ ಸಸಿಯಿಂ ವಿರಳತಾರಕೆಗಳಿಂ ತಳ್ತ ಪೊಕ್ತರೆಯ ರಾತ್ರಿಯಂತೆ॥

ಕಳೆಯೆ ಬೇಸಗೆ ಮೇಘಜಿಂಮುಸಿಕ್ತವ ವನಾ ೭
ವಳಿಯ ಪಲ್ವಲವನಾಘ್ರಾಣಿಸುವ ಕರಿಯಂತೆ
ನೆಲದೆರೆಯನೇಕಾಂತದಲ್ಲವಳ ಮೃತ್ಸುರಭಿಮುಖವ ಮೂಸಿಸಿ ತಣಿಯುಸು;
ನಲವಿಂದಮಿಂದ್ರನಾ ದಿವವನೆಂತಂತೆ ತಾ
ನಿಳೆಯುಂದಿಗಂತವಿಶ್ರಾಂತರಥನಿಜಸುತಂ
ಸಲೆ ಭುಂಜಿಪ್ಪುವನರಿದಳೆನೆ ಮೊದಲೆ ಮಣ್ಡಿಂಬಳುಳಿದಸ್ತುರುಚಿಯುನವಳು॥

ತಿಳಿಸಳೆನಗಿನಿತಾದೊಡಂ ಸುದಕ್ಷಿಣೆ ನಾಣ್ಚಿ ೩
ತೆಳಸಿದುದನವಳಾವುದಂ ಬಯುಸುತಿಪಳೆಂದು
ಕೆಳದಿಯರ ಕೇಳುವಂ ತಾಂ ಪ್ರತಿಕ್ಷಣದೊಳಾಭೂಕಾಂತನಾದರದೊಳು॥
ತಳೆದು ದೋಹದ ದುಃಖಶೀಲತೆಯನಾ ರಾಣಿ
ತಳುವದಿಚ್ಛಿಸಿದುದೆಲ್ಲನ ಪೊಂದಿದಳ್ ಸಗ್ಗ
ದೊಳಮಿಷ್ಟವಸ್ತುವಿರೆ ಪಿರಿದಲ್ಲಮುಲ್ಲ? ವಿಲ್ಗೊಳೆ ಕೈಯೊಳಾನೃಪತಿಗೆ

ದಿನದಿನಕೆ ಸವೆಯೆ ಬಯಕೆಗಳವಯವವ ವೃದ್ಧಿ ೪
ಜನಿಸುತಿರೆ ತತ್ಸುದಕ್ಷಿಣೆಗವಳ್ ರಂಜಿಸಿದ [ತೆ॥
ಕೊಣಗಿದೆಲೆಗಳ್ ಬಿದ್ದು ಪೋಗೆ ಬಗೆಗೊಳ್ವ ಪೊಸವಳೆರಾಂತ ಬಳ್ಳಿಯುಂ
ದಿನಮಿರವೆ ಗಳಿತಮಾಗಲ್ಕವಳ ಪೀವರ
ಸ್ತನಯುಗ್ಮ ಮಾನೀಲಚೂಚುಕಂ ಬಳಸಿದಳಿ [ಕುಳಂ
ಗಣದಿಂದೆ ತಳ್ತ ಸುಂದರಕಮಳಮುಕುಳಯುಗಳದ ಸಿರಿಯ ಪಳಿಯುತಿ

ವರಗರ್ಭಗತನಿಧಿಯ ಧರೆಯಂತೆ ಸುತ್ತನುಂ ೫
ತರಲೀನಪಾವಕದ ಶಮಿಯಂತೆ ಜಲನನೊಳ
ಗಿರಿಸಿಕೊಂಡಾ ಸರಸ್ವತಿವೆಸರನದಿಯಂತೆ ಬಸುರಾಂತ ಸತಿಯೆಸೆದಿರೆ।

ಅಱಿದಿದಂ ತತ್ಪ್ರಿಯಾಸ್ನೇಹಕಂ ಚಾಗಕಂ
ವರಭುಜಾರ್ಜಿತದಿಗಂತಶ್ರೀಗ ಮೊಲ್ಮೆಗಂ
ದೊರೆಯಾದ ಪುಂಸವನಮುಖ್ಯಕ್ರಿಯಂಗಳಂ ಸಕ್ರಮದೆ ಗೆಯ್ದನರಸಂ ||

ದಿಗಧಿಪಾಂಶಾನುಗತಗರ್ಭಭರದಿಂದೆ ಗ ೬
ದ್ದುಗೆಯಿನತಿಯತ್ನದಿಂದೆಳ್ದು ತರಳಾಕ್ಷಿ ಕರ [ಳು||
ಯುಗವನೊಯ್ಯನೆ ಜೋಡಿಸುತೆ ಬಳಿಗೆ ಬಂದ ಪತಿಗುಪಚರಿಸಿ ಸಲವೀವ
ನೆಗಳೆ, ಗರ್ಭದ ಪೋಷಣವ ತಚ್ಚಿಕಿತ್ಸೆಯಂ
ಮಿಗೆ ಬಲ್ಲ ಹಿತವೈದ್ಯರುರೆ ಮುಗಿಲನೊಳಕೊಂಡ [ನರಸಂ
ಗಗನಮಂ ಕಾಲದೊಳ್ನೋಳ್ಪೊಲಾ ಪ್ರಸವೋನ್ಮುಖಿಯ ನೋಡುತಿರ್ದ

ಬಳಿಕಮಿನನಿಂ ಕೂಡದೈದುಚ್ಚಗಗ್ರಹಂ ೭
ಗಳಪಿರ್ದ ಶುಭಸಮಯದೊಳ್ ಪುತ್ರನಂ ಸುರಪ
ಲಲನೆಗೆಣೆಯಾದರಸಿ ಪೆತ್ತಳರ್ಥವ ಪಡೆವವೊಲ್ ತ್ರಿಸಾಧನಶಕ್ತ್ರಯು||
ಸುಳಿದುದು ಸುಖಾನಿಲಂ ದೆಸೆಗಳ್ ಪ್ರಸನ್ನತೆಯ
ತಳೆದವನಲಂ ಬಲಕೆ ತಿರುಗಿ ಹವಿಗೊಂಡನಾ ಲ್ತಿಂ
ಗಳೆ ಶುಭದ ಚಿಹ್ನಮಿಂತಾಯ್ತು ಮಹಿಮರ ಜನನಮಭ್ಯುದಯಕಾರಿಯ

ಸೂತಿಕಾಲಯಶಯ್ಯಮಂ ಬಳಿಸಿದಾ ಸುತನು ೮
ಜಾತನುರುತೇಜದಿಂದಂ ಕಾಂತಿಗುಂದಿದಾ [ವು||
ಜ್ಯೋತಿಗಳ್ನಟ್ಟಿರುಳೊಳೇ ಚಿತ್ರದೊಳ್ಬರೆದ ದೀಪಂಗಳೊಲ್ ತೋರ್ದ
ಆತನಯಜನನಮೆಂಬಮೃತಸಮವಾರ್ತೆಯಂ
ಪ್ರೀತಿಯಿಂ ಪೇಳ್ದ ಶುದ್ಧಾಂತಸೇವಕಜನ [ಗಂ||
ವ್ರಾತಕ್ಕದೇಯಮಾಯ್ತಾದೊರೆಯ ಧವಳಾತಪತ್ರಮುಂ ಚಾಮರಯು

ಸುಂದರಸುತಾಸ್ಯಮಂ ನಿರ್ವಾತಕಮಲನಿ ೯
ಷ್ಪಂದನೇತ್ರದೊಳೀಕ್ಷಿಪರಸನತಿಸಂತೋಷ
ಮಿಂದುದರ್ಶನವಾಂತ ಶರಧಿಯ ಮಹಾಪೂರದಂತೆ ಮೇಲ್ವರಿದುದಾಗಂ||
ನಂದನನ ಜಾತಕರ್ಮವ ತಪೋವನದಿಂದೆ
ಬಂದ ತಾಪಸಪುರೋಹಿತನೆಸಗೆ ಮಿಗೆ ಸಾಣ
ದಿಂದೆ ಸಂಸ್ಕರಿಸಿರ್ಪ ಗಣಿಯ ಮಣಿಯಂತೆಸೆದನಾ ದಿಲೀಪಾತ್ಮಜಾತಂ||

ಗಣಿಕೆಯರ ಸಂತೋಷನೃತ್ಯಂಗಳೊಡನೆ ಕಿವಿ ೧೮
ಗಿನಿದೀವ ಮಂಗಳಸುವಾದ್ಯಸ್ವನಂಗಳಾ
ವಿಸುತಮಾಗಧಿಪತಿಯ ಭವನದೊಳೆಅಲ್ಲದೆಸುರಾಧ್ವದೊಳಮುಂಟಾದವು||
ತನಯಜನನಾನಂದಸಮಯದೊಳ್ ಬಂಧಮೋ
ಚನವನೆಸಗಲ್ಕೆ ಸೆರೆಯುಲ್ಲಾರುಮಿಲ್ಲದಿರೆ
ಜನಪಾಲಕಂ ತಾನೆ ತನ್ನ ಪಿತೃಋಣಬಂಧಮೋಚನವನೆಸಗಿಕೊಂಡಂ||

ಘನಶಾಸ್ತ್ರಪಾರಗಂ ಮತ್ತಮಾಹವದೊಳರಿ ೧೧
ಗಣದಂತಗಾಮಿಯಾಗುವನೆಂದು ತನುಜಂಗೆ
ಜನನಾಥನರ್ಥಜ್ಞನರಸಿ ಗಮಸಾರ್ಥಧಾತುವನೆ, ರಘುನಾಮವಿಟ್ಟಂ||
ಜನಕನ ಸಮಗ್ರವೈಭವನ ಪ್ರಯತ್ನದಿಂ
ದಿನದಿನಕೆ ಸುಂದರಾವಯುವದಿಂ ವರ್ಧಿಪಂ
ತನುಭವಂ ಸೂರ್ಯಕಿರಣಾನುಪ್ರವೇಶದಿಂ ಬಳೆಯುವೆಳೆವೆರೆಯತೆರದಿಂ||

ಶಿವೆಯುಮೀಶ್ವರನೆಂತು ಗುಹನೊಳಿಂ,ದ್ರಾಣಿಯುಂ ೧೨
ದಿವಿಜೇಂದ್ರನೆಂತಾ ಜಯಂತನೊಳ್ ತಾಮಂತೆ
ಕುವರನೊಳ್ತತ್ಸದೃಶನೊಳ್ತತ್ಸಮಾನನೃಪದಂಪತಿಗಳಾಂಪರೊಲವಂ||
ಅವರೀರ್ವರನ್ಯೋನ್ಯಸುಪ್ರೇಮಮಾತನೂ
ಭವನಿಂದಮೋರ್ವನಿಂ ಭಾಗಮಂ ಪೊಂದಿಯುಂ
ತವೆವರ್ಧಿಸಿದುದೋರ್ವರಲ್ಲೋರ್ವರಿಗೆಕೋಕಮಿಥುನದೊಳ್ ಬಳೆವತೆರದಿಂ||

ತನುಭವಂ ದಾದಿ ತಾಂ ಪ್ರಥಮದೊಳ್ ಪೇಳ್ದ ಮಾ ೧೩
ತನೆ ನುಡಿದು ತತ್ಕರಾಂಗುಲಿವಿಡಿದು ನಡೆಯುತಂ
ತನಗಿತ್ತ ಶಿಕ್ಷಣದೆ ನಮ್ರತೆಯನಾಂತು ಜನಕಂಗಿತ್ತನಾನಂದಮಂ||
ತನುಯೋಗಸುಖದೆ ಮೆಯ್ಯಮೃತವರ್ಷಮನೆ ಸಂ
ಜನಿಪ ಮಗನಂ ತೊಡೆಯೊಳ್ಳಿದೆ ಕುಳ್ಳಿರಿಸಿ ಕ
ಣ್ಗೊನೆಗಳಂ ಮುಚ್ಚಿಸುತಸಂಸ್ಪರ್ಶದಿನಿದನನುಭವಿಸಿದಂ ಚಿರಮಾನ್ಯಪಂ||

ಸರಸಿಜಭವಂ ತನ್ನ ಸತ್ವಗುಣಮೂರ್ತಿಯಿಂ ೧೪
ಪರಿರಕ್ಷಿತಂ ಸೃಷ್ಟಿಯೆಂದರಿವವೊಲ್ ಸ್ಥಿತೀ
ಶ್ವರದಿಲೀಪಂ ರಘುಕುಮಾರನಿಂ ಪಾಲಿತಂ ತನ್ನ ಕುಲಮೆಂದು ಬಗೆದಂ||

ಅರಸುಗುವರಂ ತನಗೆ ಚೌಲವಿಧಿಯಾಗೆ ಸಖ
ವರರೆನಿಪ ಚಲಶಿಖಂಡಕಸಚಿವಸುತರೊಡನೆ
ಭರದೆಪೊಕ್ಕಂವಾಙ್ಮಯಾಂಬುಧಿಯನಕ್ಷರಪರಿಜ್ಞಾನನದಿಯ ಮುಖದಿಂ||

ಬಳಿಕಮುಪನೀತರಘುವಂ ಗುರುವಿಧೇಯನಂ ೧೫
ಸಲೆ ಶಿಕ್ಷೆಗೆಯ್ಯೆ ಸುಜ್ಞರ್, ಬಂಜೆತನವ ತಾಂ
ತಳೆದುದಿಲ್ಲವರ ಯತ್ನಂ ಪಾತ್ರವಸ್ತುವೊಳ್ ಕ್ರಿಯೆ ಸಫಲಮಪ್ಪುದಲ್ತೆ?
ಜಲಜಾಪ್ತನನಿಲಗತಿಯಂ ಮಿರ್ದ ನಿಜಹಯಂ
ಗಳಿನ್ನೈದೆ ದೆಸೆಗಳಂ ದಾಂಟುವೊಲ್ ತಾಂ ಚತು
ರ್ಜಲಧಿಸಮವಿದ್ಯಾಚತುಷ್ಟಯವ ದಾಂಟಿದಂ ಧೀಗುಣಂಗಳಿನಾಸುತಂ||

ತಳೆದು ಪರಿಶುದ್ಧರುರುಚರ್ಮಮಂ ರಘು ಬಿಡದೆ ೧೬
ಕಲಿತನುರೆ ತಂದೆಯಿಂದಮೆ ಸಕಲಮಂತ್ರಾಸ್ತ್ರ
ಕಲೆಯ, ತಜ್ಜನಕನನುಪಮನೃಪನುಮನುಪಮಿತಧನ್ವಿಯಾಗಿರ್ದನಲ್ತೆ?
ಎಳೆಗರು ಮಹೋಕ್ಷಭಾವವ ಪೊಂದಿದಂತೆವೊಲ್
ಕಲಭಂ ಕರೀಂದ್ರತ್ವವಾಂತವೊಲ್ ಬಾಲ್ಯಮಂ
ಕಳೆದು ತಾರುಣ್ಯಕೆಡೆಗೊಟ್ಟ ಗಂಭೀರವರತನುವನವನಾಂತು ಮೆರೆದಂ||

ತರುವಾಯದೊಳ್ ಪಿತಂ ಗೊದಾನವಿಧಿಯನಂ ೧೭
ತರದೊಳಾ ರಘುಗೆ ಲಗ್ನವನೆಸಗೆ ತತ್ಪ್ರಿಯಂ
ಬೆರಸು ನೃಪಸುತೆಯರೊಪ್ಪಿದರಿಂದುವಿಂ ತಳ್ತದಕ್ಷತನುಭವೆಯರಂತೆ|
ಹರೆಯದೊಳ್ ಯುಗದೀರ್ಘಭುಜದೆ ವರಬಲದೆ, ಪಟು
ತರಗಲದೆ ಮೇಣ್ ಕವಾಟೋರುಸ್ಥಲದೆ ಕೂಡಿ
ಮೆರೆವತನುವಿಂತಂದೆಯಿಂಪಿರಿಯನೆನಿಸಿಯುಂಕಿರಿಯನವನತಿವಿನಯದಿಂ||

ಧರಣಿಪಂ ಚಿರಕಾಲದಿಂ ತಳೆದ ತನ್ನ ಗುರು ೧೮
ತರಸುಪಾಲನಧುರವ ಕಿರಿದನಾಗಿಸಲೆಳಸಿ
ಪರಸಹಜ ಸಂಸ್ಕಾರವಿನಯಯುತತನಯಂಗೆ ಯುವರಾಜಪದವನಿತ್ತಂ||
ಸಿರಿ ಗುಣಪ್ರಿಯೆ ನೃಪತಿ ಮೂಲಮಂದಿರವ ತಾಂ
ತೊರೆದು ಮೆಲ್ಲಗೆ ಬಳಿಯ ಯುವರಾಜಸಂಜ್ಞೆಯಿಂ [ಮಂ
ಮೆರೆವರಘುವಂಪೊಂದಿದಳ್ಕಮಲಮುಂಬಿಟ್ಟುಸೇರ್ವವೊಲ್ನವಕುಮುದ

ನೆರೆ ಸಹಾಯಕಮಪ್ಪ ವಾಯುವಿಂದಗ್ನಿಯೊಲ್ ೧೯
ಶರದಾಗಮದೆ ಭಾನುವೊಲ್ ಮದೋದಯದಿಂದೆ
ಕರಿರಾಜನೊಲ್ ದಿಲೀಪಂ ರಘುವಿನಿಂದೆ ಮಸ್ಸಹನೆನಿಸಿ ರಾಜಿಸುತ್ತಂ||
ಧರಣಿಪಸುತಾನುಗತನಂ ಧನುರ್ಧರನನಾ
ವರಸುತನನಿರಿಸಿ ಯಜ್ಞಾವರಕ್ಷಣೆಗೆಡರ್
ಎರವಂತೆ ಗೆಯ್ವನೇಕೋನಶತಮುಖವನಾ ರಾಜಂ ಶತಕ್ರತುಸಮಂ||

ಸುರಳಿಯುಂ ಮುಖವನೆಸಗಲ್ಕೆಳಸಿ ತನ್ನೃಪಂ ೨೦
ನೆರೆ ನಿರರ್ಗಳತುರಗಮುಂ ಬಿಡಲ್ಕವ ಧನು
ರ್ಧರರಕ್ಷಕತ ಮುಂದೆಯೇ ಶಕ್ರನಪಹರಿಸಿದಂ ಗೂಢಕಾಯನಾಗಿ||
ವರಕುಮಾರನ ಸೇನೆಯದು ತತ್ಕ್ಷಣದೊಳ್ ನಿ
ರ್ಧರವಿಷಾದವಿನಷ್ಟಮತಿಯಾಗುತಚ್ಚರಿಯೊ
ಳಿರೆ ಮೈಮೆಯಿಂ ಮೆರೆವ ಮುನಿಧೇನು ತನ್ನಿಚ್ಛೆಯಿಂ ಬಂದುದಲ್ಲಿಗಾಗಂ||

ಗುರುವಿನ ಪವಿತ್ರತನುನಿಸ್ಯಂದವಾರಿಯಿಂ ೨೧
ಸುರಿ ಕಣ್ಗಳಂ ಶುದ್ಧಿಯುಂ ಮಾಡಿಕೊಂಡು ಸ [ಡೆದು
ತ್ಪುರುಷನುತರಘುವತೀಂದ್ರಿಯಪದಾರ್ಥಮನಾದೊಡಂನೋಳ್ಪಶಕ್ತಿಪ
ಡೆದೆ ಪಗ್ಗದಿಂ ತೇರ್ಗೆ ಕಟ್ಟಿಕೊಂಡಿರ್ಪ ಮುಖ
ತುರಗಮುಂ ಸಾರಥಿನಿಷಿದ್ಧಚಾಪಲಮನಾ
ಹರಿಪಕ್ಷಛೇದಕಂ ಸುರಪನೊಯ್ವುದನೀಕ್ಷಿಸಿದನಿಂದ್ರದಿಶೆಯೊಳಾಗಂ||

ಧರೆ ಮಿಸುಕದೆವೆಯ ಕಣ್ಸಾಸಿರಂ ಮೇಣತ್ತ ೨೨
ಹರಿ ಹರಿದ್ವರ್ಣದಿಂದಿಂದ್ರನೆಂದರಿದು ರಘು
ವೊರೆದನಿಂತವನಂ ದಿವವ್ಯಾಪಿಧೀರರವದೊಳ್ ನಿವರ್ತಿಸುವನೆನೆ ತಾಂ||
ಸುರನಾಥ! ಯಜ್ಞಾಂಶಭಾಗಿಗಳೊಳಾದ್ಯನೇ
ಇರುವೆ ನೀನೆಂದುಸಿರುತಿರೆ ಸತತಮರಿದವರ್
ನಿರುತ ಮಖ್ಖರದೀಕ್ಷೆಗೊಂಡ ಮತ್ಪಿತನ ಕರ್ಮಕ್ಕೆ ಪರಹೀನ್ವದೇಕೆ?

ಭುವನತ್ರಯೇಶ! ಮಖರಿಪುಗಳಂ ದಿವ್ಯಚ ೨೩
ಕ್ಷುಪಿನಿಂದಮರಿದವರನಾವಗಂ ಶಿಕ್ಷೆಗೆ
ಯ್ವವನೆನಿಸಿಂತು ಧರ್ಮಚಾರಿಗಳ ಕೃತಿಗೆಡರೀಯ್ವ ಸತ್ಕರ್ಮಮುಳಿಯುದಳಿಗುಂ|

ದಿವಿಜೇಂದ್ರ! ಬಗೆಯುತಿಂತಧ್ವರಕೆ ಮುಖ್ಯಹೇ
ತುವನಿದಂ ತುರಗಮುಂ ಮರಳಿ ಕೊಡಲರ್ಹನ [ರೇಂ॥
ಲ್ಲವೆ? ನೀಂ ವಿಚಾರಿಪೊಡೆ ವೇದಪಥದರ್ಶಕರ್ ಮಲಿನಮಾರ್ಗವನಾಂಪ

ಇನಿತೆಲ್ಲಮಂ ಪ್ರಗಲ್ಭೋಕ್ತಿಯಂ ಕೇಳ್ದು ಸಂ ೨೪
ಜನಿತವಿಸ್ಮಯನಾಗಿ ದಿವಿಜಾಧಿನಾಯಕಂ
ತನತು ವರರಥವ ಪಿಂತಿರುಗಿಸುತೆ ರಘುವಿಗುತ್ತರವನೀತೆರದೊಳಿತ್ತಂ॥
ಜನಪಸುತ! ನಿನ್ನನುಡಿ ನಿಜಮಾದೊಡಂ ಯಶೋ
ಧನರಿಗರಿಯಿಂ ರಕ್ಷಣೀಯಮಾವುದೊ ಭವ
ಜ್ಜನಕನದನೆನ್ನ ವಿಖ್ಯಾತಕೀರ್ತಿಯ ತಿರಸ್ಕರಿಸಲೆಳಸಂ ಯಜ್ಞದಿಂ॥

ಎಂತು ಹರಿಯೋರ್ವನೇ ಪುರುಷೋತ್ತಮಂ ಮತ್ತ ೨೫
ಮೆಂತು ಶಿವನೋರ್ವನೇ ತಾಂ ಮಹೇಶ್ವರನೆಂಬ
ರಂತೆ ನನ್ನಂ ಶತಕ್ರತುವೆಂಬರೆಲ್ಲರೀ ಪೆಸರನ್ಯರೊಳ್ ಸಲ್ಲದು॥
ಅಂತಿರ್ಪಕತದೆ ನಿನ್ನಯ ಪಿತನ ತುರಗವಿದ
ನಿಂತು ನಾಂ ಕಪಿಲಾನುಕಾರಿಯಪಹರಿಸಿದೆಂ
ಚಿಂತಿಸದಿರಶ್ವಮಂ ಪಡೆವುದಕೆ, ಸಗರಸುತಸರಣಿಯಲ್ಲಡಿಯಿಡದಿರು॥

ತರುವಾಯಮಾ ತುರಗರಕ್ಷಕಂ ಭೂಪಸುತ ೨೬
ನುರೆ ನಕ್ಕು ನಿರ್ಭಯದೆ ಪೇಳ್ದನೆಲೆ ಸುರಪ! ಬಿಡ
ದಿರೆ ಹಯವತೊಡುಶರವ ಗೆಲದೆರಘುವಂ ನೀನುಕೃತಕೃತ್ಯನಲ್ತುನಿಸದಂ॥
ಒರೆದಿಂತು ಮತ್ತಮಿಂದ್ರನ ಕಡೆಗೆ ಮೊಗವೆತ್ತಿ
ಸರಳ ಜೋಡಿಸಿ ಶರಾಸನದೊಳಾಲೀಢದಿಂ
ಪರಿಶೋಭಿಪಂಗದುನ್ನತಿಯಿನೆರಡನೆಯ ಪುರವೈರಿಯೊಲ್ ನಿಂದಿರ್ದನು॥

ಭರದೆ ರಘುವೆಚ್ಚ ನಿಶ್ಚಲಶರದೆ ಗಾಯವಡೆ ೨೭
ದುರದೆ ಮುಳಿದಿಂದ್ರನುಂ ಕ್ಷಣಮಾ ನವಾಂಬುದೋ [ಟ್ಟಂ॥
ತ್ಕರಕೆಲಾಂಛನಮಾಗಿಮೆರೆವಚಾಪದೊಳಮೋಘಾಸ್ತ್ರಮುಂತೊಟ್ಟುಬಿ
ಸುರವೈರಿರಕ್ತಪರಿಚಿತತದಸ್ತ್ರಂ ಧರಾ
ವರಪುತ್ರನೆದೆಯ ಪೊಕ್ಕೀಂಟದುದು ನೆತ್ತರವ
ನರಶೋಣಿತವ ಸವಿಯಮೊದಲರಿಯದಿರ್ದದಂಕುಡಿವೊಲೀಗಂನಲ್ಮೆಯಿಂ॥

ಸುರಕರಿಯ ತಟ್ಟ ಬಿಗುವಾಂತ ಬೆರಳೊಳ್ ಶಚಿಯ ೨೮
ವರಚಿತ್ರಪತ್ರಾಂಕದೊಳಮೆಸೆವ ಹರಿಭುಜಾಂ
ತರದೊಳ್ ಕುಮಾರವಿಕ್ರಮಕುಮಾರಂ ಸ್ವನಾಮದೆ ಮೆರೆವ ಶರವನಟ್ಟು॥
ಪೆರತೊಂದು ನವಿಲ ಗರಿಯಲಗಿನಿಂದಂ ಶಕ್ರ
ನುರುಪವಿಧ್ವಜವ ಖಂಡಿಸಲದಕೆ ವಜ್ರಿ ತಾಂ [ವಿಗೆ॥
ಸುರರಮೆಯತಲೆಗೂದಲಂಕೊಯ್ದುದಕೆಮುಳಿವವೊಲ್ ಮುಳಿದನಾರಘು

ಸುರನರಚಮೂಚಯಂ ತವ್ಮೊರ್ವರೆಡೆಯೊಳಿರು ೨೯
ತಿರೆ ಜಯಾಪೇಕ್ಷೆಯಿಂದುಭಯರುಂ ಕೆಣಕಿದರ್ [ದಿಂ॥
ಗರಿಮೂಡಿದಹಿಕುಲವ ಪೋಲ್ತು ಭೀತಿದಮುಪ್ಪಧೋರ್ಧ್ವಮುಖಶರಜಾಲ
ಪಿರಿದು ದುಸ್ಸಹಮೆನಿಪ ರಘುತೇಜಮಂ ಬಿಡದೆ
ಸುರಿಪಂಬುವೃಷ್ಟಿಯಿಂದಿಂದ್ರನಾರಿಸಲಾರ ಯಿಂ॥
ದಿರುತಿರ್ಪನಾತ್ಮಜನಿತಾಗ್ನಿಯಂ ಜಲದಿಂದೆ ಮುಗಿಲಾರಿಸದ ವೊಳ್ಕೆ

ಬಳಿಕವಿಂದ್ರನ ಕುಂಕುಮಾಂಕಿತದ ಮಣಿಬಂಧ ೩೦
ದೊಳಗೈದೆ ಶೋಭಿಸುವ ಶಿಂಜಿನಿಯ ನಿರ್ಮಥಿತ
ಜಲಧಿಗಂಭೀರನಾದಿನಿಯು ರಘು ಖಂಡಿಸಿದನರ್ಧಚಂದ್ರಾಸ್ತ್ರದಿಂವಂ॥
ತಳೆದಧಿಕಮತ್ಸರವನಾಸುರೇಂದ್ರಂ ಬಿಲ್ಲ
ನುಳಿದು ಬಲವದ್ರಿಪುವ ಕೊಲಲಚಲಪಕ್ಷಮಂ
ಸಲೆ ಕಡಿವ ವಜ್ರಾಯುಧವನುಜ್ವಲಿತಕಾಂತಿಮಂಡಲವನಿರದೆಕೊಂಡಂ॥

ಘನವಜ್ರಹತವಕ್ಷನಾಗಿ ರಘು ಪಡೆಯು ಕಂ ೩೧
ಬನಿಯೊಡನೆ ಬಿಳ್ದನುರ್ವಿಗೆ ನಿಮಿಷಮಾತ್ರದಿ
ಲ್ಲೆಸಿಸುತಂ ತದ್ವ್ಯಥೆಯ ಮತ್ತಮೇಳ್ದಂ ಹರ್ಷರವದೊಡನೆನಿಜಸೇನೆಯಾ॥
ಇನಿತಾದೊಡಂ ಶರವ್ಯವಹಾರದಿಂ ಕ್ರೂರ
ಮೆನಿಪ ರಿಪುಭಾವದಿಂ ಚಿರದೆ ನಿಂದಿರ್ದ ಕುವ
ರನವಿಪುಲಶೌರ್ಯಕೊಲಿದಂವೃತ್ರಹಂಸುಗುಣಮೆಲ್ಲರೊಳ್ ಗ್ರಾಹ್ಯಮಲ್ತೆ॥

ಗಿರಿಗಳುಮನುರೆ ಸೀಳ್ವ ನನ್ನಾಯುಧದ ಮುಂದೆ ೩೨
ಪೆರರಾರುಮಿಲ್ಲ ನಿಲ್ವರ್ ನಿಂದೆ ನೀನಿದಕೆ
ನೆರೆಮೆಚ್ಚಿದೆಂ ಹಯವನುಳಿದೇನನಿಚ್ಛಿಸುವೆಯೆಂದು ತಾಂ ಕೇಳೆ ಶಕ್ರಂ॥

ಧರಣಿಪಸುತಂ ಹೇಮಪುಂಖಕಾಂತಿಯನಾಂತು
ಬೆರಳೆಸೆಯುತಿರೆ ಬಿಡದೆ ಬತ್ತಳಿಕೆಯಿಂ ತೆಗೆವ
ಸರಳಂ ನಿವರ್ತಿಸುತೆ ಸುರನಾಯಕಂಗೆ ಮಾರ್ನುಡಿದನತಿಹಿತವಾಕ್ಯದಿಂ॥

ತುರಗಮಂ ಬಿಡಲಾಗದೇಂದರಿದೊಡೆಲೆ ದೇವ! ೩೩
ನಿರುತಮುನ್ನತದೀಕ್ಷೆಯೊಳ್ ಬದ್ಧನಾದ ಮ
ದ್ಗುರುಗೆವಿಧಿಯಿಂಪೂರ್ಣಗೆಯ್ದಯಾಗದ ಸಕಲಫಲವನೀಯುತ್ತೆಮತ್ತಂ॥
ವರನಿಲಯಗತಮತ್ಪಿತಂ ಶಿವೈಕಾಂಶತೆಯ
ಧರಿಸಿದುದರಿಂದನ್ಯದುಷ್ಪ್ರಾಪ್ಯನಿರ್ಪನೈ
ಸುರನಾಥ! ನಿನ್ನ ದೂತನ ಮುಖದೊಳೇ ತಿಳಿಯಪಡಿಸಾತಗೀವಾರ್ತೆಯಂ॥

ಸಲಿಸುತಿಂತೆರೆದ ರಘುವಿನ ಮನೋರಥವ ಮಾ ೩೪
ತಲಿಸೂತ ವಜ್ರಿ ತಾಂ ಬಂದ ಪಥವಿಡಿದು ಗಮಿ
ಸಲುಮಿತ್ತಮೈತಂಪನನತಿಮುದದಿಂ ಸುದಕ್ಷಿಣೆಯ ತನಯಂ ನಿಲಯಕೆ॥
ಸಲೆ ಸುರಪದೂತನಿಂ ಮೊದಲೆ ತದ್ವಿಷಯಮಂ
ತಿಳಿದಿರ್ದ ನೃಪತಿ ತಾಂ ಹರ್ಷಜಡಹಸ್ತದಿಂ
ಕುಲಿಶವ್ರಣಾಂಕಿತವ ತತ್ತನುವ ಮುಟ್ಟುತಂ ಮಗನನಭಿನಂದಿಸಿದನು॥

ಕ್ಷಿತಿಪಂ ವಯೋಂತದೊಳ್ ಸಲೆ ಸಗ್ಗಕೇರಲೆಳ ೩೫
ಸುತಮುದರ ಸೋಪಾನಪಂಕ್ತಿಯಂ ರಚಿಸುವೊಲ್
ಕ್ರತುವನೇಕೋನಶತಮಂ ಗೆಯ್ದನಂತರಂ ವಿಷಯಕ್ಕೆ ದೂರನಾಗಿ॥
ಸುತನಿಗೊಲಿದಿತ್ತು ವಿಧಿಯಿಂ ರಾಜಚಿಹ್ನಮೆನಿ
ಪತುಳಧವಳಾತಪತ್ರವ ಮುನಿವನಾಂತರವ
ಸತಿಯೊಡನೆ ಸೇರ್ದಂ ಕುಲವ್ರತಮಿದಲ್ತೆ? ವೃದ್ಧರ್ಗೆ ರವಿವಂಶಜರ್ಗೆ॥

---

## ಚತುರ್ಥ ಸರ್ಗಂ.

ಸೂ:— ಅಸಮಬಲಯುತನಾಗಿ ಪೊರಮಟ್ಟು ದಿಗ್ವಿಜಯ
ವೆಸಗಿ ಪುರಿಗೈತಂದು ವಿಶ್ವಜಿನ್ನಾಮಕದ
ಮಿಸುಪ ಮಖಮುಂಗೆಯ್ದು ಸರ್ವಸ್ವದಕ್ಷಿಣೆಯನಿತ್ತನಾರಘುಮಹೀಶಂ॥

ನಲವಿಂದೆ ಪಿತನಿತ್ತ ರಾಜ್ಯಮಂ ಪಡೆದು ನೃಪ ೧
ತಿಲಕನಾ ರಘು ಸಂಜೆಯಲ್ಲಿ ಮಾರ್ತಾಂಡನಿಂ
ಗಳಿಸಿರ್ದ ತೇಜಮಂ ಪೊಂದಿದಗ್ನಿಯ ಮಾಳ್ಕೆಯಿಂದೆ ಮಿಗೆ ರಂಜಿಸಿದನು॥
ತಿಳಿಯುತೆ ದಿಲೀಪಸಮನಂತರಂ ತತ್ಸುತಂ
ತಳೆದಾ ಪ್ರಭುತ್ವಮಂ ಮುನ್ನಂ ಪ್ರಧೂಮಿತಂ
ನೆಲದೆರೆಯರಖಿಳರಾ ಹೃದಯಮಾತ್ಸರ್ಯಾಗ್ನಿ ತಾಂ ಸಮುಜ್ವಲಿಸಿತಾಗಂ॥

ಸುರನಾಯಕಧ್ವಜೋದಯವನೆಂತಂತೆ ಭೂ ೨
ವರರಘುವಿನಾ ನವಾಭ್ಯುದಯಮಂ ಮಕ್ಕಳೊಡ
ವೆರಸಿ ಸರ್ವಪ್ರಜೆಗಳರಳಿದಕ್ಷಿಗಳಿಂದೆ ನೋಡಿ ಮುದಗೂಡಿರ್ದರು॥
ಕರಿರಾಜಗಾಮಿಯಾದಾ ದಿಲೀಪಕುಮಾರ
ನೆರಡನಾಕ್ರಮಿಸಿದಂ ತಾನೇಕಕಾಲದೊಳೆ
ಹರಿಪೀಠಮಮಂ ತಂದೆಯಿಂ ಬಂದುದಂ ಮತ್ತಮರಿಮಂಡಲವನೆಲ್ಲಮಂ॥

ಅಮಳಸಾಮ್ರಾಜ್ಯದೀಕ್ಷಿತನಾದ ರಘುವಿಗಾ ೩
ಕಮಳೆ ಕಾಣದ ಮಾಳ್ಕೆಯಿಂ ನಿಂದು ತಾನಾತ
ನಮಿತತೇಜೋನುಮೇಯಾಂಬುಜಚ್ಛತ್ರಮಂ ಪಿಡಿದು ಸೇವಿಸುತಿರ್ದಳು॥
ಸಮುಚಿತ ಮೆನಿಸ್ಪಖಿಳಸಮಯದೊಳ್ ವಂದಿವಿಸ
ರಮನಿರದೆ ಪೊಂದಿ ವಾಗ್ದೇವಿ ಸಾರ್ಥಕಮೆನಿಪ
ರಮಣೀಯನುತಿಗಳಿಂ ಸತ್ಕರಿಪಳಾ ಸ್ತುತ್ಯನಾದ ಧರಣೀಕಾಂತನಂ॥

ಮನುಮುಖ್ಯಮಾನ್ಯನೃಪತಿಗಳೆಲ್ಲರುಂ ಮೊದಲೊ ೪
ಳೆನಿತೊ ತನ್ನಂ ಭೋಗಿಸಿರ್ದೊಡಂ ಮರೆದು ಭೂ
ವನಿತೆಯನುರಕ್ತಳಾಗಿರ್ದಳನಿತರಭುಕ್ತಳಂತೆ ತಾಂ ರಘುನೃಪನೊಳು॥
ಗಣಿಪೊಡಾತಂ ಯುಕ್ತದಂಡಮಂ ಗೆಯ್ದು ತಾ
ನನತಿಶೀತೋಷ್ಣನೆಂದೆನಿಪ ದಕ್ಷಿಣದಿಕ್ಕಿ
ನನಿಲನಂದದೆ ಧರಾವಲಯದೆಲ್ಲಾ ಜನದ ಮನವನುರೆ ಸೆಳೆದುಕೊಂಡಂ॥

ಘನಗುಣೋತ್ಕರದೆ ರಘು ತಂದೆಯಂ ಮೀರೆ ತ ೫
ಜ್ಜನಕವಿಷಯಕಸಮುತ್ಸುಕತೆ ತಗ್ಗಿತು ಸರ್ವ
ಜನಕೆ ಮಾವಿನ ಪಣ್ಣ ಪಡೆಯೆ ಮತ್ತದರ ಪೂವಿನೊಳಳ್ತಿಗುಂದಿದಂತೆ॥

ತನಗೆ ನಯವಿದರೊರೆದ ಸದಸದಾತ್ಮಕವಿಷಯ
ಮೆನಿಪ ಪಕ್ಷದ್ವಯದೊಳಾಂತು ತಾಂ ಮುದದೆ ಮೊದ
ಲನೆಯದಂ ತ್ಯಜಿಸಿದಂ ಮತ್ತಮೆರಡನೆಯದಂ ನೂತನನರೇಂದ್ರನಾತಂ||

ಸಂತತಂ ಭೂಮ್ಯಾದಿಪಂಚಭೂತಂಗಳಿರ ೬
ದಾಂತಿರ್ಕುಮತಿಶಯಗುಣಂಗಳಂ ನವಧರಾ
ಕಾಂತನಾಗಿರೆ ರಘುವನಂತವಸ್ತುಗಳಭಿನವಂಗಳೆನಿಸಿರ್ದುವೆನೆ ತಾಂ||
ಎಂತು ಚಂದ್ರಂ ವಿರಚಿಪಾಲ್ಹಾದನದೆ, ಮತ್ತ
ಮೆಂತು ತಪನಂ ತಾಪಕರನಾದಕತದಿಂದ,
ಮಂತೆಯೇ ತದ್ರಾಜನುಂ ಪ್ರಕೃತಿರಂಜನದೆ ಸಾರ್ಥಕಾಹ್ವಯನೆನಿಸಿದಂ||

ಸಲೆ ರಾಜಿಸುತ್ತಿರ್ದೊಡಂ ಕರ್ಣದಂತಮುಂ ಬಳಸಿದ ೭
ವಿಶಾಲನೇತ್ರದ್ವಯಂ ತನಗೆ ರಘು [ನು
ವೊಲವಿಂದೆ ಸೂಕ್ಷ್ಮಕಾರ್ಯಾರ್ಥದರ್ಶಕಶಾಸ್ತ್ರಚಕ್ಷುವಿಂದಮೆ ನೋಳ್ಪ
ಇಳೆಯ ಪಾಲನವನಾತಂ ಸುವ್ಯವಸ್ಥೆಯೊಳ್
ನಿಲಿಸುತಂ ಶಾಂತಮನನಾಗೆ ಪಂಕಜಚಿಹ್ನ
ಕಲಿತಂ ಶರತ್ಸಮಯಮೈತಂದುದೆರಡನೆಯ ರಾಜಸಂಪತ್ತಿನಂತೆ||

ಜಲವನುರೆ ಸುರಿದು ಲಘುತೆಯನಾಂತ ಮೋಡಗಳ್ ೮
ತೊಲಗೆ ಬರಿದಾದ ನಭದಿಂದೇಕಕಾಲದೊಳೆ [ಪಂ
ಬಳಸಿತಖಿಳಾಶೆಯಂ ರಘುವರನ ಮೇಣ್ ರವಿಯ ದುಸ್ಸಹೋದ್ಯತ್ಪ್ರತಾ
ವುಳೆಗರೆವ ಬಿಲ್ಲನುಪಸಂಹರಿಸಿದಂ ವಜ್ರಿ
ತಳೆದನಾ ಭೂಮಿಾಶ್ವರಂ ಜೈತ್ರಕಾರ್ಮುಕವ
ನಿಳೆಯರ್ಥಸಾಧನಕೆ ಧನುವನೀ ಕ್ರಮದಿಂದೆ ತಾಳ್ದುಮೆರೆಯುವರೀಶ್ವರುಂ|

ಸಿತಪಾರಿಜಾತಾತಪತ್ರದಿಂ ಮತ್ತೆ ವಿಕ ೯
ಸಿತಕಾಶಚಾಮರಂಗಳಿನೈದೆ ತಳ್ತು ಶರ [ಲ್ಲಂ
ದೃತುವಾ ನೃಪತಿಸಾಮ್ಯಮಂ ಧರಿಸಿತಾದೊಡಂ ತಚ್ಛೋಭೆಯಾಂತುದಿ
ಕ್ಷಿತಿಯೊಳಾಗಂ ನೇತ್ರಯುತರ ಸಂಪ್ರೀತಿ ಪೊಂ
ದಿತು ಸಮಾಸ್ವಾವಮಂ ತಾನುಭಯಕೊಳ್ ಪ್ರಸ [ನೊಳಂ
ನ್ನತೆಯಾಂತ ಮುಖದ ರಘುವಿನೊಳಂ ಲಸತ್ಕಾಂತಿಮಯನಾದ ಚಂದ್ರನ

ಸುರುಚಿರ ಮರಾಳಗಣದಲ್ಲಿ ತಾರೆಗಳಲ್ಲಿ ೧೦
ವರಕುಮುದ್ವಜ್ಜಲಾಶಯದಲ್ಲಿ ರಘುನರೇ
ಶ್ವರನ ವಿಲಸದ್ಯಶೋಸಂಪದಂಗಳ್ ಪಸರಿಸಿದವೆಂಬೊಲೆಸೆಯೆ ಮತ್ತಂ॥
ತರುಣಿಯರ್ ಶಾಲಿವನಪಾಲಿಕೆಯರಿಕ್ಷುಗಳ
ನೆರಳಲ್ಲಿ ಕುಳಿತು ಪಾಡುವರ್ಕೈದೆ ತದ್ಧರಾ
ಪರಿಪಾಲಕನ ಬಾಲ್ಯವಿಡಿದಾಟ ಭವ್ಯಗುಣಜಾತಕೀರ್ತಿಯ ಗೀತಮಂ॥

ವಿತತತೇಜೋನ್ವಿತನಗಸ್ತ್ಯನುದಯದೆ ವಾರಿ ೧೧
ತತಿಗಾಯ್ತು ಸುಪ್ರಸನ್ನತೆಯದು ಮಹೌಜೋನು
ಗತರಘುವಿನುದಯದಿಂದಭಿಭವಾಶಂಕಿರಿಪುಮನಕಾಯ್ತು ಕಲುಷಭಾವಂ॥
ಅತಿಮದಯುತಂಗಳುಂ ಕಕುದಂಚಿತಂಗಳು
ನ್ನತನದೀತೀರಸಂಭೇದಕಂಗಳುಮೆನಿಸು
ವತುಳವೃಷಭಂಗಳನುಕರಿಸಿದವು ಕೇಳಿಯೊಳ್ ವಿಕ್ರಮವ ತಜ್ಜನಪನಾ॥

ವರಸಪ್ತಪರ್ಣಮದಗಂಧಿಸುಮಸಂಕುಲದೆ ೧೨
ದೊರೆವ ತಾಡನಕೆ ಮಚ್ಚರಗೊಂಡವೆನೆ ರಘುವಿ
ನುರುತರಗಜಂಗಳಂಗದ ಸಪ್ತಭಾಗದಿಂ ಸುರಿಸಿದವು ಮದಧಾರೆಯಂ॥
ಸರಣಿಗಳ ಕೆಸರನೊಣಗಿಸಿ ನದಿಗಳಂ ದಾಂಟ
ಲುರೆ ತಕ್ಕವುಗಳನಾಗಿಸಿ ಶರತ್ಕಾಲಮದು
ಹುರಿದುಂಬಿಸಿತು ದಂಡಯಾತ್ರೆಗಾ ನೃಪನನಾತಂ ಬಗೆವುದಕೆಮುನ್ನಮೇ॥

ತುರಗನೀರಾಜನಾವಿಧಿಯಲ್ಲಿ ಸಕ್ರಮದೆ ೧೩
ವಿರಚಿಸಿದ ಹವನಮಂ ಪಡೆದಗ್ನಿ ತಾಂ ಬಲಕೆ
ತಿರುಗಿದಜ್ವಾಲೆ ವರಹಸ್ತದಂ ತೊಪ್ಪೆ ಜಯವಿತ್ತನದರಿಂ ರಘುವಿಗೆ॥
ಪುರವ ಮೇಣ್ ಪ್ರಾಂತದುರ್ಗವ ನೈದೆ ಭದ್ರತೆಯೊ
ಳಿರಿಸಿ, ಷಡ್ವಿಧಬಲವನಾಂತು ದಿಗ್ವಿಜಯಕ್ಕೆ
ತೆರಳಿದಂ ಶುಭದೈವಯುತನಾ ನರೇಂದ್ರನಿರೆ ಬೆಂಗಾವಲಿಯ ಸುಭಟರು॥

ಮಂದರಾಚಲ ಮಂಥನೋತ್ಥಿತಂಗಳೆನಿಪ್ಪ ೧೪
ಬಿಂದುಗಳನಮೃತೋರ್ಮಿಗಳ್ ಹರಿಯ ಮೇಲೆ ಸುರಿ
ಪಂದದಿಂ ಸುರಿಸುತಿರೆ ಲಾಜೆಗಳ ಪುರವೃದ್ಧವನಿತೆಯರ್ ತನ್ನಮೇಲೆ॥

ಸುಂದರಾಂಗಂ ಸುರೇಂದ್ರೋಪಮಂ ರಘು ತಾಂಪು
ರಂದರನ ದಿಶೆಗೆ ಮೊದಲ್ಸೈದೆ ಗಮಿಸಿದನನಿಲ
ಸಿಂದ ಚಲಿಸುವ ಕೇತುಗಳ್ ಶತ್ರುಸಂಕುಲವ ಬೆದರಿಸುವವೆನೆ ರಾಜಿಸೆ

ತೆರಳುವ ರಥಂಗಳಿಂದೆಳ್ದ ಧೂಳಿಗಳಿಂದೆ ೧
ಸುರಪಥಂ ಧರಣಿಯೋಲ್ ಮತ್ತಮಂಬುವಕೆಣೆಯ [ಸ
ಕರಿಗಳಿಂಧರಣಿಸುರಪಥದವೋಲ್ ರಾಜಿಸಿತುಜಯಯಾತ್ರೆಯೊಳ್ ರಘುವಿ
ಪರತೇಜಮುಗ್ರದೊಳ್ ತದನಂತರಂ ರವಂ
ತರುವಾಯಮುರೆ ರಜಂ ಬಳಿಕಂ ರಥಾದಿಯುಂ
ಬರುತಿರಲ್ಕಿಂತು ತತ್ಸೈನ್ಯಂ ಚತುರ್ವ್ಯೂಹದಂತೆವೋಲ್ ಕಂಗೊಳಿಸಿತು

ಜಲಮಿಲ್ಲದೆಡೆಯಲ್ಲಿ ಜಲವ ಮರ್ಗಮವನ ೧
ಸ್ಥಲದಲ್ಲಿ ಪಥವ ಮತ್ತಂ ನಾವೆಯಿಂದಾಂಟ
ಲಳವೆನಿಪ ನದಿಯಲ್ಲಿ ಸುಲಭಗಮನವನೊಡರ್ಚಿಸಿ ಶಕ್ತಿಯಿಂದೆ ಮತ್ತೆ
ವಿಲಸನ್ಮಹಾಸೇನೆಯಂ ಪೂರ್ವದಿಶೆಗಿರ್ಪ
ಜಲನಿಧಿಯ ಕಡೆಗೆ ನಡೆಸುವ ತನ್ನೃಪಂ ಶಿವನ [ದಂ
ತೊಳಪಜಡೆಯಿಂಜಗುಳ್ದ ಜಾಹ್ನವಿಯನೊಯ್ವಾ ಭಗೀರಥನವೋಲ್ ಬೆಳಗಿ

ತೆರಳುವ ಪಥಂ ನಿರರ್ಗಳಮಾಯ್ತು ವನಗಜಂ ೧
ತರುಗಳಲ್ಲೆಂತಂತೆ ರಘು ಮಲಿತ ದೊರೆಗಳೊಳ್
ವಿರಚಿಸುವಿನಂ ಫಲಾಭಾವನಿರ್ಮೂಲಭಗ್ನತ್ವಮಂ ನಿಜಶಕ್ತಿಯಿಂ॥
ಅರಿವಿಜಯಶಾಲಿ ತನ್ನೃಪನಿಂತು ಮೂಡಣದೊ
ಳಿರುವಾ ಸಮಸ್ತಜನಪದವನಾಕ್ರಮಿಸುತಂ
ನಿರವಧಿಕತಾಲೀವನಶ್ಯಾಮರಂಜಿತಮಹೋದಧಿಯ ಬಳಿ ಸೇರ್ದನು॥

ನೆರೆ ನಮ್ರತೆಯ ಧರಿಸದಿರುವರಂ ಕೀಳ್ದೊಗೆಯು ೧
ತಿರುವ ರಘುವಿಗೆ ಸಿಂಧುವೇಗದಿಂ ವೇತಸಂ
ಶಿರವಾಗುವಂತೆ ತಲೆಯಂ ಬಾಗಿಸುತೆ ಜೀವಿಸಿತು ಸುಹ್ಮಜನಪತಿಕುಲಂ
ಉರುಬಲಂ ತನ್ನೃಪಂ ಮತ್ತೆ ನೌಸಾಧನಂ
ಬೆರಸು ಯುದ್ಧಕೆ ಸಿದ್ಧರಾದ ವಂಗರ ಗೆಲ್ದು
ಸುರುಚಿರಜಯಸ್ತಂಭಮಂ ಸ್ಥಾಪಿಸಿದನೈದೆ ಗಂಗಾಂತರದ ಭುವಿಯೊ

ಸಲೆ ಕೀಳ್ದು ಮೇಣಾರ್ದ್ದ ಕಳಮಂಗಳವು ಪಾದ ೧೯
ತಳಕೆರಗಿ ಫಲವೀವವೊಲ್ ರಘುವಿನಿಂ ಮರಳಿ
ನೆಲೆಗೆ ನಿಲಿಸಿದ ವಂಗನೃಪರಾತನಡಿಗೆರಗಿ ಕಪ್ಪಮಂ ತಂದಿತ್ತರು॥
ಬಳಿಕಂ ತಮರ್ದ್ವೀಶ್ವರಂ ಸೈನ್ಯದೊಡನೆ ಕರಿ
ಕುಲಮೆಂಬ ಸೇತುವಿನ ಮೇಲೆ ಕಪಿಶಾನದಿಯ
ನೊಲವಿಂದೆ ದಾಂಟುತುತ್ಕಲರೊರೆವಪಥದಿಂ ಕಲಿಂಗಾಭಿಮುಖನಾದನು॥

ಧರಣಿಪಂ ರಘು ಮಹೇಂದ್ರಾಚಲದ ಮಸ್ತಕದೊ ೨೦
ಳಿರಿಸಿದಂ ತೀಕ್ಷ್ಣಪ್ರತಾಪಮಂ ಮಾವಂತ
ನಿರದೆ ಗಂಭೀರವೇದಿಯ ಕರಿಯ ಶಿರದೊಳಂಕುಶವ ತಿವಿದಿರಿಸುವಂತೆ॥
ಗರಿಗಳಂ ಕಡಿಯಲ್ಕೆತಂದ ಸುರಪನ ಮೇಲೆ
ಗಿರಿಯು ಕಲ್ಮಳೆಗರೆವವೋಲಾ ದೊರೆಯ ಮೇಲೆ
ಶರವೃಷ್ಟಿಯಂ ಸುರಿಸುತಿದಿರಾದ ನಿಭಸ್ಸೈನ್ಯಯುತಕಲಿಂಗಾಧಿನಾಥಂ॥

ಸುರಿವ ರಿಪುಸಾರಾಚವರ್ಷಮಂ ಸಹಿಸಿ ಭಾ ೨೧
ಸುರವಿಕ್ರಮಂ ರಘು ಮಹೇಂದ್ರಸಾಮಕಧರಾ
ಧರದಲ್ಲಿ ಜಯಮಂಗಳಸ್ನಾತನಂತೆ ಪಡೆದಂ ಕಡೆಗೆ ವಿಜಯಮೆಂಬುದಂ॥
ಪರಯೋಧರೆಲ್ಲರುಂ ತಮಗೆ ತದ್ಗಿರಿಯಲ್ಲಿ
ವಿರಚಿಸಿದ ಪಾನಭೂಮಿಗಳಲ್ಲಿ ಕುಡಿದರಾ
ಅರಿಕೀರ್ತಿಯೊಡನೆ ತೆಂಗಿನ ಮದ್ಯಮಂ ನಾಗವಲ್ಲೀದಳಂಗಳಿಂದಂ॥

ಸಲೆ ಧರ್ಮಕಾಗಿ ಜಯಕೆಳಸ ರಘು ತಾಂ ಕೈಗೆ ೨೨
ಸಿಲುಕಿದ ಕಳಿಂಗನೃಪನಂ ಕರುಣದಿಂ ಬಿಟ್ಟು
ಸೆಳೆದುಕೊಳ್ಳದೆ ತದ್ಧರಾಮಂಡಲವನಾತನಿಂ ಕರದ ಕೈಕೊಳ್ಳುತಂ॥
ಬಳಿಕಮುರೆ ಫಲಿತಪೂಗಾಳಿವಿಲಸಿತಮೆನಿಪ
ಜಲಧಿತೀರೋಪಾಂತವಿಡಿದಗಸ್ತ್ಯಮುನೀಂದ್ರ
ತಿಲಕ ಸೇವಿತಮಪ್ಪ ತೆಂಕಣಕೆ ತೆರಳಿದನನನ್ಯಸಂಪ್ರಾಪ್ತವಿಜಯಂ॥

ಕ್ಷಿತಿನಾಥರಘು ತನ್ನ ಗಜಮದಸುಗಂಧದಂ ೨೩
ಗತವ ಸೈನಿಕ ಭೋಗವಾಂತ ಕಾವೇರಿಯಂ
ಪತಿಯಾದ ಜಲನಿಧಿಗವಿಶ್ವಾಸಪಾತ್ರವಲ್ಲಭೆಯಾಗುವಂತೆ ಗೆಯ್ದಂ॥

ಗತಮಾರ್ಗನುಂ ಜಯಾಕಾಂಕ್ಷಿಯೆನಿಪಾ ವೀರ
ನುತನ ಸೇನೆಯದು ಮಲಯಾದ್ರಿಯ ಮರೀಚವನ
ತತಿಸಮುದ್ಭ್ರಾಂತಹಾರೀತಖಗರಾಜಿತಾಸನ್ನಧರೆಯಂ ಸೇರ್ದುದೂ॥

ತುರಗಸಂಕ್ಷುಣ್ಣಮಾದೇಲಾಲತಾಫಲೋ
ತ್ಕರದ ರೇಣುಗಳೆದ್ದು ತಾಂ ಸಮಾನಸುಗಂಧ
ಭರಿತಂಗಳಪ್ಪ ಮತ್ತೇಭಗಂಡಸ್ಥಲಂಗಳನಂಟಿಕೊಂಡವಲ್ಲಿ॥
ಕರಿಕುಲಂ ಪಾದಶೃಂಖಲೆಯ ಕಿಳ್ತಿರ್ದೊಡಂ
ಪರಿಕಿಪೊಡೆ ತತ್ಕಂಠಬಂಧನಂ ಚಂದನಸು
ತರುಗಳ ಭುಜಂಗವೇಷ್ಟನಮಾರ್ಗದೊಳ್ ಬದ್ಧಮಾಗುತಂಸಡಿಲ್ದುದಿಲ್ಲ

ಖರಕರನ ತೇಜಮಾದೊಡಮಲ್ಲಿ ಮಂದತೆಯೊ
ಳಿರುವುದೋ ಆ ತೆಂಕಣದ ದೆಸೆಯೊಳೇ ಪಾಂಡ್ಯ
ನರಪತಿಗಳಾ ರಘುವಿನುದ್ಯತ್ಪ್ರತಾಪಮಂ ಸಹಿಸಲಾರದೆ ಭೀತಿಯಿಂ॥
ಪರಿಲಸತ್ತಾಂಬ್ರಪರ್ಣೀಸಂಗಮದ ಮಹಾ
ಶರಧಿಯಿಂ ಪಡೆದ ವರಮೌಕ್ತಿಕದ ರಾಶಿಯಂ
ಶಿರವಾಗಿ ತನ್ನೃಪತಿಗರ್ಪಿಸಿದರವರು ನಿಜಯಶವನೊಪ್ಪಿಸುವ ತೆರದಿಂ॥

ಸಲೆ ತಟವ್ಯಾಪ್ತಚಂದನದೆ ದಕ್ಷಿಣದಿಶಾ
ಲಲನೆಯ ಕುಚದ್ವಂದವಂತೆ ರಾರಾಜಿಸುವ
ಮಲಯದರ್ದುರಗಿರಿದ್ವಯವ ಸುಖಮಂ ಯಥಾಕಾಮದಿಂದುಪಭೋಗಿ
ಜಲನಿಧಿಗೆ ದೂರದೊಳ್ ಮೇದಿನೀಕಾಮಿನಿಯ
ಗಲಿತವಸ್ತ್ರದ ನಿತಂಬದ ಮಾಳ್ಕೆಯಿಂದೆ ಕಂ
ಗೊಳಿಪ ಸಹ್ಯಾದ್ರಿಯಂ ಪೊಂದಿದನಸಹ್ಯವಿಕ್ರಮಸಾದರಘುನಾಯಕಂ

ಪರಶುಧರಶರಹತಿಯಿನಬ್ಧಿ ತಾಂ ದೂರದೊಳ್
ಸರಿದಿರ್ದೊಡಂ ಮತ್ತೆ ಸಹ್ಯಮಂ ಕೂಡಿದೋಲ್
ಮೆರೆಮವಪರಾಶೆಯಂ ಗೆಲಲೆಳಸಿ ತದ್ಗಿರಿಯಿನೈತರ್ಪ ರಘುಸೇನೆಯೂ
ಉರುಭಯದೆ ಭೂಷಣಂಗಳನುಳಿದ ಕೇರಳದ
ತರುಣಿಯರ ಕುಂತಳವ ಕುಂಕುಮದ ಚೂರ್ಣಕ್ಕೆ
ಸರಿಯೆನಿಪ ನಿಜಚಮೂರೇಣುಗಣದಿಂದಲಂಕರಿಸಿದಂ ತನ್ನರೇಂವ್ರಂ॥

ಮುರಲಾಖ್ಯನದಿಯೊಳೊಗೆದಾ ಕೇದಗೆಯ ರಜಂ ೨೮
ಮರುತನಿಂದುದ್ಧೂತಮಾಗಿ ರಘುಭಟಚಯಂ
ಧರಿಸಿರ್ದ ಕಂಚುಕಗಳಿಗೆ ಲೇಪಿಸುವ ಪರಿಮಳಸುವಸ್ತುವಾದುದಾಗಂ॥
ತೆರಳುವ ಹಯಂಗಳಂಗದ ವರ್ಮ್ಮದಿಂ ಪುಟ್ಟು
ತಿರುವ ನಿನದಂ ತಿರಸ್ಕರಿಸಿದುದು ವಾಯುವಿಂ
ದುಃಸಂಚಲಿತಮಾದ ರಾಜತಾಲೀವನಾಳಿಯಿನೊಗೆತರ್ಪ ರವಮಂ॥

ಅಳಿಕುಲಂ ಪುನ್ನಾಗಪುಷ್ಪಂಗಳಂ ತೊರೆದು ೨೯
ನಲವಿನಿಂದೆರಗಿದುದು ಖರ್ಜೂರಭೂರುಹಂ
ಗಳಿಗೆ ಕಟ್ಟಿರ್ದ ಕರಿಗಳ ದಾನಸುರಭಿಯುತಗಂಡಸ್ಥಲಕ್ಕೆ ಬಳಿಕಂ॥
ಜಲಧಿ ತನ್ನಂ ಯಾಚಿಸಿದ ಪರಶುರಾಮಂಗೆ
ನೆಲೆಯನಿತ್ತಂ ವಿಜಯಿಯಾದಭೂಮೀಶ
ಕುಲತಿಲಕರಘುವಿಗೆ ಪಾಶ್ಚಿಮಾತ್ಯಜನಪವ್ಯಾಜದಿಂ ಕಪ್ಪಮಂ ಕೊಟ್ಟನು॥

ಮದಿತವಾರಣದಂತವಿಕ್ಷತಂಗಳೆನಿಪ್ಪ ೩೦
ವಿದಿತವಿಕ್ರಮಲಕ್ಷಣಂಗಳಿಂದಂ ರಂಜಿ
ಸಿದ ತತ್ತ್ರಿಕೂಟಾದ್ರಿಯನೆ ಜಯಸ್ತಂಭಮಂಗೆಯ್ದು ರಘುವಾನಾಡೊಳು॥
ತದನಂತರಂ, ಯೋಗಿ ತಾಂ ತತ್ವದವಬೋಧ
ನದೊಳಿಂದ್ರಿಯಾರಿಗಳನೆಂತಂತೆ ಶೌರ್ಯದ
ಭ್ಯುದಯದಿಂ ಪಾರಸೀಕರ ಗೆಲಲ್ಕೆಂದು ಭೂಮಾರ್ಗದಿಂ ಪೋದನಾತಂ॥

ವಿಲಸಿತಪರಾಕ್ರಮಂ ರಘು ಯವನವನಿತಾಸ್ಯ ೩೧
ಜಲಜಾತಮಧುಮದವ ಸಹಿಸದಾದನಕಾಲ
ಜಲದೋದಯಂ ಕಮಲತತಿ ಪಡೆದ ಬಾಲಾತಪವ ಸಹಿಸದಂತೆ ಬಳಿಕಂ॥
ಸಲೆ ಧನುಷ್ಟಂಕಾರದಿಂದಮೇ ಪ್ರತಿಭಟರ
ತಿಳಿಯಲಳವಪ್ಪಂತೆ ದೂಳಿ ಕವಿದಿರೆ ತುರಗ
ಬಲದ ಪಾಶ್ಚಾತ್ಯರೊಡನೆಸಗಿದಂ ತುಮುಲಸಂಗ್ರಾಮಮಂ ತನ್ಮಹೀಶಂ॥

ಚಂಡತೇಜಂ ರಘುವರಂ ಭಲ್ಲೆಯಿಂದೆ ಮಿಗೆ ೩೨
ಖಂಡಿಸಿದ ಶತ್ರುಗಳ ಗಡ್ಡಮೀಸೆಗಳುಳ್ಳ
ರುಂಡಂಗಳಳಿಮುತ್ತಿದಾ ಜೇನ ಖಂಡಂಗಳೊಲ್ ಕಂಡವಿಳೆಯ ತುಂಬಿ॥

ಮುಂಡೆಯೊಳ್ ಸೀಸಕವ ಧರಿಸದಿನ್ನುಳಿದ ರಿಪು
ಮಂಡಲಂ ಮರೆವೊಕ್ಕು ಜೀವಿಸಿದುದಾ ನೃಪಾ
ಖಂಡಲನ ಸರಿಕುಲಪ್ರಣತಿಯಲ್ತೆ ಮಹಾತ್ಮಕೋಪಪ್ರತೀಕಾರವು||

ಸುಲಲಿತದ್ರಾಕ್ಷಾವನಂಗಳೊಳ್ ತದ್ಭಟರ್ ೩
ಕುಳಿತು ಮಿಗಸಮ್ಮಗಳ ಮೇಲೆ ಜಯದಿಂದಾದ [ದ
ಬಳಲಿಕೆಯ ಕಳೆದುಕೊಂಡರ್ ಮಧುವ ಕುಡಿದು ಮನದಣಿವಂತೆ ಜಿನದ
ಬಳಿಕಮುದಕವ ಕಿರಣದಿಂ ಹೀರ್ದ ರವಿಯಂತೆ
ತಳೆದ ಸರಳಿಂದೌತ್ತರೇಯರಸುವಂ ಹೀರ್ದ
ನೆಲದೆರೆಯನಾದ ರಘುನಾಯಕಂ ತೆರಳಿದಂ ಮುಂದೆ ಕೌಬೇರದಿಶೆಗೆ||

ರಮಣೀಯಸಿಂಧುತಟದಲ್ಲಿ ತನ್ನೃಪತುರಂ ೩
ಗಮುಚಯಂ ಕ್ರೀಡೆಯಿಂ ಕಳೆದುಕೊಳ್ಳುತೆ ಪಥ [ಗಳ
ಶ್ರಮವನಲುಗಿಸಿತು ಕುಂಕುಮಕುಸುಮಕೇಸರಂಗಳನಾಂತನಿಜತನು
ಸಮನಂತರಂ ಹೂಣರೊಳ್ ತೋರ್ದ ರಘುವರಾ
ಕ್ರಮಕೌಶಲಂ ತನ್ನರೇಂದ್ರರಂತಃಪುರದ
ರಮಣಿಯರ ಕದಪುಗಳಗೊದಗಿಸಿತು ದುಃಖತಾಡನಜನಿತಪಾಟಲತೆಯು

ಕರಿಬಂಧನದೆ ಪರಿಕ್ಷಿತಮೆನಿಸುವಂಕೋಲ ೩
ತರುಗಳೊಡನ್ನೈದೆ ಬಾಗಿದರು ಕಾಂಭೋಜರಾ
ನರಪತಿಗೆ ತತ್ತೇಜಮಂ ಸಹಿಸಲಾರದವರಾಗಿ ರಣರಂಗದಲ್ಲಿ
ಪರಿಕಿಸಲ್ಕವರ ಸದ್ವಾಜಿಸಂದೋಹಯುತ
ವರಹೇಮರಾಶಿಗಳ ಕಾಣಿಕೆಯೆ ಕೋಸಲೇ
ಶ್ವರರಘುವ ಪೊಂದಿದುದು ತದ್ಗರ್ವಮಣಮಾದೊಡಂ ಪೊಂದಲಿಲ್ಲಾ ತನ

ಬಳಿಕಂ ತದವನಿಪಂ ಪಾರ್ವತೀಗುರುಹಿಮಾ ೭
ಚಲವನೇರಿದನಾತ್ಮತುರುಗಬಲಖುರಹತಿಗೆ
ಸಲೆ ನೆಗೆವ ಧಾತುರಜಮೆಸೆಯೆ ತಚ್ಛಿಖರವೃದ್ಧಿಯುಮಾಳ್ಪದೆನಿಸಿಪುತ್ತ
ಬಲದ ಕಲಕಲತೆ ಬೆದರಿಮದಿಲ್ಲಮೆಂಬುದಂ
ತಿಳಿಸಿದುದು ಸೈನ್ಯಸಮುಬಲವಾಂತು ಗವಿಗಳೊಳ್
ಮಲಗಿ ಪಿಂತಿರುಗಿ ನಿರುಕಿಪ ಸಿಂಗಗಳ ನೋಟವುದು ರಘುಭಟಾಳಿಗಳ

ಗಲಗಲಧ್ವನಿಯನೊದಗಿಸಿ ಭೂರ್ಜವೃಕ್ಷಂಗ ೩೭
ಳಿಲೆಗಳಿಗೆ, ಮೇಣೆಸಗಿ ವೇಣುರಂಧ್ರಂಗಳೊಳ್ [ಳು॥
ಕಲರವವ, ಗಂಗಾಂಬುಕಣವಾಹಿವಾಯು ಸೇವಿಸಿತು ರಘುವಂಪಥದೊ
ವಿಲಸನ್ನಮೇರುತರುಗಳ ನೆರಳೊಳಾಡುತಂ
ನಲಿದ ಕಸ್ತೂರೀಮೃಗಾವಳಿಯ ಪರಿಮಳವ [ವನಾ॥
ನೊಳಕೊಂಡಶಿಲೆಗಳೊಳ್ ಕುಳಿತು ತತ್ಸೈನಿಕರ್ ಕಳೆದುಕೊಂಡರ್ ಶ್ರಮ

ಸರಳತರುಗಳಿಗೆ ಕಟ್ಟಿರ್ದಾನೆಗಳ ಗಳ ೩೮
ಕ್ಕಿರುವ ಸಂಕಲೆಗಳೊಳ್ ಪ್ರತಿಫಲಿತಕಾಂತಿಯಿಂ
ಸ್ಫುರಿಪೋಷಧಿಗಳೆಣ್ಣೆಯಿಲ್ಲದಿಹ ದೀಪಂಗಳಾದವಿರುಳೊಳ್ ರಘುವಿಗೆ॥
ಕರಿಕಂಠರಜ್ಜುವಿಕ್ಷತಿಯಿಂದೆ ಸಿಗುರೆದ್ದ
ವರದೇವದಾರುಗಳೆ ದಂತಿಪ್ರಮಾಣಮಂ
ನೆರೆ ಪೇಳ್ದವಲ್ಲಿ ಶಬರರ್ಗೆ ತನ್ನೃಪಚಮೂತ್ಯಕ್ತವಾಸಂಗಳಲ್ಲಿ॥

ಘೋರಸಂಗ್ರಾಮಮಾಗಿರಿಯಲ್ಲಿ ಜರುಗಿದುದು ೩೯
ವೀರರಘುವಿಗೆ ಪರ್ವತೀಯರೊಡನಡಿಗಡಿಗೆ
ಪಾರುತಿರೆ ಬೆಂಕಿ ತಲ್ಲೋಹಶರಪಾಷಾಣಭಿಂಡಿವಾಲೋದ್ಘರ್ಷಿತಂ॥
ಭೂರಿಶರದಿಂ ತದುತ್ಸವಸುಸಂಕೇತರಿಪು
ವಾರಮಂ ವಿಗತೋತ್ಸವಮನೆಸಗಿ ನಿಜಭುಜದ
ಚಾರುಜಯಗೀತಮಂ ಕಿನ್ನರರ ಮುಖದೆ ಪಾಡಿಸಿದನಾತಂ ಕಡೆಗೆ ತಾಂ॥

ಆಪರ್ವತೀಯರರ್ಪಿಸೆ ಕಾಣಿಕೆಗಳ ತ ೪೦
ದ್ಭೂಪತಿಲಕಂ ತುಹಿನಗಿರಿಯ ಸಾರವ ಮತ್ತ
ಮಾಪರ್ವತೋತ್ತಮಂ ಭೂಮಿಪನ ಸಾರಮಂ ತಿಳಿದರಾಸಮಯದಲ್ಲಿ॥
ಈಪರಿಯೊಳಾಂತ ನಿಜಕೀರ್ತಿರಾಶಿಯನಾ ಪ್ರ
ತಾಪನಿಧಿ ರಘು ಹಿಮಾದ್ರಿಯ ಮೇಲೆ ನಿಲಿಸಿ ಲಂ
ಕಾಪತಿವಿಚಲಿತಕೈಲಾಸಮಂ ನಾಣ್ಚಿಸುವನೆಂಬವೋಲಿಳಿದು ಬಂದಂ॥

ಸರಣಿಯೊಳ್ ಲೌಹಿತ್ಯನದಿಯನಾ ರಘು ದಾಂಟು ೪೧
ತಿರೆ ಲಸತ್ ಪ್ರಾಗ್ಜ್ಯೋತಿಷಾಧಿಪಂ ನೋಡಿ ತಾಂ
ಕರಿಗಳಂ ಕಟ್ಟಿರ್ದ ಕಾಲಾಗರುದ್ರುಮಾವಳಿಯೊಡನೆ ನಡುಗುತಿರ್ದಂ॥

ಪರಿಕಿಪೊಡೆ ಮೇಣವಂ ರವಿಗಡ್ಡವಾಗಿ ಮಳೆ
ಗರೆಯುದಿಹ ಮುಗಿಲ್ಗೋಳಿಯಂತಿರ್ದ ಕೋಸಲೇ
ಶ್ವರನ ರಥಮಾರ್ಗರಜವನೆ ಸಹಿಸನೆಂತು ತತ್ಸೈನ್ಯದೆದುರಾಗಿ ನಿಲ್ಲ

ಕಾಮರೂಪಾಧಿಪಂ ತನಗನ್ಯರಿಪುನೃಪ
ಸ್ತೋಮಮಂ ಗೆಲುವುದಕೆ ಮುಖ್ಯಸಾಧನದ ಮದ
ಸಾಮಜವ್ರಜವ ಕಾಣಿಕೆಯಾಗಿ ಕೊಟ್ಟು ಜಿತಸುರಪವಿಕ್ರಮರಘು
ಹೇಮಮಯಪೀಠಾಧಿದೇವಿಯಂ ತತ್ಪಾದ
ತಾಮರಸಯುಗಳದಮಲಚ್ಛಾಯೆಯಂ ಬಹು
ಪ್ರೇಮದಿಂ ಮತ್ತೆ ಮಣಿಪುಷ್ಪೋಪಹಾರದಿಂದರ್ಚಿಸಿದನಾನರೇಂದ್ರ

ಗಳಿಸಿ ದಿಗ್ಜಯವನೀತೆರದೆ ಪಿಂತಿರುಗಿದಂ
ಪೊಳಲಿಗಾ ರಘುವರಂ ಛತ್ರಶೂನ್ಯಾವನಿಪ [ಚ
ಕುಲಮೌಳಿಗಳೊಳಿರದೆ ಮುಸುಕುತಿರೆ ನಿಜರಥೋದ್ಧೂತಧೂಳಿಯು
ಸಲೆ ಸೇರ್ದು ನಗರಿಯಂ ತನ್ನೃಪತಿ ದಕ್ಷಿಣೆಗೆ
ಸಲಿಸಿ ಸರ್ವಸ್ವಮಂ ವಿಶ್ವಜಿನ್ಮಖವೆಸಗಿ
ನಲಿದನಂಬುದನಿವಹಕೆಂತಂತೆ ಸಜ್ಜನಕ್ಕಾರ್ಜನಂ ದಾನಕಲ್ತೇ||

ತನಗೆ ದಿಗ್ವಿಜಯದೊಳ್ ವಶರಾಗಿ ಬಂದಖಿಲ
ಜನಪರ್ಗೆ ಜನಿಸಿರ್ದ ಸೋಲಿನಳಲೆಲ್ಲಮಂ
ಘನಮಪ್ಪ ಸತ್ಕಾರದಿಂದೆ ಕಳೆಯುತೆ ಮಂತ್ರಿಯುತನಾಗಿ ಕಾಕುತ್ಥ
ಅನಿತುಕಾಲಂ ಕಾಂತರಗಲಿಕೆಯನಾಂತ ತ
ದ್ವನಿತೆಯರ್ ಕಳವಳಿಪರೆಂದು ನಿಜನಗರಂಗ
ಳನು ಸೇರಲಾ ನೃಪತಿಗಳಿಗಾಣತಿಯನಿತ್ತನಾತಂ ಮುಖಾಂತದಲ್ಲಿ||

ಅನುಪಮಿತಕೀರ್ತಿ ರಘುಚಕ್ರವರ್ತಿಯ ಕುಲಿಶ
ವನಜಾದಿರೇಖಾಂಕಿತಂ ಪ್ರಸಾದಸುಲಭ್ಯ
ಮೆನಿಪ ಪದಪಂಕೇಜಯುಗಕೆ ಸತ್ಕೃತರಾಜರೆಲ್ಲರುಂ ಪ್ರಸ್ಥಾನದಾ
ಪ್ರಣತಿಗಳನೆಸಗುತಂ ನಿಜಮೌಳಿಧೃತವಿನೂ
ತನಮಾಲೆಗಳಿನ್ಯದೆ ಗಲಿತಸುಮರಸರಜೋ
ಗಣದಿಂ ತದಂಘ್ರಿಯಂಗುಲಿಗಳಂ ಗೌರವರ್ಣಾಂಗಳಂ ನೆಗಳ್ದರವರ

# ಪಂಚಮಸರ್ಗಂ

ಸೂ:—ಎರೆವ ಧನವೀಯೆ ತುಷ್ಟಿಯನಾಂತ ಮುನಿಯಿತ್ತ
ಪರಕೆಯಿಂದೊಗೆದಜಕುಮಾರನಂ ರಘುಮಹೀ
ಶ್ವರನಿಂದನುಮತಿಯು ಸ್ವಯಂವರಕ್ಕಾಗಿ ವೈದರ್ಭನಗರಿಗೆ ಕಳುಪಿದಂ॥

ವರತಂತುಋಷಿಯಿಂದೆ ಕಲಿತನಿತು ವಿದ್ಯೆಯಂ ೧
ಗುರುದಕ್ಷಿಣಾಧನಾರ್ಜನೆಗಾಗಿ ಕೌತ್ಸನೈ
ತರೆ ವಿಶ್ವಜಿನ್ಮಖದೊಳಖಿಳಕೋಶವ ದಾನಗೆಯ್ದಿರ್ದ ರಘುವಿನೆಡೆಗೆ ॥
ವರಕೀರ್ತಿಧವಳನುಮನರ್ಘಶೀಲನುಮತಿಥಿ
ಪರನೆನಿಪ ತನ್ನೃಪಾಲಂ ಪೊಂವಳಿಗೆಯಿಲ್ಲ
ದಿರೆ ಮಣ್ಣಪಾತ್ರೆಯೊಳಗರ್ಘ್ಯವಿಟ್ಟಾ ಪ್ರತಿಜ್ಞನನಿದಿರ್ಗೊಂಡನೊಲವಿಂ॥

ಭರದೆ ಗದ್ದುಗೆಯಲ್ಲಿ ತತ್ತಪೋನಿಧಿಯ ಕು ೨
ಳ್ಳಿರಿಸಿ ಸತ್ಕ್ರಮದೊಳರ್ಚಿಸಿ ಸಮೀಪದೊಳಿರ್ದು
ಕರವ ಜೋಡಿಸಿ ಮಾನಧನನುಂ ವಿಧಿಜ್ಞನಾದರಸನಿಂತೆಂದು ಕೇಳ್ದಂ॥
ಖರಕಿರಣನಿಂ ಜಗಂ ಚೈತನ್ಯವಾಂತವೊಲ್
ಪರತರಜ್ಞಾನಮಂ ನೀಂ ಪಡೆದುದಾವಸ [ತಿಯೇ ॥
ದ್ಗುರುವಿನಿಂದಾ ಮಂತ್ರಕರ್ತೃಮುನಿಪುಂಗವಂ ಕುಶಲಮೇಂ ಕುಶಲಮ

ಪರಮರ್ಷಿವರತಂತು ತಾಂ ಕಾಯವಾಙ್ಮನಃ ೩
ಕರಣದಿಂ ಪಡೆದಿಂದ್ರಧೃತಿಹರಮೆನಿಪ್ಪ ಮೂ
ದೆರದ ತಪಕಂತರಾಯಂಗಳಿಂದಾವ ಕುಂದುಂ ಮೂಡದಿಹುದೆಮತ್ತಂ॥
ನೆರೆ ಪಾತೆಗಟ್ಟಿ ನೀರೆರೆವುದೇ ಮೊದಲಾದ
ವರಯತ್ನದಿಂ ಸುತರನೆಂತಂತೆ ಸಾಕೆ ಬೆಳೆ
ದಿರುವಾಶ್ರಮಶ್ರಮನಿವಾರಕತರುವ್ರಜಕೆ ಮರುತಾದಿ ಬಾಧೆಯಿಲ್ಲೇಂ॥

ತಪಗೆಯ್ಯುದಿರಲಳ್ತಿಯಿಂ ಮುನಿಗಳನುದಿನದ ೪
ನಡೆಗೆ ಸಾಧನದಾ ಕುಶಂಗಳನೆ ತಿನುತವರ
ತೊಡೆಪಾಸಿನೊಳ್ ಜಗುಳ್ದ ನಾಭಿನಾಳದ ಮೃಗೀಸಂತತಿಗೆ ಸೌಖ್ಯವೇನು॥

ಬಿಡದೆಸಪ ಮಜ್ಜನಕೆ, ಪಿತೃಗಳ್ಗೆ ತರ್ಪಣವ
ಕೊಡುವುದಕೆ ಬೇಕಾದ ನಿಮ್ಮ ತೀರ್ಥಜಲಂಗ
ಳೆಡೆಯೊಳಿರ್ಪುಂಝಷಾಂಕಿತದ ಪುಳಿನಂಗಳೊಡನೆ ಭದ್ರಂಗಳೇನು||

ಸಲಿಪತಿಥಿಸತ್ಕಾರಕಂ ದೇಹರಕ್ಷಣೆಗೆ ೫
ಸಲೆ ಸಾಧನಂಗಳಹ ನೀವಾರಧಾನ್ಯಾದಿ
ಗಳಿಗೆ ಜನಪದದಿಂದೆ ಬಂದ ಗೋಮಹಿಷಾದಿವೃಂದದಿಂ ಬಾಧೆಯಿಲ್ಲೆಂ? ||
ವಿಲಸದಖಿಳಸುವಿದ್ಯೆಗಳ ಕಲಿಸಿದಾ ಮುನಿಪ
ನೊಲಿದು ನೀಂ ಗೃಹಿಯಾಗಲನುಮತಿಸಿದನೆ? ಭಾವಿ
ಸಲು ನಿನಿಗಿದಲ್ತೆ? ಸರ್ವೋಪಕಾರಕ್ಷಮಾಶ್ರಮವನದಸಾಂಪಕಾಲಂ||

ಮನಮುನ್ನದೀಗ ನೀಂ ಬಂದಮಾತ್ರಕೆ ತೃಪ್ತ ೬
ಮೆನಿಸದೆ ಸುಪೂಜ್ಯ! ನಿನ್ನಯ ಬೆಸನಮಂ ನಡೆವು
ದನೆ ಬಯಿಪುದೆನ್ನ ಗೌರವಿಸಲೇಂ ನೀನೆಬಂದೆಯೊಕಳುಪಿದನೊಮುನಿಪರಂ||
ಎನೆ ಜನಪನವನುದಾರೋಕ್ತಿಯಂ ಕೇಳ್ದೊಡಂ
ಮುನಿಶಿಷ್ಯನಾ ಅರ್ಘ್ಯಪಾತ್ರೆಯಿಂದಾತನೊಳ್
ಧನಮಿಲ್ಲಮೆಂದರಿದು ತನ್ನಿಷ್ಟಫಲದೊಳ್ ನಿರಾಶನಾಗಿಂತು ಪೇಳ್ದಂ।

ಸಲೆ ಸೌಖ್ಯಮೆಮಗಖಿಳವಿಷಯದೊಳ್ ಭೂನಾಥ ೭
ತಿಲಕ! ನಿನ್ನೊಡೆತನದೊಳಶುಭಮಿಲ್ಲಂ ಜನಕೆ [ಸ್ರಂ||
ಜಲಜಾಪ್ತನಿರೆ ಬೆಳಗುತಿರೆ ಲೋಕದೃಷ್ಟಿಯಂಮುಸುಕಲಾರ್ಪುದೆತಮಿ
ಕುಲಕೆ ಸಮುಚಿತಮಾಗಿ ಪೂಜ್ಯರೊಳ್ ತೋರ್ಪನಿ
ನ್ನಲಘುಭಕ್ತಿಯೊಳ್ಮಿಪೆ ಪೂರ್ವಜರ ಮೀರಿರ್ಪೆ [ದಂ||
ಯೆಲೆಜನಪ! ಸಮಯಮಂಮೀರ್ದು ಯಾಚನೆಗೆಬಂದುದುಮಾತ್ರಮೆನಗೆ ಖೇ

ಧನಮೆಲ್ಲಮಂ ಪುಣ್ಯಕೃತಿಗಿತ್ತು ಭೂಪತಿಯೆ ೮
ತನುಮಾತ್ರದಿಂದುಳಿದ ನೀಂ ರಾಜಿಸುವಿಯಲ್ತೆ
ವನವಾಸಿಗಳಿಗಖಿಳಫಲವಿತ್ತು ಕಾಂಡದಿಂದುಳಿದ ನೀವಾರದಂತೆ॥
ನಿನಗೆ ವರಸಾರ್ವಭೌಮನೆ! ಯಜ್ಞಜನಿತನಿ
ರ್ಧನತೆಯಿದು ಭೂಷಣಂ ಕ್ರಮದೆ ಸುರರಿಂ ಪೀತ [ಲ್ತೆಂ||
ನೆನಿಪಚಂದ್ರಂಗಮೃತಸಂಕ್ಷಯಮೆ ವೃದ್ಧಿಯಿಂ ಶ್ಲಾಘ್ಯತರಶೋಭೆಯ

ಅದರಿಂದನನ್ಯಕೃತಿಯಾದ ನಾಂ ಬೇರೆಡೆಗೆ ೯
ಮುದದಿಂದೆ ಗುರುಧನಾರ್ಜನೆಗೆ ಪೋಪೆಂ ನಿನ್ನ
ಗೊದಗುಗೆಶುಭಂ ವಾರಿರಹಿತಶರದಂಬುದವ ಯಾಚಿಪುದೆಚಾತಕಂತಾಂ||
ವಿದಿತಶಾಸ್ತ್ರಂ ಕೌತ್ಸನಿಂತೊರೆಯು ಪಿಂತಿರುಗು
ವುದಕೆಳಸುತಿರಲಾ ತನಂತಡೆಯು ನಿನ್ನಗುರು
ಪದಕರ್ಪಿಸುವ ವಸ್ತುವೇನೆನಿತು? ಶೃತಿವಿದನೆ! ಪೇಳೆಂದು ನೃಪತಿನುಡಿದಂ||

ಬಳಿಕಂ ಯಥಾವಿಧಿಕೃತಾಧ್ವರಂ ಗತಗರ್ವ ೧೦
ನಿಳೆಯ ವರ್ಣಾಶ್ರಮಂಗಳ ಪಾಲಕನುಮಾಗಿ
ಬೆಳಗುವಾ ದೊರೆಗೆ ಸುವಿಚಕ್ಷಣಂ ತದ್ಬ್ರಹ್ಮಚಾರಿಯೊತೆರದೊಳೊರೆದಂ||
ಕಲಿತಖಿಳವಿದ್ಯೆಗಾಂ ಕೊಡುವ ಗುರುದಕ್ಷಿಣೆಯ
ತಿಳಿಸೆಂದು ಮುನಿಗೆ ಬಿನ್ನವಿಸೆ, ತಾಂ ತನಗೆ ನಾಂ
ಸಲಿಸಿರ್ದಸೇವೆಯೇ ಸಾಕೆಂದು ಮೊದಲೊರೆಯೆ ನಾಂ ತೃಪ್ತನಾಗಲಿಲ್ಲಂ||

ಗುರುವನಾಂ ನಿರ್ಬಂಧಪಡಿಸೆ ಮತ್ತಂ ಮುಳಿದು ೧೧
ನೆರೆಗಣಿಸದೆನ್ನ ನಿರ್ಧನತೆಯಂ ವಿದ್ಯೆಗಳ
ಪರಿಸಂಖ್ಯೆಯಿಂ ಧನವಪದಿನಾಲ್ಕುಕೋಟಿಯಂ ತರುವುದೆಂದಾತನೊರೆದಂ||
ಅರಸ ನೀಂ ಪ್ರಭುಶಬ್ದಶೇಷನಾಗಿರುವೆಯೆಂ
ದರಿದೆ ನರ್ಘ್ಯದ ಪಾತ್ರೆಯಂ ನೋಡಿ ಮುನಿಬೇಡು
ತಿರುವ ವಿದ್ಯಾಮೂಲ್ಯಮಧಿಕಮುದರಿಂ ನಿನ್ನನೀಗ ಪೀಡಿಸಲಾರೆನಾಂ||

ಒರೆಯೆ ಶೃತಿಪಾರಗಂ ದ್ವಿಜನೀಪ್ರಕಾರದಿಂ ೧೨
ಮರಳಿ ತದ್ದ್ವಿಜರಾಜತೇಜನುಂ ಘೋರತರ
ದುರಿತದೂರೇಂದ್ರಿಯವ್ಯಾಪಾರನೆನಿಪನೃಪನಾ ತಪಸಿಗಿಂತು ನುಡಿದಂ||
ಗುರುವಿಗರ್ಪಿಸುವ ದಕ್ಷಿಣೆಯ ಯಾಚನೆಗೆ ರಘು
ವರನೆಡೆಗೆ ಬಂದದಂ ಪೊಂದದನ್ಯರ ಬಳಿಗೆ
ತೆರಳಿದಂ ವೇದಜ್ಞವಿಪ್ರನೆಂದೆಂಬ ನವನಿಂದೆ ಬರದಿರ್ಕೆ ನನಗೆ||

ಇರು ಮೂರುನಾಲ್ಕುದಿನಮೆನ್ನ ಮಹಿತಾಗ್ನಿಪಂ ೧೩
ದಿರದಲ್ಲಿ ನೀಂ ಚತುರ್ಥಾಗ್ನಿಯೆಂದದೆ ಪೂಜ್ಯ
ವರನೆ! ನಿನ್ನರ್ಥಮಂ ಸಾಧಿಸುವ ಯತ್ನಮಂ ಮಾಳ್ಪೆನೆಂದಂ ಮಹೀಶಂ||

ಧರಣೀಸುರಂ ಪ್ರೀತನಾಗುತಂತಾಗಲಿಂ
ದರಸನಾ ಸತ್ಯಪ್ರತಿಜ್ಞೆಗೊಪ್ಪಿರೆ ಧರೆಯ
ಸಿರಿ ಮೊದಲೆ ಕೈಸೇರ್ದ್ವಕತದೆ ಧನಪನ ಧನವ ತರಲೆಳಸಿದಂ ತನ್ನೃಪಂ॥

ಗುರುವಸಿಷ್ಠನ ಮಂತ್ರಜಲದ ಸಂಪ್ರೋಕ್ಷಣದೆ ೧೪
ದೊರೆದ ಪ್ರಭಾವದಿಂ ರಘುರಥಂ ಗಗನಾಬ್ಧಿ
ಗಿರಿಗಳೊಳ್ ತಡೆಯುಲ್ಲವಂತೆ ಚರಿಸುವದಲ್ತೆ ವಾಯುಯುತಮೇಘವಂತೆ॥
ಹರಸಖನಸೋರ್ವ್ವ ಸಾಮಂತನಿಗೆ ಸರಿಗಂಡು
ಪರಬಲದೊಳಾತನಂ ಗೆಲಲೆಳಸಿ ತದ್ಧೀರ
ನರನಾಥನಾ ಪರೂಥದೊಳಂಬುಗಳನಿಟ್ಟು ಮಲಗಿದಂ ಸಂಜೆಯಲ್ಲಿ॥

ಬಂಡಾರದೊಳ್ ಬಾನಿನಿಂ ಪೊನ್ನ ಮಳೆ ಸುರಿಯೆ ೧೫
ಕಂಡು ಕಾವಲಿಯು ಜನರಚ್ಚರಿಯೊಳೈತಂದು [ರು।
ಚಂಡಕರನುದಯದೊಳ್ ಪಯಣಗೊಂಡಿರ್ಪ ರಘುರಾಜಚಂದ್ರಂಗೊರೆದ
ದಂಡೆತ್ತಿ ಪೋಪುದಕೆ ಮೊದಲೆ ಧನಪಂ ಭೀತಿ
ಗೊಂಡು ಸುರಿಸಿದ ಹೇಮರಾಶಿ ತಾಂ ವರಕುಲಿಶ
ಖಂಡಿತಸುಮೇರುಪಾವದೊಲೊಪ್ಪೆ ನೃಪನಿತ್ತನದನೆಲ್ಲಮಂ ದ್ವಿಜಂಗೆ॥

ಗುರುವಿಗರ್ಪಿಸುವ ಧನದಿಂದಧಿಕಮಂ ಬಯಸ ೧೬
ದಿರುವರ್ಥಿ ಯರ್ಥಿವಾಂಛೆಯಿನಧಿಕಮಂ ಕೊಡುವ
ನರಪ ನವರೀರ್ವ್ವರಾ ನಿಸ್ಪೃಹತೆಯಂ ಪೊಗಳಿದುದು ಜನಂ ಸಾಕೇತದಾ॥
ತರುವಾಯುಮೊಳ್ ತನ್ನ ಯುಷ್ಟ್ರಾಶ್ವಶತದ ಮೇ
ಲುರೆ ಪೊನ್ನ ರಾಶಿಯೆಲ್ಲವನೇರಿಸುತೆ ಮುಂದೆ
ಶಿರವಾಗಿ ನಿಂದ ನೃಪನಂ ಕರವೆ ಮುಟ್ಟುತಿಂತೆಂದನೊಲವಿಂದೆ ಕೌತ್ಸಂ॥

ನರಪನಿರೆ ಸದ್ವೃತ್ತದೊಳ್ ಕಾಮಿತಂಗಳಂ ೧೭
ಧರಣಿ ತಾನೀವುದಚ್ಚರಿಯೆ! ಸುರಸರಣಿಯುಂ
ಸುರಿಮುದಿಷ್ಟಾರ್ಥಮಂ ರಘುರಾಜ! ನಿನ್ನಮಹಿಮೆಯುವಚಿಂತ್ಯಂ ಬಗೆವಡೆ॥
ಅರಸ ಸರ್ವಶ್ರೇಯವಾಂತ ನಿನಗಾಂ ಬೇರೆ
ಪರಸುವುಮ ಪುನರುಕ್ತಮಲ್ತೆ? ನಿನ್ನಯ ಪಿತಂ
ಪರಿಪೂಜ್ಯನಾವ ನಿನ್ನಂ ಪಡೆವತೆರವೆ ನೀಂ ಪಡೆ ನಿನ್ನೊಲಿರ್ಪ ಸುತನಂ॥

ಕ್ಷಿತಿವಲ್ಲಭಂಗಿಂತು ಪರಸಿ ಗುರುಪದವನಾ ೧೮
ಕೃತಿವಿದಂ ಸೇರೆ ತದ್ವರದಿಂದೆ ರಾಜನುಂ
ಸುತನನಾಂತಂ ಕ್ಷಿಪ್ರದೊಳ್ ಲೋಕಮಿನನಿಂದೆ ತೇಜಮಂ ಪಡೆವತೆರದಿಂ॥
ಸುತಕುಮಾರೋಪಮಕುಮಾರನಂ ತನ್ನರಸಿ
ಮತಿಹರ್ಷದಿಂ ಬ್ರಾಹ್ಮಸುಮುಹೂರ್ತದೊಳ್ ಪೆತ್ತ
ಕತಪೆ ತದ್ಬ್ರಹ್ಮಬೋಧಕಮೆನಿಸುವಜನಾಮಮಂ ಮಗನಿಗಿಟ್ಟನರಸಂ॥

ನಿರುಪಮಿತರೂಪದಿಂ ತೇಜದಿಂ ಬಲದೊಳಂ ೧೯
ಪರಿಲಸತ್ ಸ್ವಾಭಾವಿಕೌನ್ನತ್ಯದಿಂದಜಂ
ಧರಿಸನೆನಿತುಂ ಭೇದಮಂ ತಂದೆಯಿಂ ಪ್ರದೀಪದಿನೊಗೆದ ದೀಪದಂತೆ॥
ಗುರುಗಳಿಂ ಕ್ರಮದೆ ವಿದ್ಯೆಯ ಕಲಿತು ಯೌವನದ
ವರಕಾಂತಿಯಿಂ ಮೆರೆಯುವಾತನಂ ರಾಜ್ಯರಮೆ ನೆರೆ
ಬಯಸಿಯುಂ ಧೀರಕನ್ಯೆಯೋಲ್ ಪಿತನಾಜ್ಞೆಯಂ ಕಾದುಕೊಂಡಿರ್ದಳು॥

ತರುವಾಯದೊಳ್ ವಿದರ್ಭೇಶಭೋಜಂ ತನ್ನ ೨೦
ವರಸಹೋದರಿಯೆನಿಪ್ಪಿಂದುಮತಿಯ ಸ್ವಯಂ
ವರಕಜಕುಮಾರನಂ ಕರೆಯಲಟ್ಟಿದನಾಪ್ತದೂತನಂ ರಘುವಿನೆಡೆಗೆ॥
ಅರಿದು ಭೋಜಶ್ಲಾಘ್ಯಸಂಬಂಧಮಂ ಮತ್ತ
ಮಿರದೆ ಮಗನುದ್ವಾಹಯೋಗ್ಯದಶಮಂ ದಿನೇ
ಶ್ವರವಂಶದರಸು ಸುತನಂ ಕಳುಪಿದಂ ಸೈನ್ಯದೊಡನಾ ವಿದರ್ಭಪುರಿಗೆ॥

ನೆಲದೆರೆಯನಣುಗನಿಗೆ ಪಟಗೃಹಾದಿಗಳಲ್ಲಿ ೨೧
ಸಲೆ ರಚಿತವಾಸಂಗಳಧ್ವದೊಳ್ ಪ್ರಜೆಗಳಿಂ
ಸಲಿಪ ಕಾಣಿಕೆಗಳಿಂ ವನ್ಯಂಗಳೆಸಿಸದುಪವನವಿಹಾರಂಗಳೆನಿಸೆ॥
ಕುಳಿರಿಡಿದ ಗಾಳಿಯಿಂ ಚಲಿಪ ಚಿರಬಿಲ್ವತರು
ಗಳಿನೊಪ್ಪುವಾ ನರ್ಮದೆಯ ತಟವ ಸೇರುತ
ಪ್ಲಳಿಸಿದಂ ಬಳಲಿರ್ದ ಸೈನ್ಯಮಂ ಧೂಳಿಧೂಸರಕೇತುಗಣಮನಾತಂ॥

ಬಳಿಕೊಂದು ವನ್ಯದ್ವಿಪಂ ಧೌತದಾನನಿ ೨೨
ರ್ಮಳಕಪೋಳಂ ನರ್ಮದಾನದಿಯಿನೆಳ್ದುದದು
ಮುಳಿಗಿರ್ಪುದಂ ಮೊದಲೆಸೂಚಿಸಿರೆ ತಜ್ಜಲದ ಮೇಲೆ ಸುಳಿವಳಿಸಂಕುಲಂ॥

ತಿಳಿಸಿದಿದು ಋಕ್ಷವದ್ಗಿರಿಸಾನುಕೇಳಿಯಂ
ಸಲೆಧಾತುಗಳ ಬಣ್ಣವಳಿದಿರ್ದೊಡಂ ನೀಲ
ಕಲಿತರೇಖಾಚಿತ್ರಮಾದಂತಿದಂತಯುಗಮುಪಲಕುಂಠಿತಮಾಗಿ ತಾಂ||

ಕರಿಯದತಿಜವದಿಂ ಮುಗುಳ್ಚುತೆ ನಿಮಿರ್ಚುತಿಹ ೩೫
ಕರದೆ ರವಮೊಗೆವಂತೆ ತೆರೆಗಳಂ ಭೇದಿಸುತೆ
ಬರುತಿರೆ ನದೀತಟಕೆ ಬಂಧನಸ್ಥಲದ ತಡೆಗಡಿಯುತ್ತೈತರುವೊಲಿಸಿಗುಂ||
ಗಿರಿನಿಭಮೆನಿಪ್ಪಾ ಇಭಂ ತನ್ನುರಸ್ಥಲದೆ
ಪರಿದು ಶೈವಲವ ತಡಿಯಂ ಸೇರ್ವುದಕೆ ಮೊದಲೆ
ಭರದೊಳೈತಂದು ಸೇರ್ದುದು ತದುತ್ಪೀಡಿತೋದಕರಾಶಿಯು ಪ್ರವಾಹಂ||

ಪುರದ ಕರಿಗಳ ದರ್ಶನದೆ ಮರಳಿ ಪಿರಿದೆನಿಸಿ ೩೬
ಸುರಿದುದುದಕಕ್ರೀಡೆಯಿಂ ಕ್ಷಣಂ ಶಾಂತತೆಯ
ಧರಿಸಿರ್ದ ಗಂಡಮಂಡಲದಾನವರ್ಷಮಾ ವನ್ಯವಾರಣರಾಜನಾ||
ವರಸಪ್ತಪರ್ಣರಸಗಂಧಪ್ರಸಾರಮಂ
ನೆರೆತಾಳ್ದಸಹ್ಯಮಪ್ಪದರ ಮದಮಂ ಮೂಸಿ [ಯಾ||
ತಿರುಗಿಸುತೆ ಮೊಗವ ಮಾವಂತರ್ಗೆ ಸಿಗದೋಡಿದವು ಪಿಡಿಗಳರಸುಪಡೆ

ಪರಿದು ಬಂಧಂಗಳಂ ತುರಗಂಗಳೋಡೆ ಮೇಣ್ ೩೭
ಮುರಿದಕ್ಷದಿಂ ನೆಲಕ್ಕುರುಳೆ ತೇರ್ಗಳ್ ಸೈನಿ
ಕರ ನಿಕರಮಬಲೆಯರ ರಕ್ಷಣೆಗೆ ನಿಲೆ ಶಿಬಿರಮಂ ಕ್ಷಣದೊಳಂತುಗೆಯ್ದು||
ಬರುವ ಗಜಮಂ ನೋಡಿ ದೊರೆಗವಧ್ಯಂ ವನ್ಯ
ಕರಿಯೆಂಬುದರಿದಾ ಕುಮಾರನಾ ಇಭವ ಪಿಂ
ತಿರುಗಿಸಲ್ಕದರಕುಂಭಕ್ಕೆಚ್ಚನಂಬುವಂ ನಸುಸೆಳೆದ ಬಿಲ್ಲಿನಿಂದಂ||

ಸರಳ ಸಂಸ್ಪರ್ಶಮಾತ್ರಕೆ ನಾಗದೇಹಮಂ ೩೮
ತೊರೆದು ದಿವ್ಯಪ್ರಭೆಯ ಖೇಚರಕಳೇಬರವ
ಧರಿಸಿದುದು ತದ್ಗಜಂ ಬೆರಗುವಡೆದವಕೆ ಸೈನಿಕರೆಲ್ಲರೀಕ್ಷಿಸುತಿರೆ||
ತರುವಾಯ ಮಾತ್ಮಪ್ರಭಾವೋಪನತಮಪ್ಪ
ಸುರತರು ಸುಮಾಳಿಯಂ ಸುರಿಸುತಜಶಿರವಲ್ಲಿ
ನೆರೆ ಪೆರ್ಚೆ ದಂತಕಾಂತಿಯಿನುರವಹಾರಮುಚಿ ನುಡಿದನಾ ದಿವ್ಯದೇಹಿ||

ತಿಳಿ ನೃಪಾತ್ಮಜ! ನನ್ನ ಗರ್ವಕೆ ಮತಂಗಮುನಿ ೨೭
ಮುಳಿದಿತ್ತ ಶಾಪದಿಂದೀ ಮತಂಗಜತನುವ
ತಳೆದೆನಾ ಪ್ರಿಯದರ್ಶನಾಖ್ಯಗಂಧರ್ವಪತಿತನಯಂ ಪ್ರಿಯಂವದಂ ನಾಂ॥
ಬಳಿಕಮಾ ಋಷಿವರಂ ನನ್ನ ಪ್ರಣತಿಯಿಂದೆ
ಸಲೆ ಶಾಂತಿಭಾವಮಂ ಪಡೆದನನಲಾತಪಂ
ಗಳ ಸಂಗದಿಂ ಜಲಕೆ ಬರ್ಪುದುಷ್ಣತೆ ಸಹಜಗುಣಮದಕೆ ಶೈತ್ಯಮಲ್ತೇಂ॥

ಎಂದು ಮುನಿನಂಶಸಂಭವನಜಂ ಲೋಹಶರ ೨೮
ದಿಂದೆ ನಿನ್ನಯ ಕುಂಭಮಂ ಭೇದಿಪನೊ ಅಂದು
ಪೋಂದುವೆ ನಿಜಾಂಗಮಂ ನೀನೆಂದು ಪೇಳ್ದನೆನಗಾ ತಪೋನಿಧಿಚಂದ್ರಮಂ॥
ಅಂದಿನಿಂ ನಿನ್ನದರ್ಶನವನೆಳಸುತಿರೆ ನೀಂ
ಬಂದೆನ್ನ ಶಾಪಮಂ ನೀಗಿದೆ ಬಲಾಢ್ಯನೇ!
ಇಂದುಸಾಂ ಪ್ರತಿಹಿತವನೆಸಗದಿರೆ ನಿಜಪದಪ್ರಾಪ್ತಿ ತಾಂ ವ್ಯರ್ಥಮಲ್ತೆ॥

ಎಲೆ ಸಖನೆ! ಬಿಡುವ ಪಿಂತೆಗೆವ ಮನುಭೇದದಿಂ ೨೯
ಪೊಳೆವ ಗಾಂಧರ್ವಸಂಮೋಹನಾಸ್ತ್ರವ ನೀವೆ [ಮಂ॥
ನೊಲವಿನಿಂ ಗ್ರಹಿಸು ನೀಂ ರಿಪುಹಿಂಸೆಯಂ ಮಾಡದೀವುದದು ಕ್ಕೆಗೆ ಜಯ
ತೊಲಗಿಸೈ ಮದ್ವಿಷಯಕದ ಲಜ್ಜೆಯಂ, ಕೃಪೆಂಪ
ತಳೆದೆಯೆನ್ನಂ ಪ್ರಹರಿಸುವಕಾಲದೊಳಮಲ್ತೆ?
ಸಲೆ ಬೇಡುವೆನ್ನಿಚ್ಛೆಯಂ ನಿಷೇಧಿಸುತೀಗ ಕಠಿಣತೆಗೆ ಮನಗೊಡದಿರು॥

ಅಂತಾಗಲೆಂದಸ್ತ್ರವಿದನಜಂ ವಿಮಲತೆಯ ೩೦
ಸಾಂತ ನರ್ಮದೆಯ ಜಲದಿಂದಾಚಮನವಿಧಿಯ
ಸಂತಸದೆ ಗೆಯ್ದುದಙ್ಮುಖನಾಗಿ ಪಡೆದನಸ್ತ್ರದ ಮಂತ್ರಮಂ ಖಚರನಿಂ॥
ಇಂತು ಪಥದೊಳ್ ದೈವಯೋಗದಿಂ ಸಖ್ಯಮನ
ಚಿಂತ್ಯಮಂ ಪೊಂದಿದವರೊಳ್ ಕುಬೇರನ ವನ
ಪ್ರಾಂತಕೋರ್ವಂ ವಿದರ್ಭಸುದೇಶಕೋರ್ವನುಂ ತೆರಳಿದರನಂತಮುದದಿಂ॥

ಪುರದ ಬಳಿಸೇರ್ದ ರಾಜಕುಮಾರನಂ ವೈದರ್ಭ ೩೧
ನುರೆ ತಡಾಗಮನದಿಂ ಪೆರ್ಚಿದಾನಂದದಿಂ
ತರಧಿ ತಾಂ ಪರಿವರ್ಧಿತೋರ್ಮಿಯಿಂಚಂದ್ರಮನನೆಂತಂತಿ ವಿರ್ದ್ಗೊಂಡನು॥

ತೆರಳುತಂ ವಿನಯದಿಂ ಮುಂದೆ ಪೊಳಲೊಳಪುಗಿಸಿ
ದರಸುಮಗನಿಗೆ ನಿಜೈಶ್ವರ್ಯವಿತ್ತ್ರಪನನುಪ
ಚರಿಪಭೋಜನೆ ಅತಿಥಿಯಜನೆ ಗೃಹದೊಡೆಯನೆಂದರಿಪರಲ್ಲಿರ್ಪಜನರು||

ಸುರಪ ದಿಗ್ದ್ವಾರವೇದಿಕೆಯೊಳಿಟ್ಟಿರ್ಪ ಭಾ ೩೨
ಸುರಮಂಗಳಸುಪೂರ್ಣಕಲಶಂಗಳಿಂದೊಪ್ಪು
ತಿರುವ ನೂತನರಾಜಭವನಮಂ ಭೋಜಾಧಿಕಾರಪುರುಷರ್ಕಳಿಲ್ಲಂ||
ಶಿರವಾಗಿ ತೋರಿಸುತ್ತಿರೆ ರಘುಪ್ರತಿನಿಧಿಯು
ಹರುಷದಿಂ ಬಂದಲ್ಲಿ ವಾಸಮಂ ಮಾಡಿದಂ
ಸರಸಿಜಶರಂ ಶೈಶವಾನಂತರಂ ಬರ್ಪ ಹರೆಯದೊಳ್ ನೆಲಸಿದಂತೆ||

ಧರಣೀಶಚಯಮಂ ಸ್ವಯಂವರನಿಮಿತ್ತದಿಂ ೩೩
ಕರೆಯಿಸಿದ ಕಮನೀಯಕನ್ಯಾಮಣಿಯ ಪೊಂದ
ಲುರೆ ಬಗೆಯುತೊರಗಿದಾ ರಘುಕುಮಾರನ ಕಣ್ಣಸಂಮುಖಕೆ ರಾತ್ರಿಯಲ್ಲಿ||
ಚಿರಕಾಲಮುಂ ಕಳೆದು ಕಡೆಗೊಯ್ಯನೊಯ್ಯನೈ
ತರುತಿರ್ದಳಾ ಭವನದಲ್ಲಿ ನಿದ್ರಾವನಿತೆ
ಪುರುಷಭಾವಂಗಳಂ ತಿಳಿಯಲಸಮರ್ಥಳೆನಿಸಿದ ದಯಿತೆಯಂದದಿಂದಂ||

ಅನುಪಮಿತಪೀವರಭುಜದ್ವಯಂ ಕರ್ಣಭೂ ೩೪
ಷಣನಿಪೀಡನವಸಾಂತಿರೆ ತಲ್ಪವಸ್ತ್ರಘು
ರ್ಷಣದೊಳಿರವಂಗರಾಗಂಸವೆದು ಪೋಗಿರೆ ಸುಮತಿಯಾದ ರಘುಸುತಂಗೆ।
ಇನನುದಯದೊಳ್ ಪ್ರಗಲ್ಭತರವಾಗ್ಭಣಿತಿಯುತ
ರೆನಿಪ ವೈತಾಲಿಕರ್ ಸಮವಯಸ್ಕರ್ ಬಂದು
ಘನಮಪ್ಪ ನುತಿಪಾಠನಿವಹದಿಂದೆಚ್ಚರಿಸಲನುವಾದರಾ ಯುವಕನಂ||

ಗತಮಾಯ್ತು ರಾತ್ರಿ ಬಿಡು ಶಯನಮಂ ಮಹಿತಮತಿ ೩೫
ಯುತರೊಳಗ್ರೇಸರನೆ! ಜಗದ ಗುರುಭಾರಮಂ
ಚತುರಾನನಂ ದ್ವಿವಿಧಮಾಗಿಯೇ ಭಾಗಮಂ ಗೆಯ್ದಿರ್ಪನವುಗಳಲ್ಲಿ||
ಗತನಿದ್ರನಾಗಿ ತಾಂ ತಾಳ್ದಿರ್ಪನಾ ನಿನ್ನ
ಪಿತನೊಂದನಿನ್ನುಳಿದುದಂ ನೀನೆ ವಹಿಸಿರ್ಪ
ಕ್ಷತಮಿಂದೆ ಜವದೊಳೆಚ್ಚರಗೊಳ್ಳುದೀಗ ನೀಂ ರವಿಕುಲಾಂಭೋಧಿಚಂದ್ರ||

ತರಣಿಕುಲದರಸುಗುವರನೆ ನಿನ್ನ ಮೇಲಧಿಕ ೩೬
ತರಮೋಹಮಿರ್ದೊಡಂ ಸಿರಿಗೆ ನಿದ್ರಾಂಗನಾ
ಪರನಾಗಿ ನೀನಿರ್ಪುದಂ ನೋಡುತವಳು ತಾಂ ಖಂಡಿತಾಬಲೆಯತೆರದಿಂ॥
ಇರದುಪೇಕ್ಷಿಸಿ ನಿನ್ನನಿರುಳಿನಲ್ಲಾವನೊಳ್
ನೆರೆ ಬಿನದಮಂ ಗೆಯ್ವಳಾ ಚಂದ್ರನುಂ ತಾನ
ಪರದಿಗಂತವ ಸೇರ್ದು ನಿನ್ನ ವದನದ ಕಾಂತಿಯಂ ತ್ಯಜಿಸುತಿರ್ಪನೀಗಂ॥

ಸಿರಿಯನೊಳಗಿರಿಸಿಕೊಂಡೇಕಕಾಲದೊಳೆ ತಾ ೩೭
ವರಳುತೆರಡುಂ ಮನೋಜ್ಞತೆಯಪಡೆಯುತೆ ಪರ
ಸ್ಪರಸಾಮ್ಯಮಂಪೊಂದಿ ರಾರಾಜಿಸುಗೆ ಬಗೆವಡಂತಿರ್ಪುವಾ ವೆಂಬೆಯಾ॥
ನೆರೆ ಚಲನ್ಮಧುರತಾರಕೆಯನೊಳಕೊಂಡು ತಾಂ
ಮೆರೆವ ನಿನ್ನಯ ಲೋಚನಮದೊಂದು ಮತ್ತಮಂ
ತರದಲ್ಲಿ ಚರಿಪ ಷಟ್ಪದದಿಂದೆ ಕಂಗೊಳಿಪ ಕಮಲಮೊಂದಜಕುಮಾರಾ॥

ಜನಪಸುತ ನಿನ್ನನೈಸರ್ಗಿಕಮದೆನಿಸುವಾ ೩೮
ನನದ ಪವನದ ಸುಗಂಧವ ನನ್ಯಗುಣದಿಂದೆ
ದಿನಮುಖದ ಮಾರುತಂ ಪಡೆಯಲೆಳಸುವನೆಂಬಮಾಳ್ಕೆಯಿಂದೀಗ ತಾನು॥
ಎನಿತೊ ಭೂಮಿಾರುಹಂಗಳ ಗಣದ ವೃಂತದ
ತ್ರಣೆನೈದೆ ಶಿಥಿಲಕುಸುಮಂಗಳಂ ಗ್ರಹಿಸುವಂ
ವನಜಾಪ್ತನರುಣಕಿರಣೋದ್ಭಿನ್ನಕಮಲಂಗಳಲ್ಲಿಯುಂ ಚರಿಸುತಿರ್ಪಂ॥

ತರುನಿವಹದರುಣೋದರದ ಪಲ್ಲವಂಗಳ ೩೯
ಲ್ಲುರುಳುತಂ ನಿಧೌ೯ತಹಾರಮುಕ್ತಾಮಣಿಯ [ಮಂ
ತೆರದಿಂ ಸುಶುಭ್ರತೆಯನಾಂತಹಿಮಬಿಂದುಗಳ್ ಪಡೆಯುತೆ ಗುಣೋತ್ಕರ್ಷ
ನೆರೆ ವಿರಾಜಿಸುತಿರ್ಪವ, ಸೂರ್ಯಕುಲಧರೇ
ಶ್ವರಕುಮಾರನೆ ನಿನ್ನಯಧರೋಷ್ಠದಲ್ಲಿ ಭಾ
ಸುರದಂತಸಂಕ್ತಿಕಾಂತಿಗಳನೊಳಕೊಂಡಿರ್ಪ ಲೀಲಾಸ್ಮಿತಂಬೊಲೀಗಂ॥

ಸಿರದಧಿಕತೇಜನೆನಿಸುವ ದಿನಾಧೀಶ್ವರಂ ೪೦
ಬರುವ್ರವಕೆ ಮು[illegible] ಗಗನಾಂಗಣಕ್ಕೆ ತಾಂ
ತ್ವರಿತದಿಂದಂಧಕಾರಸನೆಲ್ಲಮಂ ಧ್ವಂಸವೆಸಗಿರ್ಪನರುಣನೀಗಂ॥

ಅರಿಭಯಂಕರವೀರಪುಂಗವನೆ ನೀನಿರದೆ
ಧರಿಸೆ ಯೋಧಾಗ್ರೇಸರತ್ವಮಂ ಸಮರದೊಳ್
ಸ್ಫುರಿಕಿಸಲ್ಕಾಗ ನಿನ್ನಯ ಪಿತಂ ತಾನೆ ಶತ್ರುಗಳ ಸಂಹರಿಸಸಲ್ತೆ?॥

ಎರಡುಪಕ್ಕದ ನಿದ್ದೆ ತೀರೆ ಕರಿನಿಪಹಂಗ ೪೧
ಳಿರದೆ ದನಿಗುಡುವ ಸಂಕಲೆಯ ಕರ್ಷಣದಿಂದೆ [ ಗಂ॥
ತೊರೆಯುತಿರ್ಪುವು ಶಯನಮಂ ಮತ್ತಮವುಗಳಾ ದಂತಮುಕುಲಂಗಳ್
ಕರಮುದಯಿಸುಪ ಬಾಲದಿನವಲ್ಲಭನ ರಕ್ತ
ಕಿರಣಸಂಪರ್ಕದಿಂದರುಣತೆಯ ಧರಿಸುತಂ
ಗಿರಿಯ ಗೈರಿಕತಟವನುರೆ ಭೇದಿಸಿರುವವೆಂಬಂತೆ ಕಂಗೊಳಿಸುತಿರ್ಪುವಂ॥

ಜಲಜಾಯತಾಕ್ಷ ರಘುತನಯ ನೀನೆಳ್ದು ನೋ ೪೨
ಡೊಲವಿಂದೆ ಪಟರಚಿತದೀರ್ಘಮಂಡಪನಿವಹ
ದೊಳಗೆ ಕಟ್ಟಿದ ಪಾರಸೀಕತುರಗಂಗಳೆಲ್ಲಂ ನಿದ್ರೆಯಂ ತ್ಯಜಿಸುತಂ॥
ಸಲೆ ಮುಂಗಡೆಯೊಳಿಟ್ಟ ಲೇಹ್ಯಂಗಳೆನಿಪ ನಿ
ರ್ಮಳಸೈಂಧವದ ಶಿಲಾಶಕಲಂಗಳಿಗೆ ಬಿಡದೆ
ಮಲಿನತೆಯನುಂಟುಮಾಡುವವು ತಮ್ಮಾನನದಿನೊಗೆದುಷ್ಣದಿಂಪಶ್ವಾಸಗಂ॥

ಬಾಡಿ ಪುಷ್ಪೋಪಹಾರಮದು ವಿರಳತೆಯನೊಡ ೪೩
ಗೂಡಿದುದು ದೀಪಂಗಳುಂ ಕಾಂತಿಶೂನ್ಯತೆಗೆ
ಬೀಡಾಗಿ ತೋರುಪವು ನಿನ್ನನೆಚ್ಚರಗೊಳಿಸಲೋಸುಗಂ ನಾವೆಲ್ಲರುಂ॥
ಪಾಡುತಿಹ ನುತಿಗೀತಮಂ ಪಂಜರದೊಳಗೋ
ವಾಡುವೀ ನಿನ್ನಸವಿನುಡಿಯ ಗಿಳಿಯನುಕರಿಸಿ
ಪಾಡುವುದು ನೀನೆದ್ದು ಕುಳಿತುಕೊಳ್ಳೈ ರಾಜಪುತ್ರಬುಧನುತಚರಿತ್ರ॥

ಈತೆರದೆ ವಂದಿಗಳ್ ಪೇಳ್ದ ಮಂಜುಳವಚನ ೪೪
ಜಾತದಿಂ ಜವದೆ ನಿರ್ಗತನಿದ್ರನಾಗಿ ವಿ
ಖ್ಯಾತನಿಕ್ಷ್ವಾಕುಭೂಧವಕುಮಾರಂ ತನ್ನ ಮೃದುತಲ್ಪಮಂ ತ್ಯಜಿಸಿದಂ॥
ಜಾತಮದದಿಂದಂಚೆಗಳ್ ಮಾಳ್ಪ ಮಧುರಸಮು
ಪೇತರವದೆಳ್ಚತ್ತ ಸುಪ್ರತೀಕಮೆನಿಪ್ಪ
ಭೂತಪತಿದಿಗ್ಗಜಂ ಮಂದಾಕಿನೀನದಿಯ ಪುಳಿನಮಂ ಬಿಟ್ಟತೆರದಿಂ॥

ತರುವಾಯಮಾ ವಿಮಳಪಕ್ಷ್ಮಕಲಿತಾಕ್ಷನೆನಿ ೪೫
ಪರಸುಗುವರಂ ದಿನಾದಿಯ ಕಾಲದಲ್ಲೈದೆ
ವಿರಚಿಸುವ ಶಾಸ್ತ್ರೋಕ್ತವಿಧಿಗಳಂ ಮುಗಿಸಿ ನಿಶ್ಚಲಚಿತ್ತದಿಂದ ಮತ್ತಂ॥
ಸುರುಚಿರಾಲಂಕಾರಕೃತಿಕುಶಲತೆಯನಾಂತ
ಪುರುಷರುರೆ ಗೆಯ್ದುಚಿತವೇಷದ ಸುಶೋಭೆಯಂ
ಧರಿಸಿ ಸ್ವಯಂವರಸ್ಥಾನಗತನೃಪಸಮಾಜದ ಸೇರ್ಪನೊಲವಿನಿಂದಂ॥

---

# ಷಷ್ಠಸರ್ಗಂ.

ಸೂ:— ವಿಲಸತ್ಸ್ವಯಂವರಸ್ಥಾನದೊಳ್ ನೆರೆದ ನೃಪ
ಕುಲದ ಕುಲಶೀಲಾದಿಯಂ ಸುನಂದೆಯು ತನಗೆ [ನಂ॥
ತಿಳಿಸೆ ಬಳಿಕಿಂದುಮತಿ ವರಿಸಿದಳ್ ಸರ್ವಭೂಪರನುಳಿದು ರಘುತನಯ

ಪರಿಲಸತ್ಪರ್ಯಂಕಪಂಕ್ತಿಗಳ ಮೇಲಿರ್ದ ೧
ಪರಿವಿಷ್ಟರಂಗಳೊಳ್ ಸುರಲೀಲೆಯಾಂತು ಕುಳಿ
ತಿರುವ ಧರಣೀಶರಂ ರಮಣೀಯವೇಷರಂ ಕಂಡನಜನಲ್ಲಿ ಮತ್ತಂ॥
ಪುರಹರಂ ರತಿಯ ಸನ್ನುತಿಗೊಲಿದನುಗ್ರಹಿಸೆ
ಮರಳಿ ನಿಜತನುವ ಪಡೆದಂಗಜನೊಲಿರ್ಪ ತ [ಮಮ॥
ನ್ನರಪಸುತನಂ ನೋಡಿದರಸುಗಳ ಮನವಿಂದುಮತಿಯೊಳಾಶೆಯು ತೊರೆ

ಹರಿಪೋತಮೊಂದೊಂದುಶಿಲೆಯ ಮೇಲಿಂದೆ ಭೂ
ಧರಶಿಖರಕೇರುವೋಲ್ ರಘುತನೂಜಂ ಭೋಜ
ನರಪನಿರ್ದಿಷ್ಟಮಂಚವನೇರಿದಂ ಕ್ಲೃಪ್ತಸೋಪಾನಮಾರ್ಗದಿಂದಂ॥
ವರನೀಲಪೀತಾದಿವರ್ಣದಾಸ್ತರಣದಿಂ
ಮೆರೆವ ಮಣಿಪೀಠದೊಳ್ ಮಂಡಿಸುತೆ ತತ್ಪುರಾ
ವರಕುಮಾರಂ ಮಯೂರದ ಮೇಲೆ ಕುಳಿತಾ ಕುಮಾರನಂತಿರೆ ಬೆಳಗಿದಂ॥

ಆರಾಜವೃಂದಂಗಳೊಳ್ ರಾಜ್ಯಲಕ್ಷ್ಮಿ ತಾಂ ೩
ನೀರದಾವಳಿಗಳೊಳ್ ಕ್ಷಣರುಚಿಯದೆಂತಂತೆ
ನೂರಾರುರೂಪಮಂ ಪೊಂದುತತಿಕಾಂತಿಯಿಂ ಸೊಂಪಡರಿದಪಳೆ ಪೊಳೆಪಿನಂ॥

ಚಾರುವೇಷನಾಂತಮೂಲ್ಯಸಿಂಹಾಸನವ
ನೇರಿದರಸರ ನಡುವೆ ಕಲ್ಪತರುಮಧ್ಯಗತ|
ಪಾರಿಜಾತದ ಮಾಳ್ಕೆಯಿಂದಜಂ ಮಿಗೆ ತೇಜದಿಂದೆ ರಾರಾಜಿಸಿದನು॥

ಉಳಿದಖಿಳರಾಜರಂ ಪೌರರಕ್ಷಿಗಳ ಸಂ ೪
ಕುಲಮಜನ ಮೇಲೆರಗಿದುದು ತುಂಬಿವಿಂಡು ಪೂ
ಗಳ ಗಿಡಗಳಂ ಬಿಟ್ಟು ವನ್ಯಮದಗಂಧಸಿಂಧುರದ ಮೇಲೆರಗುವಂತೆ॥
ಬಳಿಕಮನ್ವಯವಿದರ್ ವಂದಿಗಳ್ ಸೋಮಾರ್ಕ
ಕುಲದರಸರಂ ಪೊಗಳುತಿರೆ ಮತ್ತಮಗರುಸಂ
ಕಲಿತಧೂಪಂ ಪರ್ವುತೆಲ್ಲೆಡೆಯೊಳಂ ಧ್ವಜಂಗಳನತಿಕ್ರಮಿಸಿ ತೋರೆ॥

ಪುರಸಮೀಪವ ನಂದನಂಗಳ ನವಿಲ್ಗಳಿಗೆ ೫
ನೆರೆ ನರ್ತನವ ನೊದಗಿಸುವ ಶಂಖಮುಖ್ಯಭಾ
ಸುರಮಂಗಳಸುವಾದ್ಯಘೋಷಮದು ತುಂಬಿ ದಶದಿಶೆಯೊಳಾ ಕಾಲದಲ್ಲಿ॥
ಧರಿಸಿ ವೈವಾಹಿಕಾಲಂಕಾರಮಂ ಪತಿಂ
ವರೆಯೆನಿಪ್ಪಿಂದುಮತಿ ಪರಿವಾರದೊಡಗೂಡಿ
ನರವಾಹ್ಯಯಾನದಲ್ಲೇರ್ದು ಪೊಕ್ಕಳ್ ಮಂಚಮಧ್ಯರಾಜಾಧ್ವಮಂ ತಾಂ॥

ನೂರಾರುಕಣ್ಗಳಿಂ ನೋಡೆ ಸಾಕೆನಿಸದಿಹ ೬
ನೀರೇಜಪೀಠನಾ ಸ್ತ್ರೀರೂಪಸೃಷ್ಟಿಯೊಳ್
ಸೇರಿದುದು ಮನಮುಳಿದುದಂಗಮಾತ್ರಂಗದ್ದುಗೆಯೊಳಖಿಳ ಜನಪತಿಗಳಾ॥
ಆರಾಜಸುತೆಯೊಳತ್ಯಭಿಲಾಷೆಯಾಂತ ತ
ದ್ಭೂರಮಣರ ಪ್ರಣಯದೂತಿಯರೊಲಾಗ ಶೃಂ
ಗಾರಚೇಷ್ಟೆಗಳುದಯಿಸಿದವು ತರುಗಳ ಬಾಲಪಲ್ಲವಶ್ರೀಗಳಂತೆ॥

ಚಲಿತಪತ್ರಂಗಳೋಡಿಸೆ ಬಳಸುವಳಿಕುಲವ ೭
ಸಲೆ ರಜೋಗಣಮೊಳಗೆ ರಚಿಸೆ ತಾಂ ಮಂಡಲವ
ನೆಲದೆರೆಯನೋರ್ವನುರೆ ನಾಳಮಂ ಪಿಡಿದು ಲೀಲಾಬ್ಜಮಂ ತಿರುಗಿಸಿದನು॥
ನಲವಿಂದೆ ಮತ್ತಮೋರ್ವಂ ವಿಲಾಸಿಯು ಭುಜವಿ
ಗಲಿತಸುಮಮಾಲೆ ಮಣಿಖಚಿತಾಂಗದಾಗ್ರದೊಳ್
ಸಿಲೆ ತೆಗೆದುಕೊಂಡದಂ ಸ್ವಸ್ಥಾನದಲ್ಲಿರಿಸಿದಂ ತಿರುಗಿಸುತೆ ಸುಮುಖಮಂ॥

ಪರಸೋರ್ವನವಸು ದೃಕ್ಕ್ಯೋಭೆಯಂ ನಸುಪಿಂತೆ
ಪರಪಿ ತಿರ್ಯಕ್ಸಿಸಂಸರ್ಪಿನಖಕಾಂತಿಯಿಂ
ಬೆರೆದ ಬಾಗಿಸಿದ ತುದಿಬೆರಳಿಂದೆ ಹೈಮಾಂಘ್ರಿಪೀಠಮಂ ಬರೆಯುತಿರ್ದ
ನೆರೆ ಸಮುನ್ನತಿಯಿಂದೆ ಭುಜಶಿರಂ ಕಾಣ್ಬಂತಿ
ರಿರಿಸಿ ನಿಜವಾಮಬಾಹುವನೊಸಸಾರ್ಧದೊಳ್ [ರ್ವಂ
ತಿರುವಿರ್ದಬೆನ್ನಿನೊಳ್ ಜಾರೆ ಹಾರಂ ನುಡಿಯತೊಡಗಿದಂ ಸಖನೊಳೊ

ವನಿತಾವಿಲಾಸಾಸ್ಪದದ ದಂತಪತ್ರಕೃತಿ
ಗನುಕೂಲಮೆನಿಪ ಸಿತಕೇತಕದ ದಳವ ತ
ನ್ನಿನಿಯಳ ನಿತಂಬದಲ್ಲಿಡತಕ್ಕುಗುರ್ಗೊನೆಗಳಿಂ ಸೀಳ್ದನೋರ್ವ್ವಯುವಕಂ॥
ಮನುಜೇಂದ್ರನಿತರನಾ ಸಮಯದೊಳ್ ಧ್ವಜದ ಲಾಂ
ಛನದಿಂದೆ ರಂಜಿಸುವ ಕಮಲಾರುಣದ ಕರದೆ
ಬಿನದದಿಂ ಚೆಲ್ಲಿದಂ ರತ್ನಾಂಗುಲೀಯಪ್ರಭಾಸಂಗತಾಕ್ಷಂಗಳಂ॥

ತಲೆಯಲ್ಲಿ ಮಕುಟಂ ನಿಜಸ್ಥಲದೊಳಿರ್ದೊಡಂ ೧
ಚಲಿತಮಾಯ್ತಲ್ಲಿಂದಮೆಂದೋರ್ವನದನೆ ಸರಿ
ಗೊಳಿಸಲಿಟ್ಟಂ ಕರವನಂಗುಲಿಯರಂಧ್ರಮಂ ಬಳಸೆ ತದ್ವಜ್ರಕಾಂತಿ॥
ಬಳಿಕಮಾ ಇಂದುಮತಿಯಂ ಮಗದಭೂಮಿಪನ
ಬಳಿಗೆ ಕರೆದೊಯ್ದು ರಾಜಾನ್ವಯಚರಿತ್ರಮಂ
ತಿಳಿದ ದೌವಾರಿಕೆಸುನಂದಾಖ್ಯೆಜಾಣ್ಮೆಮಿಗೆಪುರುಷನೊಲ್ ನುಡಿದಳಿಂತು॥

ಅರಸನೀತಂ ಮಗಧರಕ್ಷಕಂ ಗಂಭೀರ ೧೧
ತರಸುಸ್ವಭಾವನುಂ ಮೊರೆವೊಕ್ಕರಂ ಪೊರೆವ
ಕರುಣಾಳುವುಂ ಪ್ರಜಾರಂಜನವಿಚಕ್ಷಣಂ ಸಾರ್ಥಕಪರಂತಪಾಖ್ಯಂ॥
ಪರರೆನಿತೊ ರಾಜರಿರ್ದೊಡಮೀತನಿಂದಮೀ
ಧರಣಿ ರಾಜನ್ವತಿಯದಾಯ್ತು ತಾರಾಗ್ರಹೋ
ತ್ಕರಭರಿತಮಾದೊಡಂ ನಿಶೆಯದಂ ಜ್ಯೋತಿಷ್ಮತಿಯ ಮಾಳ್ಪನಲ್ತೆ ಚಂದ್ರಂ॥

ನಿರುತಮುಧ್ವರವನೆಸಗುವ ಕಾಲಕಿಂದ್ರನಂ ೧
ಕರೆಯಿಸುತೆ ಶಚಿಯ ಬೆಳ್ಗದಪಿನೊಳ್ ಜೋಲ್ದಿರ್ಪ
ಕುರುಳ್ಗೆ ಮಂದಾರಶೂನ್ಯತೆಯಂ ಚಿರಂ ನೆಗಳ್ಚುವನೀ ಮಹೀಪಾಲಕಂ

ವರಣೀಯನೀತನಂ ವರಿಸುವಡೆ ನೀಂ ಪುಷ್ಪ
ಪುರಮಂ ಪ್ರವೇಶಿಸುವ ಸಮಯದಲ್ಲಾ ನಗರ
ದರಮನೆಗಳೊಳ್ ಗವಾಕ್ಷದಿನೀಕ್ಷಿಪಂಗನೆಯರಕ್ಷಿಪರ್ವಣವ ಮಾಳ್ಪೆಯೌ||

ಅತಿಚತುರಭಾಷಿಣಿ ಸುನಂದೆಯಿಂತೊರೆಯೆ ನೃಪ ೧೩
ಸುತೆ ಪರಂತಪನ ನಸು ನೋಡಿ ಮೌನದೆ ಮೂರ್ಪ
ಯುತಮಧೂಕಸ್ರಜಮಣಂ ಚಲಿಸೆ ಸರಳಪ್ರಣತಿಗೆಯ್ದು ತೊರೆದಳವನಂ||
ಇತರನೃಪನೆಡೆಗಿಂದುಮತಿಯು ಕರೆದೊಯ್ವಳಾ
ಧೃತವೇತ್ರೆ ಕಮಲಾಂತರದ ಬಳಿಗೆ ಮಾರುತೋ
ತ್ಥಿತವೀಚಿಮಾಲೆ ಮಾನಸರಾಜಹಂಸಿಯಂ ತಾನೊಯ್ವತೆರದೊಳಾಗಂ||

ಒರೆದಳವಳೀತನಂಗಾಧಿಪಂ ಸುರತರುಣಿ ೧೪
ಯರೆ ಕಾಮಿಸಿದ ಯೌವನದ ಸಿರಿಯನುಳ್ಳವಂ [ಸಂ||
ಕರಿಶಿಕ್ಷೆಯಂ ಋಷಿಗಳಿಂದೊಡರ್ಚಿಸುತಿಂದ್ರಪದವ ಧರೆಯೊಳೆ ಭೋಗಿ
ಸರಪನೀತನ ವೈರಿವನಿತೆಯರ ಮೊಲೆಗಳ
ಲ್ಲುರುಳ್ವ ಮುತ್ತಿನಸರದ ಕಂಬನಿಗಳೆಸೆಗುಮಾ
ಗೊರೆಯೆ ಮುಂಕೊಂಡ ಹಾರಂಗಳಂ ವಾರವಿಲ್ಲೆಯೆ ತಿರುಗಿತ್ತಂತಿರೆ||

ಸಿರಿಸರಸತಿಯರ್ಕೈದೆ ಕೂಡಿರದ ಗುಣದವರ್ ೧೫
ಕರಮೀತನಲ್ಲಿ ಕೂಡಿರ್ಪರವರೀರ್ವರೊಳ್
ಬೆರೆಯಲುಚಿತಳ್ ನೀನೆ ರೂಪಸೂನೃತವಾಣಿಯಿಂದಂ ತೃತೀಯೆಯಾಗಿ||
ತುರಳಿಸುತೆ ದಿಟ್ಟಿಗಳನಂಗಪತಿಯಿಂ ಕುವರಿ
ತೆರಳೆಂದಳಿಂತೊರೆದ ಪಡೆಯರತಿಗಾ,ನೃಪಂ
ವರಣೀಯನವಳುಂ ವಿವೇಕಪರಳಾದೊಡೇಂ ಭಿನ್ನರುಚಿಯಲ್ತೆ ಲೋಕಂ||

ನಡೆದು ಮುಂದಕೆ ಸುನಂದೆಯು ಕುವರಿಗತಿರೂಪ ೧೬
ಕೆಡೆಯೆನಿಪನುಂ ರಿಪುಭಯಂಕರನುಮಾದ ನೆಲ [ತ್ರಂ||
ದೊಡೆಯನಂ ಮತ್ತೋರ್ವನಂ ಸವೋದಯುತಶಶಿಯನೆಂತಂತೆ ತೋರಿಸು
ನಿಡುದೋಳ್ಗಳಿಂದೆ ಪೇರೆದೆಯಿಂದೆ ಬಡವಾದ
ನಡುವಿಂದೆ ತಳ್ತೀ ಅವಂತಿಪಂ ಸುರಶಿಲ್ಪಿ
ಕಡುಜತನದಿಂ ಸಾಣೆಗಿಟ್ಟು ತಿಕ್ಕಿದ ರವಿಯೊಲೆಸೆಯುವಂ ನೋಡೆಂದಳು||

ವರಶಕ್ತಿಪೂರ್ಣನೀತನ ದಂಡಯಾತ್ರೆಯೊಳ್ ೧೭
ಭರದೆ ಮುಂಗಡೆಯಲ್ಲಿ ತೆರಳುವಶ್ವಂಗಳಿಂ
ದಿರದೆಳ್ದ ರಜವೆ ಸಾಮಂತಚೂಡಾಮಣಿಪ್ರಭೆಗಸ್ತಮಯುವ ಮಾಳ್ಕುಂ॥
ನರಪನೀತಂ ಮಹಾಕಾಲಮಂದಿರಚಂದ್ರ
ಧರನ ಬಳಿಯೊಳ್ ನೆಲಸುತಂ ತನ್ನತರುಣಿಯಲ್
ವೆರಸು ತಿಳಿಜೊನ್ನದಿರುಳೊಳ್ಬಿನದಿಪಂ ಕೃಷ್ಣಪಕ್ಷಮೊಳಮಾಲಿಸಾ ನೀಂ॥

ಸತತಮಾ ಶಿಪ್ರಾನದೀವೀಚಿವಾಯುಕಂ ೧೮
ಪಿತಮಪ್ಪ ನಂದನಾವಳಿಯಲ್ಲಿ ರಮಿಸಲತಿ
ರತಿಯಿರ್ಪುದೇನೀತನೊಡನೆ ರಂಭೋರು! ನಿನಗೆಂದಾ ಸುನಂದೆ ನುಡಿಯೆ॥
ಹಿತಜನಾಂಬುಜವಿಕಾಸನನೆನಿಸಿ ತೇಜದೊಳ
ಹಿತಪಂಕಶೋಷಣವ ಗೆಯ್ವಾ ಧರಾಂಗನಾ
ಪತಿಯನಿಚ್ಛಿಸಲಿಲ್ಲಮಿಂದುಮತಿ ಭಾನುವಂ ಬಯಸದ ಕುಮುದ್ವತಿಯೊಲು॥

ಬಿದಿಯ ಮಧುರತರನಿರ್ಮಾಣಮೆನಿಸಿರ್ಪ ತ ೧೯
ತ್ಸ್ವವತಿಯಂ ಗುಣವತಿಯನಬ್ಜೋದರಪ್ರಭಾ
ಸ್ಪದೆಯಂ ಸುನಂದೆ ಕರೆತಂದಾ ಅನೂಪಪತಿಯೆಡೆಗೆ ಮತ್ತಿಂತೆಂದಳು॥
ಪದಿನೆಂಟು ದೀವಿಯೊಳ್ ಯೂಪಂಗಳಂ ನಿಲಿಸಿ
ಕದನದೊಳ್ ತೋಳ್ಸಾಸಿರನನಾಂತು ಮೆರೆದ ಭೂ
ವಿದಿತನೃಪಕಾರ್ತವೀರ್ಯಂ ಯೋಗಿಯಿರ್ದ್ದನನಿತರಲಭ್ಯರಾಜನಬ್ದಂ॥

ಸಲ್ಲದಿಹ ಕಜ್ಜಕೆಳಸುವ ಸಮಯದೊಳೆ ಮುಂದೆ ೨೦
ಬಿಲ್ವಿಡಿದು ನಿಂದು ತಾಂ ಪ್ರಜೆಗಳಂತಃಕರಣ
ದಲ್ಲಿಯುಂ ದೋಷಮುಂಟದನಾಳ್ಕೆಯಿಂದವರ ಶಿಕ್ಷಿಸಿದನಾಮಹೀಶಂ॥
ಬಿಲ್ಲಿನೆಡೆಯಿಂ ಬಿಗಿದ ತನ್ನೃಪಂ ಪಿಡಿಸುತಸುರ
ವಲ್ಲಭದಶಾಸ್ಯನಂ ತಂದಿರಿಸೆ ಸೆರೆಮನೆಯೊ
ಳಲ್ಲಿ ತತ್ಕೃಪೆಯ ಪಡೆವನ್ನಮಾರಕ್ಕಸಂ ನೆಲಸಿದಂ ನಿಟ್ಟುಸಿರಿನಿಂ॥

ಅಮಳನಪ್ಪವನ ವಂಶದೊಳೀ ಪ್ರತೀಪಾಖ್ಯ ೨೧
ನಮಿತಬುಧಸೇವ್ಯನುದಯಿಸಿದನೀತನ ಕ್ರೋಂದಿ
ರಮೆ ಕಳೆದುಕೊಂಡಳಾಶ್ರಿತದೋಷಜಪ ಸಹಜಚಪಲತೆಯೆಂಬಪವಾದಮಾ॥

ಸಮರದೊಳ್ ವಹ್ನಿಯ ಸಹಾಯವಾಂತೀ ಮಹೀ
ರಮಣೀಪ್ರಿಯಂ ಕ್ಷತ್ರಿಯರ ಲಯದ ನಿಶೆಯೆನಿಪ
ಜಮದಗ್ನಿಸುತಪರಶುಧಾರೆಯಂ ಕುಮುದದಳಸಾರಕೆಣೆಯೆಂದುಬಗೆದಂ

ಲಲನೆ? ಮಾಹಿಷ್ಮತಿಯ ವಪ್ರರೂಪನಿತಂಬ ೨
ಲಲಿತಕಾಂಚಿಯೆನಿಪ್ಪ ನರ್ಮದೆಯ ಶೋಭೆಯಂ
ಸಲೆ ರಾಜನಿಲಯದಿಂ ನೋಡಲೆಳಸುವೊಡೀತನಂಕದಮೊಳಾಗೆಂಪಿಸಂ॥
ತೊಲಗಿಸಿರೆ ಮುಗಿಲ ಮರೆಯಂ ಶರದೃತುವಾಗ
ಪೊಳೆವ ಪೂರ್ಣೇಂದು ಕಮಲಿನಿಗೆ ರುಚಿಸದತೆರದೆ
ನೆಲದೆರೆಯನಾತನತಿಸುಭಗನಾದೊಡಮಿಂದುಮತಿಗಿವಂ ರುಚಿಸಲಿಲ್ಲಂ॥

ದ್ವಾರಪಾಲಿಕೆ ಮತ್ತಮಿಂದುಮತಿಗೆಂದಳಾ ೩
ಚಾರಚುವ್ಮೋಭಯಕುಲಪ್ರದೀಪನೆನಿಪ್ಪ
ಶೂರಸೇನಪ್ರಭುಸುಷೇಣನಂ ಭುವನಾಂತರದನುತಯದನಂ ತೋರಿಸಿ॥
ನೀರೆ ಕೇಳ್ ನೀಪವಂಶಜಭೂಪನೀತನೊಳ್
ಸೇರಿ ಗುಣನಿವಹಂ ಪರಸ್ಪರನಿಸರ್ಗಭವ [ಲ
ವೈರಮಂ ತ್ಯಜಿಸಿದುದು ಮುನಿಸಿಪಸಾಶ್ರಮವಾಂತ ಹರಿಗಜಾದಿ ಪ್ರಜದೆ

ಚಲುವನೀ ನೃಪನ ಚಂದ್ರನ ಕಳೆಯೊಲಂಬಕಂ ೩
ಗಳಿಗೆ ಮುದವೀವ ಕಾಂತಿಯು ನಿಜಾಲಯದೊಳಂ
ಪೊಳೆವ ಪ್ರತಾಪಮುಂ ತೃಣಗುಲ್ಮಕಲಿತರಿಪುಗೃಹದೊಳಂ ವ್ಯಾಪಿಸಿರ್ಕು
ಜಲಕೇಳಿಯೊಳ್ಳೀತನಂತಃಪುರಾಂಗನಾ
ವಳಿಕುಚಸುಚಂದನಕ್ಷಾಲನದೆ ಯಮುನೆಯಾ [ಗು
ಸಲಿಲಕ್ಕೆ ಗಂಗಾತರಂಗಸಂಗಂ ಮಥುರೆಯೆಡೆಯೊಳೇ ದೊರೆವೊಲೆಸೆ

ಗರುಡನತ್ತಣಿನಳುಕಿ ಜಗುನೆಮಡುವೊಳ್ ನೆಲಸಿ ೨
ದುರುಗಮದು ಕಾಳಿಯಾಖ್ಯಂ ಕೊಟ್ಟ ಮಣಿಯ ತ
ನ್ನುರದೊಳಾಂತೀನೃಪಂ ಕೌಸ್ತುಭವಧರಿಸಿರ್ಪಹರಿಗೆನಾಣೊದವಿಸುವನ
ವರಿಸೆ ನೀನೀ ಯುವಕನಂ ಕುಬೇರನ ವನಕೆ
ಸರಿಯಾದ ವೃಂದಾವನದೊಳ್ಕೊದೆ ಸುಂದರಿಯೆ!
ವರಯೌವನದ ಫಲವನನುಭವಿಪೆ ಮೃದುಲತರಸುಮತಲ್ಪದಲ್ಲಿ ಮತ್ತಂ

ಮಳೆಗಾಲದಲ್ಲಿ ಗೋವರ್ಧನದ ಕಂದರಂ ೨೬
ಗಳೊಳುದಕಬಿಂದುವಿಂ ನಾಂದು ಕಲ್ಪೊಗಂಪ
ತಳೆದರೆಯ ಮೇಲೆ ಕುಳಿತೀಕ್ಷಿಸುವೆಯತ್ತ ನವಿಲೋಳಿಕುಣಿವುದ ನೆಂಬಿನಂ॥
ಜಲಧಿಗಾಮಿನಿಪುಷ್ಪ ಪೊಳೆ ತನ್ನ ಪಥಗತಾ
ಚಲವ ತಾಂ ದಾಂಟ ಪರಿಪಂತನ್ನಸತಿಯೆಂದು
ತಿಳಿಯುತಂ ತನ್ನನಾತನ ದಾಂಟಿ ಪೋದಳಾ ಸುಳಿಪೊಕ್ಕುಳದ ಕುವರಿಯು॥

ಅಂಗನಾಶ್ಲಿಷ್ಟಭುಜನುಂ ನಾಮದಿಂಧೆ ಹೇ ೨೭
ಮಾಂಗವನುಪರಿಪಕ್ಷಭಂಗನುಮೆನಿಪ್ಪಾ ಕ
ಳಿಂಗಾಧಿಪನ ಬಳಿಗೆ ಬಂದ ಪೂರ್ಣೇಂದುಮುಖಿಗೆಂದಳಿಂತಾ ಸುನಂದೆ॥
ತುಂಗಸಾರಂ ಮಹೇಂದ್ರಾದ್ರಿವೋಲೀ ದೊರೆ ತ
ರಂಗಿಣೀಪತಿಮಹೇಂದ್ರೇಶನೀತನ ಮದಮು [ಗುಂ।
ತಂಗಜವ್ಯಾಜದಿಂದಂ ಯಾತ್ರೆಯೊಳ್ಮಹೇಂದ್ರಾಚಲವೆಪೋಪೊಲಿಸೆ

ಸೆರೆಗೆಯ್ದ ರಿಪುಲಕ್ಷ್ಮಿಯರ ಕಜ್ಜಲಾಶ್ರುವಿಂ ೨೮
ನೆರೆ ಸಿಕ್ತಮಾದೆರಡು ಸರಣಿಗಳಿವೆಂಬಂತೆ
ಮೆರೆವ ಮೌರ್ವೀಘಾತರೇಖೆಗಳ ಧರಿಸಿರ್ಪನೀನೃಪಂ ಭುಜಯುಗದೊಳು॥
ಅರಮನೆಗಮೂರದಲ್ಲಿರ್ಪ ವಾತಾಯನದೆ
ತೆರೆಯ ದರ್ಶನವಿತ್ತು ಯಾಮವಾದ್ಯವ ತಿರ
ಸ್ಕರಿಪ ಗಂಭೀರರವದಿಂದಬ್ಧಿಯೇ ಎಚ್ಚರಿಪುದು ಮಲಗಿರ್ದೀತನಂ॥

ಕ್ಷಿತಿಪನೀತನ ಕೂಡಿ ಸಿಂಧುತಟಮರ್ಮರಾ ೨೯
ನ್ವಿತತಾಳವನದಲ್ಲಿ ವಿಹರಿಸೌ ಸ್ವೇದಕಣ
ತತಿಯನಾರಿಪನಲ್ಲಿ ಮರುತನನ್ಯದ್ವೀಪಸುಲವಂಗಸುಮಸಂಗತಂ॥
ಜತನಮತಿಮೂರಕೆಳತರೆ ಸಿರಿಯನಾಕೆ ಮೇಣ್
ಹತಭಾಗ್ಯನಿಂ ಮರಳಿದೊಲ್ ರೂಪವತಿಯಿಂದು
ಮತಿಯಾತನಿಂಪರಾಙ್ಮುಖಿಯಾದಳಿಂತವಳವಚನಚೋದಿತೆಯಾದೊಡಂ॥

ಬಳಿಕಂ ಸುನಂದೆ ತಾಂ ಸುರಸವೃಶರೂಪಮಂ ೩೦
ತಳೆದಿರ್ದ ನಾಗಪುರದರಸನೆಡೆಗೈತಂದು
ನಲವಿನಿಂದತ್ತ ನೋಡೌ ಚಕೋರಾಕ್ಷಿಯೆಂದಿಂತುಮಾತೆಗಂತೆಂದಳು॥

ನಳಿತೋಳ್ಗಳೊಳ್ ಜೋಲ್ದ ಹಾರದಿಂ ಪೂಸಿರ್ದ
ಮಲಯಜದಿನೀ ಪಾಂಡ್ಯಸುರೆ ಪರಿವ ನಿರ್ಝರದಿ
ನೆಳೆ ಬಿಸಿಲಿನಿಂ ಕೆಂಪಸಾಂತ ಸಾನುವಿನೊಪ್ಪುವದ್ರೀಂದ್ರನಂತೆ ತೋರ್ಕು‌ಂ

ತುರಗಮೇಧಾಧ್ವರದ ದೀಕ್ಷಾಂತಮಜ್ಜನವ ೪೧
ವಿರಚಿಸಿರ್ದೀತಂಗೆ ಕುಶಲಪ್ರಚ್ಛಕನೆ ಆ [ಪಂ|
ಗಿರುವನಬ್ಧಿಯ ಕುಡಿದುಗುಳ್ದುವಿಂಧ್ಯೆಯುಮುದವನಣಗಿಸಿದಗಸ್ತ್ಯಮುನಿ
ಹರನಿಂದನಸ್ತ್ಯಲಭ್ಯಾಸ್ತ್ರಮಂ ಪೊಂದಿದೀ
ಅರಸಂ ಜನಸ್ಥಾನಕಾಗಿಪಂ ಕೇಡಸೆಂ
ದರಿದ ದಶಮುಖನೀತನೊಡನೆ ಸಂಧಿಯುಗೆಯ್ದು ನಾಕವಿಜಯಕೆತೆರಳಿದಂ॥

ಕುವರಿ ನೀಂ ಶಾಸ್ತ್ರೋಕ್ತಿಯಿಂದೀ ಕುಲೀನಭೂ ೪೨
ಧವನಸುರೆ ಕೈವಿಡಿದು ದಕ್ಷಿಣದಿಗಂಗನೆಗೆ [ತ್ರಂ|
ಸವತಿಯಾಗೌ ಮಣಿಮಯಾಬ್ಧಿಮೇಖಲೆಯುಪ್ಪಭೂರಮಣಿಯಂತೆಮು
ತವೆನಾಗವಲ್ಲೀಸಮಾಲಿಂಗಿತಸುಪೂಗ
ನಿವಹದಿಂದೇಲಾಲತಾಶ್ಲಿಷ್ಟಚಂದನವಿ
ಭವದೆಯುಂತಳ್ತ ಮಲಯಸ್ಥಲಂಗಳ ತಮಾಲದಳತಲ್ಪದೊಳು ರಮಿಸೌ॥

ಜನಪನೀತಂ ಕುವಲಯಶ್ಯಾಮತನು ನೀನು ೪೩
ವಿನುತಗೊರೋಚನಚ್ಛಾಯೆ ನಿಮ್ಮಿರ್ವರ್ಗೆ
ಜನಿಸೆ ಸಂಗಂ ಘನತಟಿದ್ಯೋಗದೊಲ್ ಪರಸ್ಪರಕಾಂತಿವರ್ಧಕಮಪ್ಪುದು॥
ಎನುತಿಂತು ಬೋಧಿಪ ಸುನಂದೆಯಾನುಡಿಗೆ ಭೋ
ಜನಸೋದರಿಯ ಚಿತ್ತವಲ್ಲಿಂಬು ಸಿಗದಾಯ್ತು
ದಿನಕರನ ಕಾಣದೆ ಮುಗುಳ್ಚಿದಬ್ಜದೊಳಿಂದುಕಿರಣಕೆಡೆ ದೊರೆಯದಂತೆ।

ಇರುಳಲ್ಲಿ ಕರದೀಪಮಂ ಮುಂದಮುಂದಕ್ಕೆ ೪೪
ತರೆ ಪಥದ ಪಿಂತಣ ಗೃಹಾಳಿ ತಮಗೂಡಿವಂ
ತಿರೆ ಕುವರಿ ನೃಪರನುಳಿದೈತರುತಿರಲ್ಕವರ ಮೊಗಗಳುರೆ ಕಪ್ಪಾದವು॥
ತರುವಾಯಮಾ ಪತಿಂವರೆ ತನ್ನ ಬಳಿಗೆ ಬರೆ
ವರಿಸುವಳೊ ಇಲ್ಲವೋ ಎಂಬ ಸಂಶಯದೊಳಜ
ನಿರೆ ಪಾರುತಂಗದಾಂಚಿತಮಪ್ಪ ಬಲಭುಜಂ ಕಳೆದುಪಾತನ ಮಗುಡಮಂ॥

ಕುವರಿ ಸರ್ವಾಂಗಸುಂದರರಘುಕುಮಾರನಂ ೩೫
ತವೆ ಪೊಂದಿ ತೊರೆದಳನ್ಯರ ಬಳಿಗೆ ಪೋಪ ಕ
ಜ್ಜವ ಭೃಂಗಪಂಕ್ತಿ ಪುಷ್ಪಿತರಸಾಲ ಸೇರಿ ವೃಕ್ಷಾಂತರಕೆ ಗಮಿಪುದೇ॥
ಕುವಲಯಪ್ರಿಯಕಾಂತಿಯುತೆಯಿಂದುಮತಿಯು ತ
ನ್ಮವಕನೊಳ್ ಮನವಿಟ್ಟುದಂ ತಿಳಿದು ಮಾತನಾ
ಡುವ ಬಗೆಯ ಬಲ್ಲಸುನಂದೆಯಾಬಾಳೆಗಿಂತೊರೆಯಲನುವಾದಳಾಗಂ॥

ಗುಣವರಂ ಪೆಸರಿಂ ಕಕುಸ್ಥನಿಕ್ಷ್ವಾಕುಕುಲ ೩೬
ಜನಿತಂ ನೃಪೋತ್ತಮಂ ಖ್ಯಾತನಾಗಿರ್ದ ನಾ
ತನ ವಂಶಜರ್ ತಳೆವರೊಲ್ದು ಕಾಕುಸ್ಥಸಂಜ್ಞೆಯ ತದುತ್ಕರ್ಷ ಕೇಳಿಸಿ॥
ರಣದೊಳಾ ನೃಪತಿ ವೃಷಭಾಕೃತಿಯನಾಂತ ಸುರ
ಪನ ಮೇಲೆ ಕುಳಿತು ಹರಲೀಲೆಯಿಂ ತನ್ನ ಮಾ
ರ್ಗಣದಿನಸುರಸ್ತ್ರೀಕಪೋಲಂಗಳ ಸುಪತ್ರರಚನೆಯಂ ಸೂರೆಗೊಂಡಂ॥

ತ್ರಿದಶಾಧಿಪಂ ತನ್ನ ರೂಪವಾಂತಿರ್ದ ಸಮ ೩೭
ಯದೊಳೈರಾವತಾಸ್ಫಾಲನ ಶ್ಲಥತವಂ
ಗದಕೆ ನಿಜಕೇಯೂರಘರ್ಷಣವನೊದಗಿಸುತ್ತಾತನರ್ಧಾಸನವನು॥
ಪದಪಿನಿಂದೇರ್ದಂ ಕಕುಸ್ಥಂ ತದನ್ವಯದೊ
ಳುದಿಸಿದಂ ವಂಶಪ್ರದೀಪಂ ದಿಲೀಪನೆಸ
ಗಿದನಾತನೇಕೋನಶತತಮಖವನೊಂದನೀರ್ಷ್ಯೆದಿಂದ್ರಸಂಪ್ರೀತಿಗಾಗಿ॥

ಧರೆಯ ಪಾಲಿಸೆ ದಿಲೀಪಂ ವಿಹಾರಸ್ಥಾನ ೩೮
ದರೆವಾರಿಯುಲ್ಲಿ ನಿದ್ರಿಪ ಮತ್ತತರುಣಿಯರ್
ಧರಿಸಿದಂಬರವನಲುಗಿಸನನಿಲನುಂ ತದಪಹರಣಮಂ ಮಾಳ್ಪನಾವಂ॥
ನರಪನಾತನ ಸುತಂ ರಘು ವಿಶ್ವಜಿನ್ಮಖವ
ವಿರಚಿಸುವ ಕಾಲದೊಳ್ ದಿಗ್ವಿಜಯದಿಂ ತಂದ
ಸಿರಿಯನೆಲ್ಲವನೊಲ್ದು ಮೃತ್ಪಾತ್ರಶೇಷಮಂ ಮಾಡಿ ಭುವಿಯಂ ರಕ್ಷಿಸಂ॥

ಗಿರಿಚಯವ ನೇರ್ದು ಶರನಿಧಿಗಳಂ ವಿಾರ್ದು ಮೇ ೩೯
ಲುರಗವಸತಿಯ ಸೇರ್ದು ಸುರಲೋಕಮಂ ಸಾರ್ದು
ಪರಿಮಿತಿಗಶಕ್ಯಮಾಗಿರ್ದುದಾತನ ವಿಪುಲಕೀರ್ತಿ ತ್ರಿಕಾಲದರ್ತಿ

ಸುರನಾಯಕಂಗಾ ಜಯಂತನೆಂತಂತೆ ತ
ನ್ನರಪಂಗೆ ಜನಿಸಿದೀ ಅಜಸುತಂ ಭುವಿಯ ಗುರು
ಭರವ ನೈಸಲೆ ದನ್ಯುಸಾಗಿ ತಳೆದಂ ಧುರ್ಯನಾದ ಪಿತೃಗೆಣೆಯೆನಿಸಿ ತಾಂ॥

ಘನಮಾದ ಕುಲದೆ ರೂಪದೆ ಮತ್ತೆಯೌವನದೆ ೪೦
ವಿನಯಾದಿಗುಣದೆ ನಿನಗನುರೂಪನೀ ರಾಜ
ತನಯನೀತನ ವರಿಸು ಬಾಲೆ! ಪೊನ್ನಿಂತಳ್ತು ರನ್ನಮದು ಶೋಭಿಸುಗೆ ತಾಂ॥
ಎನುತಿಂತು ಬಣ್ಣಿಸೆ ಸುನಂದೆ ಸಮನಂತರಂ
ವನಜಾಸ್ಯೆ ನಸು ನಾಣನುಳಿದು ಸಂಮೋದಲೋ
ಚನದಿಂದೆ ಸಂವರಣಮಾಲೆಯುಂದೆಂತಂತೆ ವರಿಸಿದಳ್ ವಿಲಸದಜನಂ॥

ಸಲೆ ರಘುಜನಲ್ಲಿಟ್ಟ ತನ್ನಯಭಿಲಾಷೆಯಂ ೪೧
ತಿಳಿಸಲಾರದಿರೆ ನಾಣಿಂದಮಾ ಕುಟಿಲಕುಂ
ತಳೆ ತಚ್ಛರೀರಮಂ ಭೇದಿಸಿಪ್ರಕಟಮಾಯ್ತುದು ಪುಳಕಕುಲದ ನೆವದಿಂ॥
ಬಳಿಕಮಿಂತನುರಾಗವತಿಯಾದ ಕುವರಿಗಾ
ಕೆಳದಿ ಹಾಸ್ಯದೊ “ ಳನ್ಯರೆಡೆಗೆ ಪೋಗುವ ಸುಪೂ
ಜ್ಯಳೆ ” ಎನಲ್ಕವಳನಾ ಇಂದುಮತಿ ಮುಳಿದೋರೆನೋಟದಿಂದೀಕ್ಷಿಸಿದಳು॥

ಕರಭೋಪಮೋರುವಾದಾ ಇಂದುಮತಿ ಸಖಿಯ ೪೨
ಕರದೆ ರಘುಜನ ಕಂಠದೇಶದಲ್ಲಿರಿಸಿದಳ್
ವರಚೂರ್ಣಲೋಹಿತಸ್ರಜವ ನಿಜಮೂರ್ತಾನುರಾಗವನೆ ಇರಿಸಿದಂತೆ॥
ವರಣೀಯನಾದಜಂ ತನ್ನಪೇರೆದೆಯಲ್ಲಿ
ನೆ‍ ಜೋಲ್ವ ತತ್ಕುಸುಮಮಾಲೆಯಂ ಕಂಡು ನಿಜ
ಶಿರವನಪ್ಪಿದ ಭೋಜಸೋದರಿಯ ಭುಜಪಾಶಮೆಂಬದಂ ತಿಳಿದುಕೊಂಡಂ॥

ಶರದಿಂದುವಂ ಪೊಂದಿದಮಳಚಂದ್ರಿಕೆಯಿದಾಕೆ ೪೩
ಶರಧಿಯಂ ಸೇರ್ದ ಜಾಹ್ನವಿಯಿದಾಕೆಯೆಂಬ ನಿ [ ತಂ
ರ್ಭರಮುದದ ಪುರಜನದರವಮಲ್ಲಿ ಪೊಣ್ಮಿದುದು ನೃಪರ ಶ್ರುತಿಕಟುವೆನಿಸು
ಪರಿತುಷ್ಟವರಪಕ್ಷಮೊಂದುಕಡೆ ಭಗ್ನಾಶ
ರರಸರ ಸಮಾಜಮಿನ್ನೊಂದುಕಡೆಯಿರೆ ಸಭೆಯ [ ರ್ಕುಂ॥
ದರಳಿದಂಬುಜದೆಮುಗಿದುತ್ಪಲದೆಯುಂತಳ್ತ ಪೊಳ್ತರೆಯ ಕೊಳದೊಲಿ

# ಸಪ್ತಮಸರ್ಗಂ

ಸೂ:— ಕ್ಷಿತಿಪಾಲಕಂ ಭೋಜನವರಜೆಯೆನಿಪ್ಪಿಂದು
ಮತಿಗಂ ರಘುಕ್ಷೋಣಿಪನ ಸುತಂಗಂ ಮುದಾ
ಸ್ವಿತನಾಗಿ ವರವಿವಾಹೋತ್ಸವವನೆಸಗಿದಂ ತಾನಧಿಕವಿಭವದಿಂದಂ॥

ಅನುಪಮಾನಂದದಿಂ ಭೋಜರಾಜಂ ಷಡಾ ೧
ನನನೊಡನೆ ದೇವಸೇನಾಖ್ಯೆ ಸತಿ ಕೂಡಿದಂ
ತನುರೂಪನೊಡನೆಕೂಡಿದತಂಗೆಯೊಡಗೊಂಡುನಗರಾಭಿಮುಖನಾದನು॥
ಮನದಿಚ್ಛೆ ಕೈಗೂಡದುದಕಾತ್ಮರೂಪಭೂ
ಷಣವ ನಿಂದಿಸುತೆ ನಿಜಶಿಬಿರಂಗಳಂಪೊಕ್ಕ
ರಿನನುದಯದೊಳ್ಮಂದತೇಜರೆನಿಪಗ್ರಹಂಗಳೊಲವನಿಪಾಲರೆಲ್ಲಂ॥

ಏನಾನುಮೆಡರಡ ಸದಿರಲಾ ಸ್ವಯಂವರ ೨
ಸ್ಥಾನದೊಳ್ ಶಚಿಯ ಸಾನ್ನಿಧ್ಯದಿಂದಲ್ಲಿರ್ದ
ಭೂನಾಥನಿವಹಕಾ ರಘುಸುತನ ಮೇಲಿರ್ದ ವೈರಮುಂ ಪೋಗೆ ಬಳಿಕಂ॥
ಭಾನುಕಿರಣವ ನಿವಾರಿಸೆ ಕೇತನಚ್ಛಾಯೆ
ತಾನೆಸೆಯೆ ಸುರಪಚಾಪಪ್ರಭೆಯ ತೋರಣ
ಶ್ರೇಣಿಯಾ ದಂಪತಿಗಳೈತಂದರಭಿನವಾಲಂಕೃತಿಯ ರಾಜಪಥದಿಂ॥

ತರುವಾಯಮಾ ವಧೂವರರನೀಕ್ಷಿಸಲೆಳಸಿ ೩
ವರಹೇಮಮಯಜಾಲಯುತಸೌಧಮಂ ಸಾರ್ದ
ಪುರಕಾಮಿನಿಯರನ್ಯಕಾರ್ಯಮಂ ತೊರೆದು ಮಾಡಿದ ಚೇಷ್ಟೆಗಳವಿಂತಾದವು॥
ತ್ವರಿತದಿಂದಾಲೋಕಪಥದೆ ಬರುತಿರ್ಪೋರ್ವ
ತರುಣಿ ಜಗುಳ್ದಿರೆ ಮುಡಿದ ಮಾಲೆ ಬಿಚ್ಚಿದ ಮುಡಿಯ
ಕರದೆ ಪಿಡಿದಿರ್ದೊಡಂ ಮರೆದಳದ ಕಟ್ಟುವುದನಾ ನೆಲೆಗೆ ಬರುವವರೆಗಂ॥

ಎಳೆಯ ಳೋರ್ವಳ್ ಪ್ರಸಾಧಿಕೆಯ ಕೈಯಿಂ ಕಿತ್ತು ೪
ಕೊಳುತಾರ್ದ್ರರಾಗದಂಘ್ರಿಯನೆ ತಾಂ ಮಂದಗತಿ [ಯ್ದಳು
ಯುಳಿದು,ಪೋಗುವ ಗವಾಕ್ಷದ ಮಾರ್ಗಮಂ ಪಾದಲಾಕ್ಷಾಂಕಮಂಗೆ

ಬಲದ ನೇತ್ರವ ನಲಂಕರಿಸುತಂಜನದೊಳಿ
ಸ್ನುಳಿದಕ್ಷಿಯಂ ವಂಚಿಸುತ್ತೆ ವಾತಾಯನದ
ಬಳಿಗೆ ಬಂದಳದೋರ್ವವನಿತೆಕೈಯೊಳೆ ಪಿಡಿವ ಕಾಡಿಗೆಯ ಕಡ್ಡಿಯಿಂದಂ||

ಮಿಸುನಿಯ ಗವಾಕ್ಷದೆಡೆಗಟ್ಟೆ ದಿಟ್ಟೆಯನೋರ್ವ ೫
ಶಶಿವದನೆ ಗಮನದಿಂ ಬಿಚ್ಚಿದುಡೆಗಂಟ ಬಂ [ಕ್ರು||
ಧಿಸದೆ,ಸೀರೆಯ ಕರದೆ ಪಿಡಿದು ನಿಂದಳ್ನಾಭಿಯಂ ಮುಸುಕೆ ಕಂಕಣಾಂ
ಳಿಸಿಯಳಿನ್ನೋರ್ವಳರೆಪೋಣಿಸಿದ ರನ್ನಗಳ
ರಶನೆಯನೆ ಪಿಡಿದೆಳ್ದು ಬರುತಿರಲ್ಕಡಿಗಡಿಗೆ
ಮಿಸುಪ ಮಣಿಯೆಲ್ಲಮುಂಜಾರೆ ದಾರಮುಯಳಿದುವವಳಕೈಬೆರಳಿನಲ್ಲಿ||

ಅತಿಮುದದೊಳಿಂತೈದ ವನಿತೆಯರ ಮಧುಗಂಧ ೬
ಯುತಮಪ್ಪ ಲೋಲಾಕ್ಷಿಮಧುಪಶೋಭಿತವದನ
ತತಿಯ ನೊಳಕೊಂಡಿಹ ಗವಾಕ್ಷಂಗಳಂಬುಜಾಲಂಕೃತಂಗಳೊಲೆಸೆಪಿನಂ||
ಸತಿಯರವರೆಲ್ಲರುಂ ಕಣ್ಗಳಿಂ ರಘುರಾಜ
ಸುತನ ಲಾವಣ್ಯರಸಮೀಂಟುತಂ ಮರೆದಿರ್ದ
ರಿತರ ವಿಷಯವನಖಿಳಕರಣವೃತ್ತಿಯದಕ್ಷಿಯೊಳಪೊಕ್ಕುದೆಂಬಪರಿಯಿಂ||

ಜನಪರ್ ಪರೋಕ್ಷದೊಳ್ ವರಿಸಿದೊಡಮೀ ಭೋಜ ೭
ನನುಜೆಯನಿವಳ್ ಸ್ವಯಂವರವ ಬಯಸಿದುದುಚಿತ
ಮೆನಿಪುದಂತಲ್ಲದೊಡೆ ಸಿರಿ ಹರಿಯನೆಂತಂತೆ ಪಡೆವಳೆಂತನುಗಣೆಯ ತಾಂ||
ಗಣೆಪೋಡೀ ಸ್ಪೃಹಣೀಯರೂಪಯುತಮಿಥುನಕ್ಕೆ
ತನಜಭವನನ್ಯೋನ್ಯಸಂಗಮಂ ಮಾಡದಿ
ರ್ದಿನಮೇತದುಭಯಸೌಂದರ್ಯನಿರ್ಮಾಣಯತ್ನಂ ವಿಫಲಮಲ್ತೆ ತನಗೆ||

ರತಿಮದನರಿವರ ರೂಪದೆ ಜನ್ಮಿಸಿದುದು ನಿ ೮
ಶ್ಚಿತಮಿದದರಿಂ ಸಾವಿರರರಸರಲ್ಲಿಂದುಮತಿ
ಸತಿಯನನುರೂಪನನೆಪೊಂದಿದಳ್ಪೂರ್ವಭವಗತಿಯ ಮನಮರಿವುದಲ್ತೆಂ
ತೃತಿಸುಖಂಗಳನಿಂತು ಪುರಕಾಮಿನೀಮುಖೋ
ದ್ಗತವಚನತತಿಗಳಂ ಕೇಳುತಂ ರಘುಜನು
ನ್ನತಮಂಗಳಾಲಂಕೃತಿಯನಾಂತ ಕನ್ಯಾಪ್ರದಾತೃಮಂದಿರವ ಸೇರ್ದಂ||

ಬಳಿಕಂ ಕರೇಣುವಿಂದಿಳಿಯುತಂ ರಘುಸುತಂ
ಸಲೆ ಕಾಮರೂಪೇಶದತ್ತಕರನಾಗಿ ತಾಂ
ಲಲನೆಯರ ಮನವ ಪುಗುವಂತೆ ವೈದರ್ಭನಿರ್ದಿಷ್ಟಚತ್ವರವ ಪುಗುತ
ಕುಳಿತು ವಿಲಸದಮೂಲ್ಯಪೀಠದೊಳ್ ಭೋಜನೃಪ
ನೊಲಿದಿತ್ತ ಮಧುಪರ್ಕಯುತಸರತ್ನಾರ್ಘ್ಯಮಂ
ವಿಲಸಿತದುಕೂಲಯುಗಮುಮನೈದೆ ಕೊಂಡನಾ ಸ್ತ್ರೀಕಟಾಕ್ಷಂಗಳೊ

ವರದುಕೂಲವನುಟ್ಟು ರಘುಜನಂ ವಿನಯದಿಂ
ಕರೆದೊಯ್ದರವರೋಧರಕ್ಷಕರ್ ವಧುವಿನೆಡೆ [
ಗುರೆ ನೊರೆಯುನಾಂತಬ್ಧಿಯಂ ತಟದಬಳಿಗೆ ನವಶಶಿರುಚಿಗಳೊಯ್ವ
ನರಪನರ್ಚಿತಪುರೋಹಿತನಗ್ನಿಸಮನಗ್ನಿ
ಗುರುತರಾಜ್ಯಾದಿಗಳನಿತ್ತು ತತ್ಸಾಕ್ಷಿಯೊಳೆ
ಪರಮಾದರದೆ ವಧೂವರರ ಪಾಣಿಗ್ರಹಣಮಂ ಮಾಡಿಸಿದನಲ್ಲಿ ತಾಂ

ನರನಾಥಸೂನು ನಿಜಹಸ್ತದಿಂ ವಧುವಿನ ಸು
ಕರವಂ ಪರಿಗ್ರಹಿಸಿ, ಬಳಿಯಿರ್ದಶೋಕ ವ [ಸ್ತ್ರ
ಲ್ಲರಿಯ ತಳಿರಂ ತನ್ನ ಪಲ್ಲವದೊಳಾಂತ ಚೂತಂಬೊಲೊಪ್ಪಿರೆ ತ
ವರನ ಮುಂಗೈ ಕಂಟಕಿತಮೂಯ್ತು ಕುವರಿಕೈ
ಬೆರಳೋಳಿ ಬೆಮರನಾಂತುದು ನೋೞ್ಪಡೀತೆರದ
ಕರಸಮಾಗಮಮುದವರೀರ್ವರ ಪ್ರೇಮಮುಮಂ ಸಮಮಾಗಿ ಭಾಗಿಸಿತೆನೆ

ಬಿಡದೋರ್ವರೋರ್ವರಂ ನೋೞ್ಪಳ್ತಿಯಿಂದೆ ಕ
ಣ್ಗಡೆಗಟ್ಟಿದಾ ದಂಪತಿಗಳ ದಿಟ್ಟಿಗಳೊಂದೆ [ಮ
ಕಡೆಕೂಡುತೊಡನೆ ಪಿಂತಿರುಗಿ ನಾಣಿಂದೆ ಸಂಕೋಚತೆಯೊಳೆಸೆಯೆ
ಕಡುಚಲ್ವನಾಂತಾ ವಧೂವರರ್ ಮುದದೆ ತ
ಮ್ಮೆಡೆಯೊಳ್ ಸಮುಜ್ವಲಿಪ ವಹ್ನಿಯಂ ಬಲವಂದು [
ಪಡೆದರ್ ಸುಮೇರುವಂ ಜೋಡಾಗಿ ಸುತ್ತುತಿಹ ಪಗಲಿರುಳ್ಗಳ ಶೋ

ಸರಸಿಜಾಸನಸಮಪುರೋಹಿತಂ ಪೇಳ್ದಂತೆ
ಗುರುನಿತಂಬದ ಚಕೋರಾಂಬಕದ ಭೋಜಸೋ
ದರಿ ಲಜ್ಜೆಯಿಂ ಲಾಜೆಗಳ ವಿಸರ್ಜಿಸುತಿರುವಿನಂ ಹೋಮವಹ್ನಿಯ

ವರಶಮೀ ಪಲ್ಲವ ಹವಿರ್ಲಾಜ ಗಂಧ ಯುತ
ಪರಿಪೂತ ಮಗ್ನಿಸಂಭವ ಧೂಮಕಲಿಕಮಾ [ದಾಗಂ॥
ತರುಣಿಯ ಕದಂಪುಗಳನಂಟಿ, ಕರ್ಣೋತ್ಪಲವ ತಾಂ ಕ್ಷಣಂ ಪೋಲ್ತು

ಕದಪು ಕೆಂಪಾದುದಾಕುಲವಾಂತ ನೇತ್ರದಿಂ ೧೪
ದುದುರಿದುದು ಕಜ್ಜಲಯುತಾಂಬುಬಿಂದುಂ ಬಾಡಿ
ದುದು ಕರ್ಣಪುಷ್ಪ ಮಾಚಾರಗತಹೋಮಧೂಮಗ್ರಹಣದಿಂ ವಧುವಿನಾ।
ಮುದದೊಳಾಗಂ ಸ್ವರ್ಣಮಯಪೀಠದೊಳ್ ಮಂಡಿ
ಸಿದ ದಂಪತಿಗಳಿಗಾದ್ರಾಕ್ಷತೆಯ ಸೂಸಿದರ್ [ದೊಳು॥
ಪದಪಿನಿಂ ಸ್ನಾತಕರ್ ಬಂಧುಯುತರಾಜನುಂ ಪುತ್ರ್ಯವೆಯರ್ ಕ್ರಮ

ಕುಲದೀಪನಾದ ಭೋಜಾವನಿಪ ನಿಂತು ಕಪು ೧೫
ನಲವಿಂದೆ ತಂಗೆಯ ವಿವಾಹಮಂ ಗೆಯ್ದು ತಾಂ
ನೆಲದೆರೆಯ ರೋರೋರ್ವರಂ ಸತ್ಕರಿಸುವುದಕೆ ಪೆಸಸಿದಂ ಸೇವಕರ್ಗೆ॥
ಒಳಗೆ ನಕ್ರವನಾಂತ ತಿಳಿಪುಡುವಿನೊಲ್ ಪುಳಿಸ
ನೊಳಗಿಟ್ಟು ಮೇಲೆ ಮುದಮಂ ತೋರ್ಪ ನೃಪಕುಲಂ [ದು॥
ತಳೆದ ಸತ್ಕೃತಿಯ ನುಡುಗರೆನೆವದೆ ಭೋಜಂಗೆ ತಿರುಗಿತ್ತು ಬೀಳ್ಕೊಂಡು

ತವೆ ರಘುಜ ನೊಯ್ವಂಗನಾರೂಪ ಭೋಗ್ಯವ ೧೬
ಸ್ತುವ ಸೆಳೆದುಕೊಳ್ವ ಹೊಂಚಿಕೆಯ ಸಿದ್ಧತೆಯಿಂದ
ಪುವನಿಪಾಲಕ ನಿವಹಮಾಕುಮಾರಂ ಬರ್ಪ ಪಥವ ಕಾಯ್ದಿರುತಿರ್ಪಿನಂ॥
ಸವೆಯ ದತಿಹರ್ಷದಿಂ ಭೋಜನುದ್ವಾಹಕಾ
ರ್ಯವ ಮುಗಿಸಿ, ತಂಗೆಗೆಸಿತೋ ಸರಿಯನಿತ್ತು ಪಯ
ಣವ ಮಾಡಲಜನಿಗನುಮತಿಗೊಟ್ಟು ತಾನುಮುವರೊಡನೈದೆ ಪೋದನಾಗಂ।

ವಾಸವಮಂ ಗೆಯ್ದು ಪಥದೊಳ್ ಮೂರಿರುಳ್ ಕುಂಡಿ ೧೭
ನೇಶನಾ ಮೂಜಗಕೆ ಪೆಸರಾದ ರಘುಜನೊಡ [ಸೂರ್ಯನಿಂ॥
ನಾಸುಮತಿಯಂಬಿಟ್ಟು ಮರಳೆ ದರ್ಶಾಂತದೊಳ್ ಸಸಿ ಮರಳುವೊಲ್
ಕೋಸಲಾಧೀಶರಘು ದಿಗ್ವಿಜಯದೊಳ್ ತಮ್ಮ
ಕೋಶಮಂ ಸೂರೆಗೊಂಡುದರಿಂದೆ ಮುನ್ನ ಮಾ
ಕೋಶವಾಂತರಸರ್ಗೆ ತತ್ಸುತಸ್ತ್ರೀರತ್ನಲಾಭಮಕ್ಷಮ್ಯಮಾಯ್ತು॥

ಮುಳಿಸಾಂತ ತದ್ರಾಜಕುಲ ಮಿಂದುಮತಿಯೊಡನೆ ೧೮
ಸಲವಿಂದೆ ಬರ್ಪಜನ ಮಾರ್ಗಮಂ ರೋಧಿಸಿತು
ಬಲಿಯಿತ್ತ ಸಿರಿಯುಸಾಂತತ್ರಿವಿಕ್ರಮಪದವನಿಂದ್ರರಿಪು ರೋಧಿಪಂತೆ॥
ಘಳಿಲನತಿಬಲದೊಡನೆ ಪರಮಾಪ್ತಸಚಿವನಂ
ನಿಲಿಸುತಂ ಪ್ರಿಯೆಯ ರಕ್ಷಣೆಗೆ ರಘುತನುಜನಾ
ನೆಲವೆರೆಯುಪಡೆಗಿದಿರ್ಸ್ಲಂದನಾ ಸುರತಟನಿಗಿದಿರಾದ ಶೋಣದಂತೆ॥

ಭರದಿಂ ಪದಾತಿಗೆ ಪದಾತಿ ರಥಿಕಂಗೆ ರಥಿ ೧೯
ತುರಗಾಧಿರೂಢಂಗೆ ತುರಗಾಧಿರೂಢನುಂ [ದ್ಧಂ॥
ಕರಿಯೇರ್ದವಂಗೆ ಕರಿಯೇರ್ದವನುಮಿದಿರಾಗುತಾಗೆ ತಾಂ ದ್ವಂದ್ವಯು
ನೆರೆ ಪ್ರೋತ್ಕ್ರ ವಾದ್ಯಸ್ವನಂ ಮಾತುಗಳ್ ಕೇಳ
ದಿರೆ ಚಾಪಧರರಾಗ ವಂಶಾಭಿಧಾನಮನೆ
ಒರೆಯುದ, ಶರಂಗಳೊಳ್ ಕೆತ್ತಿದಕ್ಷರದಿಂ ಸ್ವನಾಮಮಂ ತಿಳಿಸುತಿರ್ಕ್ಕುಂ

ಕುಮರೆಗಳಿನೆಳ್ದು ತೇರ್ಗಾಲಿಗಳಿ ನುರೆ ಪೆರ್ಚಿ ೨೦
ಮದದಾನೆಗಳ ಕರ್ಣತಾಡನದೆ ಗಗನಮುಂ [ಮತ್ತಂ॥
ಪುದಿದ ದೂಳಿಯುದು ಸೂರ್ಯಂಗೆ ಮರೆಯಿಟ್ಟ ತೆರೆಯೆಂತೆ ಕಂಗೊಳಿಸೆ
ಕದನದೊಳ್ ಪಡೆಯ ರಜಮುಂ ವಾಯುವಶದೆ ಬಿ
ರ್ಚಿದಬಾಯ್ಗಳಿಂ ಮತ್ಸ್ಯಕೇತನಂಗಳ್ ಗ್ರಹಿಸೆ
ಕದಡೆದ್ದ ಪೊಸನೀರನೀಂಟುತಿಹ ನಿಜಮಪ್ಪ ಮೀನ್ಗಳಂತವು ತೋರ್ದವು॥

ರಣದಲ್ಲಿ ಸಾಂದ್ರತರಧೂಳಿಯೊಳ್ ಚಕ್ರನಿ ೨೧
ಸ್ವನದಿಂದೆ ರಥವ, ಘುಂಟಾರವದೆ ಗಜಮುಮಂ
ಘನವೀರರಾತ್ಮಪರಭೇದವ ನಿಜೇಶನಾಮೋಚ್ಚಾರದಿಂ ತಿಳಿದರು॥
ಗಣಿಸೆ ಮತ್ತಂ ದೃಷ್ಟಿಪಥವ ಮುಸುಕುವ ರಜೋ
ಗಣಮೆಂಬ ಕಳ್ತಲೆಗೆ ಶಸ್ತ್ರಕ್ಷತಾಶ್ವವಾ
ರಣಭಟರ್ಕಳಿನೊಗೆವ ರಕ್ತಪ್ರವಾಹಮೇ ಬಾಲಾರ್ಕನಾದುದಲ್ಲಿ॥

ಕ್ಷತಜ ರುಧಿರದೆ ಭುವಿಯಿನೆಳ್ದ ಧೂಳಿಯು ಮರುತ ೨೨
ಹತಿಯಿಂದೆ ಮತ್ತೆ ತದ್ರಕ್ತೋಪರಿಸ್ಥಲಾ
ಗತಮಾಗಿ ಪೊಳೆದು ದಂಗಾರಶೇಷಾನಲನ ಮೊದಲೆಳ್ದ ಪೊಗೆವೊಲಲ್ಲಿ॥

ಹತಿಯಿನೊಗೆದಾ ಮೂರ್ಛೆ ಪೋಗೆ ರಥಿಕರ್ ನಿಂದಿ
ಸುತೆ ಹಯವ ಪಿಂತಿರುಗಿಸಿದ ಸೂತರಂ, ತಮಗೆ
ಹತಿಯನೆಸಗಿರ್ದವರ ಕೇತುಗಳ ಕುರುಪಿಡುತಮವರನೇ ಹತಿಗೆಯ್ದರು॥

ಬಿಡದೆ ಬಿಲ್ಲಾಳ್ಗಳೆಚ್ಚಂಬುಗಳ ನರಿಕುಲಂ ೨೩
ನಡುದಾರಿಯೊಳೆ ಕತ್ತರಿಸಿದೊಡಂ ಲೋಹಾಗ್ರ [ಕರ್ಗಂ॥
ದೊಡವೆರೆಯುತುಳಿದರ್ಧಭಾಗಂಗ ಳಾತ್ಮಜವದಿಂ ಗುರಿಯು ಮುಟ್ಟುತಿ
ಸಡೆವ ಗಜಯುದ್ಧದೊಳ್ ಕ್ಷುರನಿಶಿತಚಕ್ರದಿಂ
ಕಡಿದ ಜೋದರ ಶಿರಂಗಳ್ ಚಿರದೆ ರಣರಂಗ
ವಡೆಗೆ ಬೀಳ್ವವು ಶೇನನಖಕೋಟಿಸಕ್ತಕೇಶಂಗಳಾಗಿರ್ಪ ಕತ್ತರಿಂ॥

ಮೊದಲೆ ತನ್ನಿಂ ಗಾಯಗೊಂಡು ಮೆಯ್ಮರೆದು ತುರ ೨೪
ಗದ ಬೆನ್ನೊಳೊರಗುತಾರ್ಪಳಿದ ಪಗೆಯಂ ಮತ್ತೆ [ಲಂ॥
ನದೆಬಡಿಯುದವನ ಪುನರುಜ್ಜೀವನಸಮನೆ ಬಯಸಿದ ನೋರ್ವಘೋಟಾಯಿ
ಕದನದೊಳ್ ಕವಚಧರ ರಸುವಳ್ತಿದೊರೆಯುತೊರೆ
ದೆಗೆದಸಿಗಳಿಂ ಪೊಮ್ಮ ತಾಂ ಬೃಹದ್ವಂತದ
ಲ್ಲೊಗೆದ ಬೆಂಕಿಗೆ ಬೆದರ್ದದನಾರಿಸಿದವು ಕರತೀಕರದೆ ಕರಿಗಳಾಗಂ॥

ಸರಳಿಂದೆ ಕಡಿದ ತಲೆಗಳೆ ಪಣ್ಗಳಾಗೆ ನೆಲ ೨೫
ಕುರುಳ್ದ ಸೀಸಕಗಳೇ ಪಾನಪಾತ್ರೆಗಳಾಗೆ
ಪರಿವ ರಕ್ತಮೆ ಮದ್ಯಮಾಗೆ ಯಮಪಾನಭೂಮಿಯೊಲೆಸೆದುದಾಜಿರಂಗಂ
ಪರಿತಂದು ನರಿಯೊಂದು ಪಕ್ಕಿಗಳ್ ಕುಕ್ಕಿ ತಿನು
ತಿರುವ ಭುಜಖಂಡಮಂ ಬಿಡದೆಳೆದುಕೊಂಡದಂ
ತಿರುಗಿ ಚಲ್ಲಿದುದಂಗದಾಗ್ರವಿಕ್ಷತತಾಲುವಾಗಿ ಮಾಂಸಾಶೆಯುರೆಯುಂ॥

ಆರಿಖಡ್ಗಛಿನ್ನಶಿರನಾಗು ತಾ ಕ್ಷಣದೊಳೇ ೨೬
ಸುರವಿಮಾನಮನೇರು ತೆಡಮೊಡೆಯೊಳಿರ್ಪಮರ
ತರುಣಿಯೊಡನೋರ್ವಭಟನೀಕ್ಷಿಸಿದನಾಜಿಯೊಳ್ ನಿಜಕಬಂಧಂ ಕುಣಿವುದಂ
ಪೆರರೀರ್ವರುಂ ರಥಿಗಳಲ್ಲಿ ಸಾರಥಿಗಳಳಿ
ದಿರೆ ತಾವೆ ನಡೆಸೆ ತೇರಂ ತುರಗಮುಂ ಮಡಿಯೆ [ವಾವರು॥
ಧರದೆ ಗದೆಗೊಂಡವರ್ ಕೆಣಕೆ ಗದೆಯುಂ ಮುರಿಯೆ ಭುಜಯುದ್ಧಕನು

ಬೇರೆಡೆಯೊಳನ್ಯೋನ್ಯ ಹತಿಯೊ ಳುಭಯ ಭಟರ್ಗೆ ೨೭
ಪಾರಿತಸುವೇಕಕಾಲದೊಳೆ ಸುರಪದವಿಯೊಳ್
ಸೇರುತವರೀರ್ವರಲ್ಲಿಯುಮೋರ್ವ ಸುರವನಿತೆಯನೆ ಬಯಿಸಿ ಕೆಣಕುತಿರ್ಕುಂ
ಈರೀತಿಯಿಂದ ಮಿರ್ತ್ತಡಿಯ ಬಿರುಗಾಳಿಯಿಂ
ವಾರಿನಿಧಿ ತಾಂ ಕ್ರಮದೆ ಪೆರ್ಚುತಿರಲಿರ್ಕೆಡೆಯು
ತೋರಲೆಗಳಂತಿ ರಿರ್ಪಡೆಗ ಳನಿಯತಜಯಾಜಪಾಂತವ್ರೋಂದೊಂದರಿಂ॥

ಅಳಿದೊಡಂ ತನ್ನ ಪಡೆ ಪಗೆಯಿಂದೆ ರಘುಜ ನತಿ ೨೮
ಬಲಯುತಂ ಪೊಕ್ಕನಾರಾತಿಸೈನ್ಯವ ಪೊಗೆಯು
ನೆಲರಿರದೆ ತಳ್ಳಿದೊಡಮುಗ್ನಿ ತಾಂ ತೃಣದೆಡೆಯ ಬಿಡದೆಪುಗುವಂತಿರಾಗಂ
ಕುಳಿತು ರಥದೊಳ್ ಕವಚಚಾಪತೂಣೀರಮುಂ
ತಳೆದೇಕವೀರನಜ ನರಿಬಲವ ನೂಂಕಿದಂ [ಹಂ॥
ಪ್ರಳಯದೊಳ್ ಮೇರೆದಪ್ಪಿದ ಜಲಧಿಯಂ ನೂಂಕುವಂತಿರೆ ಮಹಾವರಾ

ನೋಡೆ ಘುರದಲ್ಲಿ ರಘುಸೂನು ಬಲಹಸ್ತಮಂ ೨೯
ಮೂಡಿಗೆಯೊಳಿಟ್ಟುಡೊಂದೇ ಕಾಂಬುದರಿಯ ಕೊಲೆ
ಮಾಡುವಂಬುಗಳ ಕಿವಿಯೆನ್ನಗಂ ಸೆಳೆದ ಪದೆ ಪೆತ್ತುದೆನೆ ತೋರಲಾಗಂ॥
ನಾಡೆ ಮುಳಿಸಿಂ ಕರ್ಚೆ ಕೆಂಪಾಂತ ತುಟಿಗಳಿಂ
ಮೂಡಿದತ್ಯೂರ್ಧ್ವರೇಖೆಯ ಪುರ್ಬುಗಂಟಿಸಿಂ
ಕೂಡಿ ಹುಂಕರಿಪ ಶರಖಂಡಿತಾರಾತಿಶಿರದಿಂ ಮುಚ್ಚಿದಂ ಭೂಮಿಯಂ॥

ಸರ್ವಗಜಮುಖ್ಯಸೇನಾಂಗದಿಂದಂ ಮತ್ತೆ ೩೦
ಸರ್ವಕವಚವಿಭೇದಿ ಲಸದಾಯುಧಂಗಳಿಂ [ವಂ॥
ಸರ್ವಪ್ರಯತ್ನದಿಂ ಸರ್ವನೃಪರುಂ ಸಮರದೊಳ್ ಮುತ್ತೆ ರಘುಸೂನು
ಸರ್ವರಿಪುಶಸ್ತ್ರಸಂಛನ್ನರಥನಂ ರಾಘ
ವೋರ್ವೀಶನಂ ಧ್ವಜಾಗ್ರದೆ ತಿಳಿಯುವಂತಾಯ್ತು
ಪರ್ವಿರ್ದಹಿಮದೊಳಡಗಿದ ಬಾಲಸೂರ್ಯನಂ ಸಸುಪೆಳ್ಗಿಸರಿವತೆರದಿಂ॥

ಮದನ ಸುಂದರ ಸತಂದ್ರಿಲನಜಂ ತಾಂ ಪ್ರಿಯಂ ೩೧
ವದನಿಂದೆ ಪಡೆದ ಗಾಂಧರ್ವಾಸ್ತ್ರಮಂ ಸ್ವಪಚ [ವಂತೆ॥
ಯುವ ಮೇಲೆ ಭರದಿಂ ಪ್ರಯೋಗಿಸಿದನಾಜಿಯೊಳ್ ನಿದ್ರೆ ತಲೆದೋರು

ಪೆದೆಯೇರಿಸಲ್ಕೆ ಕೈ ಕದಲದಿರೆ ತಮ್ಮ ತೋ
ಳ್ಬದಿಯಲ್ಲಿ ಸೀಸಕಂ ಜಾರೆ ಕೇತನದ ಕಂ [ಳು॥
ಬಡ ನೆಲೆಗೆ ಮೆಯ್ಗೊಟ್ಟು ಮಲಗಿದುದು ರಿಪುಸೈನ್ಯಮಾಗ ನಿದ್ರಾವಶದೊ

ಬಳಿಕ ಮಿನಿಯಳ್ಗಿನಿವನಿತ್ತ ತನ್ನಯ ತುಟಿಯೊ ೩೨
ಳೊಲಿದಿಟ್ಟ ವಿಜಯಶಂಖವ ನೂದೆ ರಾಘವಂ [ಗಂ॥
ಸಲೆ ಮೂರ್ತಿವೆತ್ತಿಹ ನಿಜಾರ್ಜಿತಸುಕೀರ್ತಿಯಂ ಕುಡಿವಂತೆ ತೋರ್ಪ್ಪಸಾ
ತಿಳಿದು ರಘುಜನ ಕಂಬುರವಮೊಂದು ತದ್ಭಟಾ
ವಳಿ ಮರಳಿ ಬರುತೀಕ್ಷಿಸಿತು ನಿದ್ರಿಸುವ ವೈರಿ [ನಂ॥
ಗಳ ನಡುವೆ ಮುಕುಳಿತಾಬ್ಜಾಂತರಪ್ರತಿಬಿಂಬಿತೇಂದುವೊಲ್ ಪೊಳೆವಾತ

ವರರಾಘವಂ ನಿಮ್ಮ ಜಸವ ತಾನೀಗಳಪ ೩೩
ಹರಿಸಿ ದಯೆಯಿಂ ಜೀವವುಳಿಸಿರ್ಪನೆಂದಜಂ
ಬರೆಯಿಸಿದ ನರಸುಗಳ ಕೇತುಗಳೊಳೈದೆ ರಕ್ತಾರ್ದ್ರಶರದಗ್ರದಿಂದಂ॥
ತರುವಾಯುಮಾ ಕುಮಾರಂ ಸೀಸಕವ ತೆಗೆಯು
ತಿರೆ ಬಿರ್ಚೆ ಕೇಶಬಂಧಂ ಬೆಮರ್ಪನಿಯನಾಂ [ತು॥
ತಿರೆ ಲಲಾಟಂ ಬಂದು ಬಿಲ್ಬದಿಯೊಳಿಟ್ಟ ತೋಳಿಂ ಕಾಂತೆಗೊರೆದನಿಂ

ಜನಪರಂ ಬಾಲಾಪಹಾರ್ಯ್ಯಶಸ್ತ್ರರ ನೀಗ ೩೪
ಳನುಮತಿಯನಿತ್ತೆನೀಕ್ಷಿಸು ನೀನು ವೈದರ್ಭಿ!
ರಣದೊಳೀವಿಧಚೇಷ್ಟೆಯಿಂದೆಳಸಿದರ್ ನಿನ್ನನೆನ್ನ ಕರಗತೆಯನಿವರು॥
ಎನೆ, ಭೋಜಸೋದರಿಯ ಮುಖಮಾಕ್ಷಣಂ ವೈರಿ
ಜನಿತ ದುಃಖವಿಮುಕ್ತಮಾಗಿ ರಾಜಿಸಿತು ದ [ತೆ॥
ರ್ಪಣಕಂಟೆದುಸಿರ ಬಿಸಿಯಾರಲದು ನಿಜನಿರ್ಮಲತೆಯಾಂತು ಬೆಳಗಿದಂ

ನಲವಾಂತೊಡಂ ಕುವರಿ ಪೊಗಳಲ್ಕೆ ನಾಣ್ಚಿ ತಾಂ ೩೫
ಕೆಳದಿಯರ ಮಾತಿನಿಂ ಕಾಂತನಂ ನುತಿಸಿದಳ್
ಜಲದಮಂ ನವಜಲವೆ ನಾಂದ ಭೂಲಲನೆ ಬಣ್ಣಿಸುವಂತೆ ಸೋಗೆಕೇಗಿಂ।
ಪುಲಕಿತನಜನಿಂತು ವಾಮಪಾದವನ ನೃಪರ
ತಲೆಯ ಮೇಲಿಟ್ಟು ಕರೆದೊಯ್ದನಾಗಂ ರೂಪು
ವಳಿವ ಜಯಲಕ್ಷ್ಮಿಯುಂ ರಥತುರಗಧೂಳಿರೂಕ್ಷಾಲಕಾಪ್ರಗ ಮಯಿತೆಯಂ

ಸುತನ ವೃತ್ತಾಂತಮಂ ಮುನ್ನಮೇ ತಿಳಿದು ಹ ೩೬
ರ್ಷಿತನಾದ ರಘುನರೇಂದ್ರಂ ವಿಜಯಿಯಾಗಿ ಸ
ನ್ನುತಿವೆತ್ತ ಸತಿಯೊಡನೆ ನಲವಿನಿಂದಾಗಮಿಸಿದಜನನಭಿನಂದಿಸುತ್ತಂ॥
ಅತುಳಗುಣಿಯೆನಿಸುವಾ ಕುವರನಿಗೆ ತಾನೊಪ್ಪಿ
ಸುತೆ ಕುಟುಂಬದ ಭಾರಮಂ ಮೋಕ್ಷಮಾರ್ಗಾಭಿ
ರತನಾದ ನಿನವಂಶಜರ್ ಗೃಹದೊಳಿರರಲ್ತೆ ಕುಲಧುರ್ಯನಿರೆ ತನುಭವಂ॥

---

## ಅಷ್ಟಮಸರ್ಗಂ.

ಸೂ:— ಒಂದುದಿನ ಮಜನೃಪಂ ನಗರೋಪವನದೆಡೆಯೊ
ಳಿಂದು ಮತಿಯೊಡನೆ ವಿಹರಿಸುತಿರ್ಪಿನಂ ಮರಣ
ಮೊಂದೆ ಸುರಸುಮದರ್ಶನದಿ ನವಳ್ ತನ್ಮಹೀಪಂ ಮಿಗೆ ಪ್ರಲಾಪಿಸಿದನು

ಪರುಷದಿಂ ರಘುನೃಪಂ ತನ್ನ ಸುತನುದ್ವಾಹ ೧
ಕರಸೂತ್ರಮಂ ತಳೆದಕಾಲದೊಳೆ ತತ್ಕರದೊ [ಮಾರಂ॥
ಳಿರಿಸೆ ಭೂಲಲನೆಯುಮ ನಪರೇಂದುಮತಿಯಸಿರಿಸುವೊಲಾಗಳಜಕು
ಮರಿತ ಕೃತಿಗಳಿನಾದೊಷಂ ಪಡೆಯ ಲುಜ್ಝಗಿಪ
ರರಸುಮಕ್ಕಳದಾವುದಂ ತಾನೆ ಲಭಿಸಿದಾ
ವರರಾಜ್ಯಮಂ ಗ್ರಹಿಸಿದುದು ತಂದೆಯಾಜ್ಞೆಗಲ್ಲದೆ, ಭೋಗದಾಶೆಗಲ್ಲಂ॥

ವರವಸಿಷ್ಠಂ ಗೆಯ್ದ ಸಲಿಲಾಭಿಷೇಕಮಂ ೨
ಧರಣಿಯ ಜನೊಡನೆ ತಾನನುಭವಿಸಿ, ಧನ್ಯತೆಯ [ಮತ್ತಂ॥
ನುಡಿ ನಿರ್ಮಳೋಚ್ಛ್ವಾಸದಿಂದೆ ಪೇಳುಗುಮೆಂಬ ತೆರದೆ ಕಂಗೊಳಿಸೆ
ಪರಿಲಸದಥರ್ವಜ್ಞ ಗುರುವಿ ನಭಿಷಿಕ್ತನಾ
ಗಿರುವ ರಘುಪುತ್ರ ನರಿಗಳ್ಗೆ ದುಸ್ಸಹನಾದ [ಲ್ತೇಂ॥
ನರಿವೊಡಾ ಕ್ಷಾತ್ರತೇಜಂ ಬ್ರಾಹ್ಮ್ಯದೊಡವೆರೆಯೆ ಪವನಾಗ್ನಿಯೋಗಮ

ಮರಳಿ ಹರೆಯವನಾಂತ ರಘುವೆಂದೆ ಅಜನರೇ ೩
ಶ್ವರನ ನರಿದರ್ ಪ್ರಜೆಗಳಾ ಸುತಂ ಪಿತನ ಭಾ
ಸುರ ರಾಜ್ಯರಮೆಯ ನಲ್ಲದೆ ತತ್ಸಮಸ್ತಗುಣಮುಂ ಪೊಂದಿಶೋಭಿಪುದರಿಂ॥

ಪರಿವಿಡಿಯೊ ಳೆರಡುಮೆರಡಂ ಪೊಂದಿ ಪಿರಿದೆನಿಸಿ
ಮೆರೆದವಾ ಜನಕಸಂಪ್ರಾಪ್ತರಾಜ್ಯಂ ಶುಭಾ
ಕರಸಜಮಹೀಶನಂ ಮತ್ತೆ ಪರವಿನಯಮಾತನ ಸುಯೌವನವನಾಗಂ॥

ನರನಾಥನಾದಜಂ ಸೂತನಾಗತ ಧರಾ ೯
ತರುಣಿಯಂ ತಾಂ ಬಲಾತ್ಕರಿಸೆ ಬೆದರುವಳೆಂದು
ಕರುಣದಿಂದಂ ನವೋಢಾಂಗನೆಯ ನೆಂತಂತೆ ಭೋಗಿಸೆ ಪ್ರಜೆಗಳಲ್ಲಿ॥
ದೊರೆಗೆ ನಾನೇ ಮಾನ್ಯನೆಂದು ತಾಂ ಪ್ರತಿಯೋರ್ವ
ನರಿಯುತಾತನಿ ನಾವನುಂ ತಿರಸ್ಕೃತ ನಾಗ [ಕೋಂಪು॥
ದಿರುವ ನಂಬುಧಿಯಿನಪಮಾನಮಂ ಪೊಂದದೊಲ್ ನಿಮ್ನಗಾ ಶತಮೊ

ಅತಿತೀಕ್ಷ್ಣ ಮೃದುತೆಗಳ ನುಳಿದು ಮಧ್ಯಮ ಸುಪ ೧೦
ದ್ಧತಿಯ ನವಲಂಬಿಸುತ್ತಾ ಅಜಂ ಗಾಳಿ ತರು
ತತಿಯನೆಂತಂತೆ ನೃಪಕುಲವ ಮಣಿಸುತೆ ತದುತ್ಪಾಟನವ ನುಳಿದಿರ್ದನ॥
ಮತಿಗೊಡದೆ ವಿಕೃತಿಗೆ ನಿಜಾಮಾತ್ಯರೊಳ್ ಪ್ರತಿ
ಷ್ಠಿತನಾದ ತತ್ಸುತನನೀಕ್ಷಿಸುತೆ ರಘು ವನಿ [ರ್ದನ॥
ತ್ಯತಿಯಾಂತ ನಾಕಗತ ವಿಷಯಂಗಳೊಳಮಾಶೆಯಂ ತ್ಯಜಿಸಿ ಸುಖದೊಳಿ

ಇಂತು ನಿಸ್ಪೃಹತೆ ರಘುಗುಚಿತಂ ದಿಲೀಪಭೂ ೧೧
ಕಾಂತವಂಶಜರೆಲ್ಲರುಂ ಮುಪ್ಪಿನೊಳ್ ಗುಣಾ [ಶ್ರೀಂ॥
ಕ್ರಾಂತ ಪುತ್ರರ್ಗೆ ಸಿರಿಯೊಪ್ಪಿಸುತೆ ನಾರುಡೆಯ ಯತಿಯ ಪಥವಿಡಿವರ
ನಂತಸಮೊಳಾಗ ವನವಾಸ ಕುಜ್ಜುಗಿಸೆ ಜನ
ಕಂ ತನಯನಜ ನಾತ್ಮವೇಷ್ಟನ ನುಃಶೋಭಿಶಿರ
ಮಂ ತದಂಘ್ರಿಯೊಳಿಟ್ಟು ತನ್ನನಗಲದಿರೆಂದು ಬೇಡಿದಂ ತನ್ನ ಪಿತನಂ॥

ತನಯ ವತ್ಸಲನಾವ ರಘು ವಸ್ರು ಮುಖನಪ್ಪ ೧೨
ತನುಜನಿಷ್ಟವ ಗೆಯ್ದನಲ್ಲದೆಯೆ ತಾ ನುಳಿದು [ದೆಯೆ ತಾಂ॥
ದೆನಿಪ ಸಿರಿಯಂ ಬಿಟ್ಟಪೊರೆಯ ನುರಗಂ ಮರಳಿ ಪೊಂದದೊಲ್ ಪೊಂದ
ಮನೆಯ ನುಳಿದೂರ ಹೊರವಾಣದಲ್ಲಿರ್ದು ನಾ
ಲ್ಕನೆಯದೆನಿ ಪಾಶ್ರಮವನಾಂತು ತಾನುರೆ ಜಿತಕ
ರಣನಾಗಿ ನೊಸೆಯಿನೆಂತಂತೆ ಸುತಭೋಗ್ಯರಮೆಯಿಂದುಪಾಸಿತನಾದನು॥

ಶಮಯುಕ್ತ ಪೂರ್ವನೃಪನಿಂ ಮತ್ತಮಭ್ಯುದಿತ ೮
ರಮಣೀಯನವಭೂಪನಿಂ ಕೂಡಿ ಸೂರ್ಯವಂ
ಶಮದಸ್ತಮಿಪಶಶಿಯನುದಿತಭಾಸ್ಕರನುಮಂ ತಳೆದ ನಭಕೆಣೆಯಾಗಿರೆ||
ಯಮಿ ನೃಪತಿ ಲಕ್ಷಣರ್ ರಘುರಾಘವರ್ ನೋಡೆ
ವಿಮಳಮೋಕ್ಷಮಹೋದಯಾರ್ಥಯುತಮಪ್ಪ ನಿರು [ಜನಕೆ||
ಪಮಧರ್ಮಯುಗ ದಂಶವೆರಡಿಳೆಯೊ ಳೊಗೆದವೆನೆ ತೋರ್ದಪರ್ ನೋಳ್ಪ

ಅರಿಗಳಂ ಜಯಿಸಲ್ಕೆ ತಾಂ ನೀತಿವಿದಮಂತ್ರಿ ೯
ವರರೊಡನೆ ಕೂಡಿದನಜಂ ರಘುವುಮೈದೆ ತಾಂ [ಮತ್ತಂ||
ಸ್ಥಿರಮುಕ್ತಿಪದವ ಸಾರ್ಜಿಸುವುದಕೆ ಸೇರ್ದನಾ ಯೋಗೀಂದ್ರರೊಡನೆ
ಪರಿಕಿಸಲ್ಕಾ ಯುವಕ ಭೂನಾಯಕಂ ನ್ಯಾಯ
ಪರಿಪಾಲನೆಗೆ ಧರ್ಮವಿಷ್ಟರವನಡರ್ದನಾ
ಜರಠನೃಪನೇಕಾಂತದೊಳ್ ಕುಶಾಸನವಾಂತ ನೇಕಾಗ್ರತಾಪ್ರಾಪ್ತಿಗೆ||

ನರಪ ನೋರ್ವಂ ನಿಜಪ್ರಭುಶಕ್ತಿಮಹಿಮೆಯಿಂ ೧೦
ದರಿರಾಷ್ಟ್ರಚಯವ ಗೆಲ್ದಂ ಮತ್ತಮಿತರಭೂ
ವರ ನೊಡಲೊಳಿರ್ಪೈದು ಮರುತಂಗಳಂ ವಶಂಗೆಯ್ದನಾ ಪ್ರಣಿಧಾನದಿಂ||
ಧರೆಯಲ್ಲಿ ರಿಪುಕರ್ಮ ಫಲವನಾ ನೂತನೇ
ಶ್ವರನಿರದೆ ಭಸ್ಮಮಂ ಮಾಡಿದಂ ವೃದ್ಧನಾ [ದಂ||
ಧರಣಿಪಂ ಜ್ಞಾನಾಗ್ನಿಯಿಂದೆ ನಿಜಕರ್ಮಮಂ ಸುಟ್ಟು ಬೂದಿಗೈಸನೆಸಗಿ

ಫಲಕಾರಿಯಪ್ಪ ಸಂಧ್ಯಾದಿಷಡ್ಗುಣವ ತಾ ೧೧
ನೊಲವಿಂ ಪ್ರಯೋಗಿಪನಜಂ ಗುಣತ್ರಯಕೆ ನೆಲೆ [ವೃಂ||
ಗೊಳಿಸಿದಂ ಸಾಮ್ಯತೆಯನೈದೆ ತಾಂ ಸಮಲೋಷ್ಟಕಾಂಚನನೆನಿಸಿಪ್ಪ ರಘು
ಫಲವ ಪಡೆವನ್ನೆಗಂ ಬಿಡನಾತ್ಮ ಕೃತಿಯ ನಿ
ಷ್ಫಲಕರ್ಮನಾ ನವನೃಪಂ ಯೋಗವಿಧಿಯ ತಾ
ನುಳಿಯನಾ ಸ್ಥಿರಮತಿಯ ವೃದ್ಧಭೂಪಂ ಬ್ರಹ್ಮದರ್ಶನ ಮಪ್ಪನ್ನೆಗಂ||

ಉದಯಾಪವರ್ಗಕಾಂಕ್ಷಿಗಳುಭಯರಿಂತು ದುರಿ ೧೨
ತದ ಕಡೆಗೆ ಸೆಳೆಯು ವರಿಯೊಳ ಮಿಂದ್ರಿಯದೊಳಪ್ರ
ಮುದಿತರಾಗಿರ್ದು ಪರಿಪಡಿಯೊಳಾ ಎರಡು ಸಿದ್ಧಿಯನಾಂತರಾ ಬಳಿಕ್ಕಂ||

ಮುದದೊಳಾ ಸಮದರ್ಶಿರಘು ಸುತೇಚ್ಛಾನುರೋ
ಧದೆ ಕೆಲವುವರ್ಷಂಗಳಂ ಕಳೆದು ಪರಮುಮು
ಕ್ತಿದಮವಿದ್ಯಾರಹಿತನಿತ್ಯಪುರುಷನನೈದೆ ಸೇರ್ದನಾ ಯೋಗದಿಂದಂ||

ತನುವ ಬಿಟ್ಟಂ ತಂದೆಯೆಂಬುದಂ ಕೇಳ್ದು ಕಂ ೧೩
ಬನಿಗರೆದು ಚಿರಕಾಲಮಜನಾಹಿತಾಗ್ನಿ ತಾ [ಮತ್ತಂ
ನನಲರಹಿತಾಂತ್ಯವಿಧಿಯಂ ರಘುವಿಗೆಸುಗುತಂ ಯತಿವೃಂದದೊಡನೆ
ತನಗಿರ್ಪ ಪಿತೃಭಕ್ತಿಯಿಂದೌರ್ಧ್ವದೈಹಿಕವ
ಜನಕಂಗೆ ಮಾಡಿದಂ ಶ್ರಾದ್ಧಜ್ಞನಾ ಸುತಂ [ದವರ್ ತಾಂ||
ತನುಭವರ್ ಕೊಟ್ಟ ಪಿಂಡವ ಬಯಸರಲ್ತೆ ಯೋಗದೊಳೊಡೊಲ ತೊರೆ

ಪರಮಪದಮಂ ಪೊಂದೆ ತಂದೆ ದುಃಖಿಸಲಾಗ ೧೪
ಪರಿಯೆಂದು ಪರಮಾರ್ಥವಿದರೊರೆಯೆ ಚಿಂತೆಯಂ
ತೊರೆದಜಂ ತಿರುವೇರಿಸಿದ ಬಿಲ್ಲಿನಿಂ ಜಗವ ತನ್ನ ವಶದಲ್ಲಿರಿಸಿರೆ||
ಧರಣೀನಿತಂಬಿನಿಯುಮಿಂದುಮತಿಯುಂ ಮಹ
ತ್ತರಶೂರತತ್ಪತಿಯಸಾಂತಿರ್ದು ಮೊದಲನೆಯ
ತರುಣಿ ಬಹುರತ್ನಸೂಯೆನಿಸಿದಳ್ ವೀರಸುತನಂ ಪೆತ್ತಳಪರಕಾಂತೆ||

ದಶಶತಮರೀಚಿತೇಜವನಾಂತ ತತ್ಸುತಂ ೧೫
ದಶರಥಸುನಾಮಕಂ ತನ್ನ ಕೀರ್ತಿಯನೈದೆ [ರು||
ದಶದಿಶೆಗಳೊಳ್ ತುಂಬಿ ದಶಮುಖಾರಿಯ ಜನಕನಾಗುವುದನರಿಪೆ ಬುಧ
ಋಷಿದೇವಪಿತೃಋಣತ್ರಯವ ತಾಂ ಕ್ರಮದೆ ತೀ
ರಿಸುತ ಮಧ್ಯಯನದಿಂ ಮಖದೆ ಸಂತಾನದಿಂ
ಪೆಸೆದನಾ ಅಜಮಹೀರಮಣನಾಗಂ ಪರಿಧಿಮುಕ್ತಮಾರ್ತಾಂಡನಂತೆ||

ಶರಣಜನಭಯನಿವಾರಣೆಗೆ ಬಲಮಂ ಪಂಡಿ ೧೬
ತರನೈದೆ ಸತ್ಕರಿಸುವುದಕೆ ವಿದ್ಯೆಯುಮನಾಂ [ದಂ||
ತಿರುವಜನೃಪಾಲಕನ ಧನಮಲ್ಲದೆಯೆ ಗುಣಮುಮಿತರೋಪಕೃತಿಗಾದು
ಅರಸನಾತಂ ಪ್ರಜಾಪ್ರಿಯ ನಾತ್ಮಜನೊಳಿರಿಸಿ
ಧರೆಯ ಭಾರವನುಪವನದೊಳೊಂದು ದಿನಮರಸಿ
ವೆರಸು ವಿಹರಿಸುತಿರ್ದನಿಂದ್ರನುರಿ ಶಚಿಗೂಡಿ ವಿಹರಿಪೊಲ್ ನಂದನದೊಳು||

ತರುವಾಯದೊಳ್ ತೆಂಕಣದ ಕಡಲ ತೀರದ ೧೭
ಲ್ಲಿರುವ ಗೋಕರ್ಣದೊಳ್ ನೆಲಸಿರ್ಪ ಶಿವನೆಡೆಯೊ
ಳುರೆ ವೀಣೆಯಂ ಬಾಜಿಸಲ್ಕೆಳಸಿ ನಾರದಂ ಸುರಮಾರ್ಗದಿಂ ಬರುತಿರೆ॥
ಪರಿಲಸತ್ತದ್ವಿಪಂಚಿಕೆಯ ಶಿರದಲ್ಲಿ ಜೋಲ್ದು
ರುದಿವ್ಯಪುಷ್ಪಮಾಲೆಯನಾಗ ಮರುತನಪ
ಹರಿಸಿದಂ ತಾನದರ ಪರಿಮಳವನಂಗದೊಳ್ ಧರಿಸುವಭಿಲಾಷೆಯೊಳೆನೆ॥

ಕುಸುಮಾನುಸಾರಿಭೃಂಗಂಗಳಿಂ ಬಳಸಿದಾ ೧೮
ಋಷಿವೀಣೆಯಾಗ ಮಾರುತನಿಂದೆ ತನಗೆ ಸಮ
ನಿಸಿದ ಪರಿಭವಕೆ ಕಜ್ಜಲಮಿಶ್ರಬಾಷ್ಪಮಂ ಸುರಿಸುವೊಲ್ ತೋರುತಿರಲು॥
ಮಿಸುಪ ತದ್ದಿವ್ಯಮಾಲೆಯು ವನದ ವಲ್ಲಿಗಳಿ
ಗೆಸಗುತೆ ತಿರಸ್ಕೃತಿಯ ತನ್ನಮಧುಗಂಧದಿಂ,
ವಸುಧೇಶನಜನ ಕಾಂತಾಮಣಿಯ ಕುಚಚೂಚುಕಸ್ಥಾನಮಂ ಸೇರ್ದುದು

ಸುಂದರಸ್ತನ ಮೈತ್ರಿಯಂ ಕ್ಷಣಂ ಮಾಲೆಯದು ೧೯
ಪೊಂದಿರ್ಪುದಂ ನಸುನಿರೀಕ್ಷಿಸುತೆ ಪರವಶದೊ [ತ್ರಂ
ಳಿಂದುಮತಿ ರಾಹುಹೃತಚಂದ್ರಚಂದ್ರಿಕೆಯೊಲ್ ನಿಮೀಲನವನಾಂತು ಮ
ಅಂದು ಕರಣವನುಳಿದ ತನುವಿನೊಡನಿಳೆಗೆ ತ
ನ್ಮಂದಗಮನೆಯು ಬಿಳ್ದು ಪತಿಯುಮಂ ಕೆಡಪಿದಳ್
ನಿಂದುರಿವದೀಪಶಿಖೆ ಬೀಳಲದರೊಡನೆ ತೈಲದ ಬಿಂದುವಿಳೆಗುರುಳದೇ॥

ಆದಂಪತಿಗಳ ಸೇವಕರಾರ್ತನಿನದದಿಂ ೨
ದಾದಮಂಜಿದ ಕೊಳದ ಪಕ್ಕಿಗಳವರ್ಗೆ ಸಮ
ಮಾದ ದುಃಖವನಾಂತವೆಂಬಂತೆ ಕಲಕಲವನೆಸಗುತಿರೆ ತದ್ವನದೊಳು॥
ಆದುದೆಲ್ಲರಮುಜಂಗಾಗ ತಾಂ ವ್ಯಜನಾದಿ
ಯಾದ ಸಾಧನದೊಳಾದೊಡೆ ಕಾಂತೆ ತಾಂ ಕದಲ
ದಾದಳಾಯುಃಶೇಷಮಿರೆ ಮಾಡುವಾ ಚಿಕಿತ್ಸೆಗೆ ಫಲಂ ದೊರೆವುದಲ್ತೆ॥

ಶ್ರುತಿಗೊಡುವ ತಂತಿಯರಿದಿರ್ಪ ವೀಣೆಯ ಸಮ ೨
ಸ್ಥಿತಿಯನಾಂತಾ ಗತಪ್ರಾಣಳಪ್ಪಿನಿಯಳಂ [ತಾ
ಮಿತಿಮೀರಿದಕ್ತಿಯಿಂದಜನೆತ್ತಿಕೊಂಡು ತನ್ನಯ ತೊಡೆಯೊಳಿಟ್ಟುಕೊ

ಮೃತಿಯಿಂ ವಿವರ್ಣತೆಯನಾಂತಿರ್ಪ ತನ್ನಂಕ
ಗತಳಾದ ಸತಿಯೊಡನೆ ತನ್ನೃಪತಿ ತೋರ್ದನುಡು [ಯಿಂ॥
ಪತಿಯುಷಃಕಾಲದೊಳ್ ಮಲಿನಮೃಗಲೇಖೆಯಿಂ ತಳ್ತು ಕಾಣುವಮಾಳ್ಕೆ

ತೊರೆದು ಧೈರ್ಯವನಜಂ ಸುರಿವ ಕಣ್ಣೀರ್ಗಳಿಂ ೨೨
ದುರೆ ಕಂಪಿಸುವ ಕಂಠದಿಂ ಪ್ರಲಪಿಸಿದನಗ್ನಿ
ಪರಿತಪ್ತ ಲೋಹಮುಂ ಮಿದುವಪ್ಪುದೇನೊರೆವುದಾರ್ತ್ತದೇಹಿಗಳ ಗತಿಯಂ॥
ಅರಲ್ಗಳುಂ ದೇಹಸಂಗಮದಿಂದಮುಸುವ ನಪ
ಹರಿಸಲಾರ್ತ್ತವೆನಿಪ್ಪೊಡಯ್ಯೊ! ಕೊಲುವಾವಿಧಿಗೆ
ಪರಿಕಿಸಲ್ಕಿನ್ನಾವ ವಸ್ತುವುಂ ಸಾಧನಮದಾಗದೆಂದಾತನಳಲ್ದಂ॥

ಅಂತಲ್ಲದಿರ್ದೊಡಂ ಮೃದುವಸ್ತುಗಳ ಕೊಲೆಯ ೨೩
ನಂತಕಂ ಮೃದುವಸ್ತುವಿಂ ಮಾಡುತಿರವೇಳ್ಕು [ದುಂ॥
ಮಿಂತಿದಕೆಪೂರ್ವದನಿದರ್ಶನಂ ಹಿಮದೆ ಕಮಲಿನಗಪ್ಪಮೃತಿಯದೊಂ
ತಾಂ ತಡೆಯದಸುಗಳೆವುತಿರ್ಪೊಡೀ ಮಾಲೆಯಿಂ
ನಾಂ ತಳೆಯೆ ಹೃದಯದೊಳ್ ನನ್ನ ಕೊಲದಿಹುದೇಕೆ
ಕಂತುಹರನಿಚ್ಛೆಯಿಂ ಬಿಸಮುಮರ್ಕಮುರ್ದುಮಾಂ ಬಿಸಮುಪ್ಪುಗುಂಕೆಲರ್ಗೆ॥

ಪರಿಕಿಸಲ್ಕೀ ಮಾಲೆಯೆನ್ನ ದುರ್ಭಾಗ್ಯದಿಂ ೨೪
ಸರಸಿಜಭವಂ ಗೆಯ್ದ ಪೊಸಸಿಡಿಲೆ ಅಲ್ಲದೊಡೆ [ದೆಂತು॥
ತರುವ ತಾಂ ಸುಡದೆಯೆ ತದಾಶ್ರಿತಸುಲತೆಯ ನೋಂದನೆ ನಾಶಮಾಳ್ಪ
ಪಿರಿದೆನಿಪ ತಪ್ಪನೆಸಗಿದೊಡಮೆನ್ನಂ ತಿರ
ಸ್ಕರಿಸದಿರುತಿರ್ದ ದಯಿತೆಯೆ! ನಿರಪರಾಧಿಯಾ
ಗಿರುವೀ ಜನವನೀಗ ಸವಿನುಡಿಯೊಳೇಕೆ ಮನ್ನಿಸದಿರ್ಪೆಯೆಂದಳಲ್ದಂ॥

ಇರುವನೀತಂ ಶಠಂ ಕಪಟವತ್ಸಲನುಮೆಂ ೨೫
ದರಿದು ನೀಂ ಕೇಳದೆನ್ನಂ ತ್ಯಜಿಸಿ ಭೂತಲವ
ತಿರುಗಿ ಬರದಿರ್ಪ ಪರಲೋಕಕ್ಕೆ ಪೋಗಿರ್ಪೆಯಲ್ಲವೇಂ ಚಪಲಹಾಸೆ!॥
ಕೆರಳಿಯುಂ ಪ್ರಿಯೆಯೊಡನೆ ಮುನ್ನಮೇಂ ಕಾರಣಂ
ಮರಳಿ ನೀಂ ಬಂದೆ ಹತಜೀವವೇ! ಅನುಭವಿಸು
ಸಿರವಧಿಕದುಃಖಮುಂ ನಿನ್ನಮುಶ್ಚೇಷ್ಟೆಯಿಂದಾದುದಿದನೆಂದಳಲ್ದಂ॥

ವನಜಾಕ್ಷಿ! ಭವದಾಸ್ಯದಲ್ಲಿ ಸುರತಶ್ರಮದೆ ೩೬
ಜನಿಸಿದ ಸ್ವೇದಲವಮಿನ್ನುಮಸ್ತಮಿಸದಿ
ರ್ಪಿನಮಸ್ತಮಿಸಿತು ನಿನ್ನಾತ್ಮ ಪೋದೇಹಿಗಳಸಾರತೆಗೆ ಧಿಃಕಾರವು||
ಮನದೊಳಂ ನಿನಗೆ ವಿಪ್ರಿಯಮನೆಂದುಂ ಮಾಡ
ದಿನಿಯನಂ ತ್ಯಜಿಸಿದುದದೇಕೆ ಪೇಳ್ ಕಾಂತೆ ನೀಂ [ನಾಂ||
ಗಣಿಸೆ ನಿನ್ನೊಳ್ ನಿಜಪ್ರೇಮವಿಡುತಂ ನಾಮಮಾತ್ರದಿಂ ಭುವಿಗೆ ಪತಿ

ಧರಿಸಿದ ಸುಮಂಗಳಿಂ ಮರಿದುಂಬಿ ಬಂಣದಿಂ ೩೭
ನೆರೆ ಶೋಭಿಸುವ ನಿನ್ನ ಕುಟಿಲಾಳಕಂಗಳಂ [ದರಿಂ||
ಮರುತನಲುಗಿಸುತೆ, ಕರಭೋರು! ನೀಂ ಮರಳಿ ಜೀವಿಪಶಂಕೆಯೊವನ
ಭರದಿಂದೆ ಹರಣಮಂ ಪಡೆಯುತಂ ನನ್ನ ದು
ರ್ಭರದುಃಖಮಂ ನೀಗು ಕಾಂತೆ! ನಿಶೆಯೊಳ್ ತುಹಿನ [ಗಿಂ||
ಗಿರಿಗುಹೆಯ ತಮವನಾ ಜ್ಯೋತಿರ್ಲತೆಯು ತನ್ನ ಬೆಳಗಿನಿಂ ಕಳೆವಪಾಂ

ಉಸುರದೇನೊಂದುಮಂ ಕೆದರಿದ ಕುರುಳ್ಗಳಿಂ ೩೮
ದೆಸೆವ ನಿನ್ನಾಸ್ಯಮೆನ್ನಂ ತಪಿಸುಗುಂ ದಯಿತೆ!
ನಿಶೆಯಲ್ಲಿ ನಿಶ್ಶಬ್ದಮಧುಪಂಗಳಿಂ ಕೂಡಿ ನಿದ್ರಿಪತುಳಾಬ್ಜದಂತೆ||
ಶಶಿಯ ನಿರುಳುಂ ಚಕ್ರವಾಕಮುಂ ತತ್ಪ್ರಿಯೆಯು
ಮೊಸೆದು ತಾಂ ತಿರುಗಿ ಕೂಡುವಕತದೆ ವಿರಹದಾ
ಬಿಸಿಯ ಸಹಿಸುಗು ಮೆನ್ನ ದಹಿಸದೆಂತಿರುವೆ? ಪುನರಾಗಮುನಪೂನ್ಯೆ ನೀನು|

ಪೊಸದಳಿರ ಪಾಸುವೊಳ್ ಪೊರಳೆ ಬಳಲುವ ನಿನ್ನ ೩೯
ಕುಸುಮಕೋಮಲನುಪ್ಪ ತನುವಿದೀಗಂ ಚಿತಾ [ಮಿಲ್ಲಿ|
ವಸತಿಯಂ ಪೊಂದಿ ತಾನೆಂತು ಸಹಿಪುದು? ಪೇಳು ಜಿಸಜಾಕ್ಷಿ! ಮತ್ತ
ನಸು ನೋಡು ನಿನಗೆ ಮುನ್ನಿನ ರಹಃಸಖಿಯೊಲಿಹ
ರಶನೆಯಿದು ಗತಿವಿಲಾಸಾಭಾವದಿಂದೆ ರವ [ದ್ಕುಂ|
ವೆಸಗದಳಲಿಂದೆ ತಾಂ ಮೃತಳಾದ ನಿನ್ನೊಡನೆ ಮಡಿಮುದೆಂಬಂತೆ ತೋ

ಕಲಭಾಷಣವ ಕೋಗಿಲೆಗಳಲ್ಲಿ ಮತ್ತ ಮಾ ೪೦
ಅಲಸಗಮನವ ಕಲಮರಾಳಂಗಳಲ್ಲಿ ಚಂ
ಚಲದೃಷ್ಟಿಯಂ ಮೃಗಿಗಳಲ್ಲಿ ವಿಭ್ರಮವ ಪವನಾಧೂತಲತೆಗಳಲ್ಲಿ||

ಸಲೆ ಸಗ್ಗದುತ್ಸುಕತೆಯುಳ್ಳೊಡಂ ನೀ ನೆನ್ನ
ಯಳಲನೀಕ್ಷಿಸುತಿಟ್ಟ ನಿನ್ನ ಸುಗುಣಂಗಳವು [ಮಂ||
ಸಲಿಸಲಾರವು ಭವದ್ವಿರಹದಿಂ ಗುರುದುಃಖವಾಂತೆನ್ನ ಮನಕೆ ಮುದ

ಮಿಸುಪ ಸಹಕಾರಫಲಿನೀಲತೆಗಳೆರಡರ ೩೧
ಲ್ಲೊಸೆದು ಕಲ್ಪಿಸಿದೆ ದಾಂಪತ್ಯವವುಗಳಿಗೆ ನೀ [ರಮಣಿ||
ನೆಸಗದೆ ವಿವಾಹಸತ್ಕ್ರಿಯೆಯ ಪೋದುದು ನೋೞ್ಪೊಡನುಚಿತಮಿದಲ್ತೆ
ಅಸುಗೆಯಿದು ನೀಂ ಗೆಯ್ವ ದೋಹದವನಾಂತು ತಾಂ
ಪ್ರಸವಿಸುವ ಸುಮಗಣವ ಭವದಲಕಭೂಷಣವ [ತು||
ಶಶಿಮುಖಿಯೆ! ನಿನ್ನಯ ನಿವಾಪಮಾಲಾರಚನೆಗುಪಯೋಗಿಸುವುದದೆಂ

ಅನ್ಯದುರ್ಲಭಮಪ್ಪ ರಣಿತಮಣಿನೂಪುರದ ೩೨
ನಿನ್ನಂಘ್ರಿತಾಡನದ ಸಂಸ್ಮರಣದಿಂದಮನೆ [ಡು ಮತ್ತಂ||
ಸನ್ನುತಾಂಗಿಯೆ! ಸುಮಾಶ್ರುವ ಸುರಿಸಿ, ಶೋಕಿಪುದಶೋಕಮಿದು ನೋ
ನಿನ್ನುಸಿರ್ಗಂಪ ನನುಕರಿಪ ಮುಕುಲಂಗಳಿಂ
ನನ್ನೊಡನೆ ನೀನರ್ಧಮೇಖಲೆಯ ರಚಿಸುತುಳಿ [ಳಾ||
ದಿನ್ನದಂ ಪೂರ್ಣಗೊಳಿಸದೆ ಪವಡಿಸಿದುದೇಕೆ ಕಿನ್ನರಸುಕಂಠಿ! ಪೇ

ಕೆಳದಿಯರ್ ಸಮದುಃಖಸುಖರು ಮಿೞ ತನುಜಾತ ೩೩
ನೆಳೆವೆರೆಗೆ ಸದೃಶನೆನಿಸುವ ನಚಲರಾಗಮುಂ [ಕೃತ್ಯಂ||
ತಳೆದಿರ್ಪೆ ನಾನು ಮಿಂತಿರ್ದೊಡಂ ಪ್ರಿಯೆ! ನಮ್ಮ ನಗಲ್ದಿದು ಕಠಿಣ
ಮುಳಿಗಿತೆನ್ನಯ ಧೃತಿಯು ಮಳಿದು ಪೋದುದು ರತಿಯು
ತೊಲಗಿದುದು ಗೀತಮುಂ ಋತು ನಿರುತ್ಸವಮಾಯ್ತು [ಯಿತೆ!
ಕಳೆದುದಾಭರಣಪ್ರಯೋಜನಂ ಶೂನ್ಯಮಾದುದು ಶಯನಮಿಂದು ದ

ಸುದತಿ! ಪೇೞ್ ನನಗೆ ಸತಿಯುಂ ಸಚಿವನುಂ ರಹ ೩೪
ಸ್ಯದ ಸಖನುಮಖಿಳಕಲೆಯೊಳ್ ಪ್ರೀತಶಿಷ್ಯನೆನಿ
ಸಿದ ನಿನ್ನ ನಪಹರಿಸಿದತಿನಿಷ್ಠುರದ ಮಿೞ್ತುವಿನ್ನುಳಿಸಿತೇನೆನ್ನೊಳು
ಮದಿರಾಕ್ಷಿ! ನುಡಿಯೆ ಮತ್ತಂ ಮನ್ಮುಖದಿನಿತ್ತ
ಮದಿರಮುಂ ಸ್ವಾದುತರಮುಂ ಪೀರ್ದ ನೀಂ ತರ್ಪ
ಣದ ಜಲವ ಬಾಷ್ಪದೂಷಿತವ ನಾನೀಯೆ ಪರದಲ್ಲಿನ್ನುಮೆಂತೀಂಟುವೆ?||

ಸಿರಿಯಿರ್ದೊಡಂ ನಿನ್ನ ನುಳಿದಜನ ಸುಖಮಿಂದಿ ೩೫
ಗಿರ ದಂತಮಾಯ್ತೆಂದು ತಿಳಿ ನೀಂ ವಿಲೋಭನಾಂ
ತರದ ಸೆಳತಕೆ ಸಿಲ್ಕದನ್ನಖಿಳಭೋಗಂ ತ್ವದಾಶ್ರಯಮುದಲ್ತೆ ತನ್ವಿ!॥
ಪರಿಪರಿಯೊಳಿಂತು ಶೋಕಾರ್ಥಸಂಕಲಿತ ನಾ
ಗುರೆ ಕೋಸಲಾಧಿಪಂ ಪ್ರಿಯೆಗಾಗಿ ವಿಲಪಿಸುತೆ
ತರುಗಳಂ ಶಾಖಾಳಿಯಿಂದೆ ಮಕರಂದಬಾಷ್ಪವ ಸುರಿಸುವಂತೆಸಗಿದಂ॥

ಬಳಿಕ ಮೆನಿತೋ ಕಷ್ಟದಿಂ ಬಂಧುವರ್ಗ ಮಾ ೩೬
ಲಲನೆಯಂ ದಿವ್ಯಕುಸುಮಾಂತಮಂಡನೆಯ ನಾ [ವಿನಂ॥
ನೆಲದೆರೆಯನಂಕದಿಂ ತೆಗೆದೊಯ್ದು ತಗರುಚಂದನಯುತಾಗ್ನಿಯೊಳಿಡು
ತಿಳಿದಾತನಾದೊಡಂ ದೊರೆ ಕಾಂತೆಗಾಗಿ ತಾ
ನಳಿದನೆಂಬಪವಾದ ಕಂಜುತಜನೊಡಲನಾ
ಜಲಜಾಕ್ಷಿಯೊಡನೆ ಬೆಂಕಿಗೆ ಬಿಸುಟದಿರ್ದನಲ್ಲದೆ ಜೀವದಾಶೆಗಲ್ಲಂ॥

ಗುಣಶೇಷಳಾ ದಿಂದುಮತಿ ಗಾಗ ಶಾಸ್ತ್ರಾರ್ಥ ೩೭
ದನುಭವಿಯು ತಾಂ ಪತ್ತುದಿನದ ಸಮನಂತರದೊ
ಳೆನಿತೋ ಸಮೃದ್ಧಿಯಿಂ ನಗರೋಪವನದೊಳೇ ವಿಧಿಗಳೆಲ್ಲವ ನೆಗಳ್ದ॥
ಇನಿಯಳಂ ಬಿಟ್ಟಿರುಳ್ಗಳೆದ ಸಸಿಯೊಲ್ ತೋರ್ಪ
ಜನಪಸನಾತಂ ಪೊಳಲ ಪೊಕ್ಕ ನಾ ಪುರವಧೂ
ಜನವದನಬಾಷ್ಪಜಲದೊಳ್ ತನ್ನ ಶೋಕರಸ ದಧಿಕಪೂರವ ಕಾಣುತಂ॥

ತರುವಾಯದೊಳ್ ಯಜ್ಞದೀಕ್ಷೆಯಿಂದಾಶ್ರಮದೊ ೩೮
ಳಿರುವಾ ವಸಿಷ್ಠ ನಜದುಃಖಮಂ ಧ್ಯಾನದಿಂ
ದರಿದದಂ ಕಳೆಯ ಲಟ್ಟಿದ ತದಂತೇವಾಸಿ ಬಂದು ದೊರೆಗಿಂತೆಂದನು॥
ಅರಸ ಕೇಳ್ ನಿನ್ನ ತಾಪದ ಕಾರಣವ ನೈದೆ
ಗುರುವರಂ ತಿಳಿದಿರ್ದೊಡಂ ಯಾಗವಿಧಿ ಮುಗಿಯ
ದಿರುವ ಕತದಿಂ ನಿನ್ನಯಳಲನಾರಿಸಲಾತನಾಗಮಿಸಲಿಲ್ಲ ತಾನೇ

ಮುನಿಯ ಸಿಂಕ್ಷಿಪ್ತಸಂದೇಶಾರ್ಥಬೋಧಕವ ೩೯
ಚನ ಮೆನ್ನೊಳಿರ್ಪುದದ ಕೇಳುತಂ ಬಿಡದಂತೆ
ಮನದಲ್ಲಿ ನಿಲಿಸಲರ್ಹಂ ಸದಾಚಾರ ವಿಶ್ರುತಸತ್ವಸಾರ! ನೀನು॥

ಜನಿರಹಿತವಾಮನನ ಮೂರಡಿಯ ತಾಣದೊಳ
ಮೆಣಿಸೆ ತಾಂ ಗತವರ್ತಮಾನಭಾವಿಗಳವೆಂ
ದೆನಿಪ ಮೂರಂ ನಿರರ್ಗಳದಿವ್ಯದೃಷ್ಟಿಯಿಂದಾ ಋಷಿಯು ತಿಳಿವನಲ್ತೇಂ||

ತೃಣಬಿಂದುನಾಮಕಂ ಋಷಿ ಮುನ್ನಮೆಸಗುತಿಹ ೪೦
ಘನತಪಕ್ಕಂಜಿ ಸುರಪಂ ತತ್ಸಮಾಧಿ ಭೇ
ದಿನಿಯಪ್ಪ ಹರಿಣಿಯೆಂಬಮರಾಂಗನೆಯ ನಟ್ಟಿದಂ ತದ್ಯತೀಂದ್ರನೆಡೆಗೆ||
ಮುನಿಪ ನಾತಂ ಶಾಂತಿ ತೀರದ ಪ್ರಲಯೋರ್ಮಿ
ಯೆನಿಪಾ ತಪೋವಿಘ್ನಜನಿತಕೋಪದೆ ಮನುಜ [ಗೆ||
ತನುವ ಧರಿಸೆಂದು ಶಪಿಸಿದ ನಗ್ರದೊಳ್ ವಿಭ್ರಮವ ತೋರ್ಪ ತದ್ವನಿತೆ

ಪರಿಪೂಜ್ಯನೇ! ಪರಾಧೀನತೆಯೊಳಾಂ ಗೆಯ್ದ ೪೧
ಪರಮಾಪರಾಧಮಂ ಕ್ಷಮಿಸೆಂದು ಮರೆವೊಕ್ಕ
ಹರಿಣಿಯಂ ದಿವಿಜಸುಮದರ್ಶನಾವಧಿ ಮಾನುಷಿಯ ನೆಸಗೆ ತನ್ಮುನಿಪರಂ||
ಸುರವನಿತೆಯಾಕೆ ತತ್ಕ್ರಥಕೈಸಿಕಾನ್ವಯದೊ
ಳುರೆ ಜನಿಸಿ ನಿನಗೆ ಪಟ್ಟದ ರಾಣಿಯಾಗಿ ತಾಂ
ಚಿರಕಾಲಮಿರ್ದು ಮಡಿದಳ್ ದಿವಚ್ಯುತವ ಶಾಪಾಂತಕಾರಣವನಾಂತು||

ಅರಸ ನೀನದರಿಂದೆ ತದಪಾಯ ಚಿಂತೆಯಂ ೪೨
ಮರೆವುದೈ ಜನಿಗೆ ಮರಣಂ ಸಿದ್ಧಮಲ್ತೆ ಪೇಳ್ [ತ್ತಂ||
ಧರಣಿಯೇ ನೃಪಕುಲದ ರಮಣಿಯಪ್ಪುದರಿಂದೆ ಧರೆಯ ಪಾಲಿಸುತೆ ಸು
ನಿರುಪಮಾಭ್ಯುದಯದೊಳ್ ಮದಗುಣದ ನಿಂದೆಯೋ
ಬರದಂತದಾವ ಸುವಿವೇಕದಿಂ ಮೆರೆದೆಯೋ
ವರಧೈರ್ಯದಿಂದಡಂ ತೋರಿಸೈ ನೀನೀಗ ಮನಕಾವ ತಾಪವಲ್ಲಿ||

ನರಪ! ನೀನೆನಿತು ಡೋದಿಸೆ ಬಾರಳವಳ ಪಿಂ ೪೩
ತಿರದೆ ಮೃತಿಯಾಂತೊಡಂ ನಿನಗಾಕೆ ದೊರೆಯಳೈ
ಪರಲೋಕಗತದೇಹಿಗಳ್ ಸ್ವಕರ್ಮಾನುಗುಣಗತಿಗಳಂ ಪಡೆವರಲ್ತೆ||
ತೊರೆದು ಶೋಕವ ನಿತ್ತು ಪಿಂಡೋದಕಾದಿಗಳ
ನರಸಿಯಂ ನೀನನುಗ್ರಹಿಸು ಮೃತಜೀವಿಯಂ
ನಿರುತಮುಂ ಬಂಧುಜನದಶ್ರು ಪರದಲ್ಲಿ ದಹಿಸುಗುಮೆಂಬರವನೀಶ್ವರ!

ಮರಣಮೇ ಪ್ರಕೃತಿ ತಾಂ ಜೀವಿತಮೆ ವಿಕೃತಿಯೆಂ ೪೪
ದೊರೆವರೀದೇಹಿಗಳಿಗರಿದಜನಮದರಿಂದೆ [ಮಲ್ತೇಂ॥
ಧರೆಯೊಳೊಂದೇ ಕ್ಷಣಮದಾಡೊಡಂ ಜೀವಿಪುದು ಜಂತುಗದು ಲಾಭ
ಪರಿಕಿಸಲ್ಕಿಷ್ಟವಸ್ತುವಿನಾಶಮಂ ಮೂಢ
ಪುರುಷನರಿವಂ ಬಗೆಗೆ ನಟ್ಟಲಗದೆಂದು ಬುಧ
ನರಿವನದನೇ ಮೋಕ್ಷಪಥಕೆಪೋಪುದಕೆ ಮನದಿಂ ಕಿಳ್ತ ಶಲ್ಯಮೆಂದು॥

ನರನಾಥ ಕೇಳ್ ಸ್ವದೇಹಾತ್ಮಂಗಳೇ ಕೂಡಿ ೪೫
ಮರಳಿ ತಾವಗಲಿಕೆಯ ಪಡೆವವೆಂಬೊಡೆ ಬುಧಂ
ಮರುಗುವನೆ! ಬಾಹ್ಯವಿಷಯಂಗಳೆನಿಪೀ ಕಳತ್ರಾದಿಗಳ ವಿರಹದಿಂದಂ॥
ಕರಣವಿಜಯದೊಳಧಿಕನೆನಿಪ ನೀ ನಿಂತಿ ತರ
ಪುರುಷರೊಲ್ ದುಃಖವಶನಾಗುವುದು ತಕ್ಕುದೇಂ
ತರುಗಿರಿಗಳೆರಡುಮೆಲರಿಂ ಚಲಿಸೆ ಭೇದಮೇಂ ತೋರ್ಕುಮಾ ಎರಡರಲ್ಲಿ॥

ಮುನಿವದನ ದಿಂದಿಂತುದಾರ ಗುರು ಸಂದೇಶ ೪೬
ವನಿತುಮಂ ಕೇಳು ತವನಂ ಕಳುಪಿದಾ ನೃಪನ [ಲಾಯ್ತು॥
ಘನಶೋಕಮನದೊಳಾ ನುಡಿಯಿರದೆ ಗುರುವಿನೆಡೆಯಂ ಮರಳಿ ಸೇರ್ದ್ದೊ
ತನುಜಂಗೆ ಬಾಲ್ಯಮಿರ್ಪುದರಿಂದೆ ಸೂನೃತವ
ಚನನಜಂ ಪ್ರಿಯೆಯ ಚಿತ್ರಾದಿದರ್ಶನದೊಳಂ
ಕನಸಿನೊಳ್ ಕ್ಷಣಿಕತತ್ಸಂಗದೊಳಮೆನಿತೊಕಷ್ಟದೆ ಕಳೆವನಷ್ಟಾಬ್ದಮಂ॥

ನೆರೆ ಸೌಧಮಂ ಪ್ಲಕ್ಷದಪ್ರರೋಹಂ ಕೀಳ್ವ ೪೭
ತೆರದೆ ನಿಜಶೋಕಶಲ್ಯಂ ಮನವ ಸೀಳಿ ವೈ [ಜನೃಪಂ॥
ದ್ಯರಿಗಸಾಧ್ಯಮದಾಗೆ ಮೃತಿಯಾಂತು ಸತಿಯ ಸೇರುವುದೆ ವರಮೆಂದ
ಪರಮವಿನಯಾನ್ವಿತಸುತಂ ಕವಚಮಂ ಧರಿಪ
ಹರೆಯಮಂ ಪೊಂದೆ ರಾಜ್ಯನಸಾಗಮೋಕ್ತಿಯಿಂ
ದಿರಿಸುತವನೊಳ್ ಭೋಗಮುಕ್ತಿಯಂ ಬಯಸಿ ತಾನನಶನವ್ರತಿಯಾದನು

ಗಂಗಾತರಂಗಿಣೀ ಸರಯೂ ನದೀ ಯುಗದ ೪೮
ಸಂಗಮಸ್ಥಾನದ ಸುತೀರ್ಥದೊಳ್ ನೃಪತಿ ತ [ಗಂ॥
ನ್ನಂಗಮಂ ತ್ಯಜಿಸಿ ತತ್ಕ್ಷಣದೊಳೇ ದೇವತಾಭಾವಮಂ ಪೊಂದುತಾ

ಕಂಗೊಳಿಪ ಸುರಪ ನುದ್ಯಾನಗತ ಲೀಲಾಗ್ರ
ಹಂಗಳೊಳ್ ಮುನ್ನಿನಿದ ಧಿಕತರ ಕಾಂತಿಯಿಂ [ದೊಳು॥
ಸಂಗತೆಯೆನಿಪ್ಪ ಕಾಂತೆಯ ಕೂಡಿ ಮರಳಿ ರಮಿಸುತ್ತಿರ್ದನತಿಮುದ

# ನವಮಸರ್ಗಂ.

ಸೂ:—ವಸುಧೇಂದ್ರನಜನ ಸಮನಂತರಂ ತತ್ಸುತಂ
ದಶರಥಂ ಧರೆಯನುರೆ ಪಾಲಿಸುತಮೊಂದುದಿನ [ದನು॥
ಮೊಸೆದು ಬೇಂಟೆಗೆ ಪೋಗಿ ಮುನಿಶಾಪಮಂ ಪೊಂದಿ ಚಿಂತೆಯಿಂದೈತಂ

ಜಿತಕರಣನುಂ ಮಹಾರಥನಾದ ದಶರಥಂ ೧
ಯತಿಗಳೊಳ್ ವಸುಧಾಧಿಪತಿಗಳೊಳ ಮಗ್ರೇಸ
ರತೆಯಾಂತು ಪಿತನನಂತರ ಮಾಳುತಿರ್ದನುತ್ತರಕೋಸಲಪ್ರಾಂತಮಂ॥
ಕ್ಷಿತಿಧನಂ ಕೌಂಚದಾರಣತೇಜನಾತ ನು
ನ್ನುತಧರ್ಮದಿಂದೆ ಪರಿಪಾಲಿಪುದರಿಂ ಕುಲಾ
ಗತಮಪ್ಪ ತದ್ರಾಜಧಾನಿಯುಂ ರಾಷ್ಟ್ರಮುಂ ಶ್ರೇಷ್ಟಸುಖವಾಂತೆಸೆದವು॥

ಬಲರಿಪುವುಮರ್ಥಪತಿಯಾದ ಮನುರಾಜಸ ೨
ತ್ಕುಲವ ದಶರಥನುಮೆಂಬುಭಯರೇ ಸಮಯದೊಳ್ [ದು॥
ಜಲಧನಂಗಳ ಮಳೆಯ ಸುರಿದು ಕೃತಕರ್ಮಜನದ ಶ್ರಮವ ಕಳೆವರೆಂ
ತಿಳಿದವರ್ ಪೊಗಳೆ, ಮತ್ತಂ ಪ್ರಜೆಗಳೊಳ್ ರುಜೆಗೆ
ನೆಲೆಯಿಲ್ಲದಾಯ್ತು ಫಲಿಸಿತು ಭೂಮಿ ರಿಪುಬಾಧೆ [ನಾ॥
ಗಳ ಸುದ್ದಿ ಸುಳಿಯದದು ರಾಜ್ಯದೊಳ್ ಶಾಂತಸುರತೇಜನಾ ಅಜತನುಜ

ಕ್ಷಮೆಯೆಂಬ ವನಿತೆ ದಶದಿಶೆಗಳಂ ಗೆಲ್ದ ರಘು ೩
ರಮಣನಿಂ ತದನಂತರಂ ಮತ್ತಮಜನಿನೆಂ
ತಮಿತ ವಿಕ್ರಮ ದಶರಥಪ್ರಿಯನಿನಂತೆಯೇ ಮಿಗೆ ಶೋಭೆಯಾಂತಿರ್ದಿನಂ॥
ಸಮತೆಯಿಂ ಧನವೃಷ್ಟಿಯಿಂ ದುಷ್ಟನಿಗ್ರಹ
ಕ್ರಮದೊಳಂ ಕಾಂತಿಯಿಂದಂ ಯಥಾಕ್ರಮದೊಳಾ
ಯಮನಂ ಕುಬೇರನಂ ವರುಣನಂ ರವಿಯ ನನುಕರಿಸಿದಂ ತನ್ಮಹೀತಂ॥

ನಿರುತ ಮಭ್ಯುದಯ ಕುಜ್ಜುಗಿಪ ದಶರಥ ಮಹೀ ೪
ಶ್ವರನ ಮನಮಂ ಸೆಳೆಯಲಾರ್ತುದಿಲ್ಲಂ ಬೇಂಟೆ [ಮತ್ತಂ॥
ಯೆರಕಮುಂ ಜೂದು ಶಶಿಸದೃಶಮಧು ಪೊಸಜೌವನನವನಾಂತಕಾಂತೆ
ಸುರಪಸಂಮುಖದೊಳಂ ದೀನಭಾವಂ ಪೇಳ್ವ
ಪರಿಹಾಸಕಥೆಗಳೊಳ ಮನೃತ ಮರಿಕುಲದೊಳಂ
ಪರುಷಾಕ್ಷರಂ ಸೋಂಕದಿರ್ದುದೆಂದುಂ ವಚನಭಣಿತಿಯಂ ತಜ್ಜನಪನಾ॥

ವಸುಧೇಶರುದಯಾಸ್ತ ಮಯಯುಗಂ ದಶರಥನ ೫
ವಶವರ್ತಿಯೆನಿಪುದಾತಂ ತನ್ನಬೆಸನಮಂ [ಸಲ್ತೀ॥
ನಸುಮೀರದವರೊಳ್ ಸುಹೃದಯನುಂ ಪ್ರತಿಗರ್ಜಿಪರೊಳಯೋಹೃದಯ
ಮಿಸುಪೇಕರಥದೊಳಾ ನೃಪವರಂ ಪೆದೆಯನೇ
ರಿಸಿದ ಬಿಲ್ಲಿಂ ಜಲಧಿವೇಷ್ಟಿತಕ್ಷಿತಿಯ ಗೆ
ಲ್ದಿಸೆವನಾತನ ಗಜಾಶ್ವಾನ್ವಿತಬಲಕ್ಕೆ ತಜ್ಜಯವ ಘೋಷಿಪುದೆ ಕಜ್ಜಂ॥

ವರಗುಪ್ತಿಯುತಮೆನಿಸು ವೇಕರಥದಿಂದೆ ತಾಂ ೬
ಧರೆಯೆಲ್ಲಮಂ ಗೆಲ್ದು ನರವಾಹನಂಗೆಣೆಯ
ಸಿರಿಯನಾಂತಾ ಧನುರ್ಧರನ ಜಯಭೇರಿಗಳೆ ಘೋಷಿಪಂಬುಧಿಗಳಾಗೆ॥
ಹರಿಯು ಶತಕೋಟಿಯಿಂ ಗಿರಿಪಕ್ಷಬಲವ ಸಂ
ಹರಿಸಿದಂ ನವಸರಸಿಜಾಸ್ಯ ತನ್ನೃಪತಿಯುಂ
ಸರಳಮಳೆಗರೆವ ಟಂಕಾರಯುತ ಚಾಪದಿಂದರಿಪಕ್ಷಬಲವನಿರಿದಂ॥

ಸುರಪಂಗೆ ದಿವಿಜರುರೆ ನಮಿಪಂತೆ ನೂರಾರು ೭
ಧರಣಿಪ ರಖಂಡಪೌರುಷದಶರಥನ ಪಾದ
ಕೆರಗಿದರ್ ತಮ್ಮಯ ಕಿರೀಟಮಣಿರುಚಿ ಪೆರ್ಚೆ ತನ್ನಖಾಂಶುಗಳಿನಾಗಂ॥
ಅರಿಸತಿಗ ಳಲಕರಂಜನಶೂನ್ಯರಾಗಿ ಸಚಿ
ವರ ಬೋಧನದೆ ಮಕ್ಕಳೊಡನೆ ಮರೆವುಗೆ ರಘುಜ
ವರನವರ ಕರುಣಿಸುತಮಬ್ಧಿತಟದಿಂ ಮರಳ್ದನಲಕೋಪಮದ ನಗರಿಗೆ॥

ಧರಿಸಿಯು ಮನನ್ಯದುರ್ಲಭಮಪ್ಪ ಬೆಳ್ಗೊಡೆಯ ೮
ಸಿರೆಯುಮೀರಾರು ಮಂಡಲದೊಡೆತನಂ ಮಹೀ [ಥಂ॥
ಶ್ವರಧರ್ಮಮಜಿತಮೆಂದರಿಯು ತನಲಸನಾಗೆ ಸೋಮಾಗ್ನಿರುಚಿ ದಶರ

ಎರೆದವರ್ಗಿಲ್ಲೆನದ ತತ್ಕಕುಸ್ಥಾನ್ವಯದ
ದೊರೆಯಂ ಸ್ವಯಂಭುವೆನಿಪಾ ಹರಿಯುಮಂ ಪೊಂದಿ
ಪರನೃಪನ ಸೇವೆಯಂ ತೊರೆದಳಾ ಭಾಗ್ಯದೇವತೆ ಪತಿವ್ರತೆಯಾಗ ತಾಂ||

ಗಿರಿಜನಿತ ನದಿಗಳಂಬುಧಿಪತಿಯ ನಾಂತಂತೆ ೯
ಶರಜಿತಾರಾತಿ ದಶರಥನೆಂಬ ಧವನ ನಾಂ
ತರು ಪತಿವ್ರತೆಯರಾ ಮಗಧಕೋಸಲಕೇಕಯಾಧಿಪರ ಸುತೆಯರಾಗಂ||
ಅರಿವಿಜಯ ಸದುಪಾಯ ನಾದಾ ರಘೂದ್ವಹಂ
ನೆರೆ ಮೂರ್ವರಾ ಅರಸಿಯರ ಕೂಡಿ ಬೆಳಗಿದಂ
ಧರೆಯ ರಕ್ಷಣೆಗೆಳಸಿ ಶಕ್ತಿತ್ರಯಂಗಳೊಡನವತರಿಸಿ ದಿಂದ್ರನಂತೆ||

ರಣರಂಗದೊಳ್ ಸುರೇಂದ್ರಂಗೆ ನೆರವಾಗಿ ಮಾ ೧೦
ರ್ಗಣದಿಂದ ಮಮರವಧುಗಳ ಭಯವ ನೀಗಿ ತ [ಘಂ||
ದ್ವನಿತೆಯರಿ ನುರೆ ಪಾಡಿಸಿದ ನಾತ್ಮಭುಜದ ಜಸಮಂ ಮಹಾರಥದಶರ
ಗಣಿಸೆ ಮತ್ತಂ ತಮೋರಹಿತನಾತಂ ಯಜ್ಞ
ಗಣದಲ್ಲಿ ಮಕುಟಮಂ ಬಿಟ್ಟು, ಜಯದೊಳ್ ಪಡೆದ [ಮಂ||
ಧನದೆ ತಮಸಾಸರಯುಗಳ ತಡಿಗಳೊಳ್ ನಟ್ಟನು ಹೇಮಯೂಪಚಯ

ಮೃಗಚರ್ಮಶೃಂಗಂಗಳಂ ದಂಡಕುಶಮೇಖ ೧೧
ಲೆಗಳುಮಂ ಧರಿಸಿ ಮೌನದೆ ಯಜ್ಞದೀಕ್ಷೆಯಿಂ [ನೀಶಂ||
ಸೊಗಸು ಮಿಗೆ ಮಂಡಿಸಿದ ದಶರಥನ ತನುಗಮಿತ ಭಾಸಮಂ ಕುಡುವ
ಬಗೆಯೆ ಮತ್ತವಭೃತಾಮಲಜಿತೇಂದ್ರಿಯನು ಮನು
ರಗಣಸಭೆಯಂ ಪುಗಲ್ಕರ್ಹನೆನಿಪಾ ನೃಪಂ
ಮಿಗೆ ಜಲವನೀವ ಬಲಸೂದನಂಗಲ್ಲದನ್ಯರ್ಗೆ ಶಿರಮಂ ಬಾಗಿಸಂ||

ಎನಿತೊ ಸೂಳೇಕರಥಸುಂ ಧನುರ್ಧರನುಮೆನಿ ೧೨
ಪನಘಗುಣದಶರಥಂ ಸುರಪಂಗೆ ಮುಂದಿರುತ
ಮಿನನಿದಿರೊಳೆಳ್ದ ರಣಧೂಳಿಯಂ ದನುಜರುಧಿರದೆ ನಿವಾರಿಸುತಿರ್ಪನು||
ಮನುಜೇಂದ್ರನಾತನಿಂತಿರುತಿರೆ ಬಳಿಕ್ಕಮಾ
ವಿನುತವಿಕ್ರಮ ಯಮಕುಬೇರವರುಣೇಂದ್ರನಿಭ
ಘನಭಾರನಂ ಸೇವಿಸಲ್ಕೆನೆ ಬಸಂತನಾಗಮಿಸಿದಂ ಕುಸುಮಾನ್ವಿತಂ||

ಆ ವಿಭಾವಸು ಧನಪದಿಶೆಗೆ ಗಮಿಸಲ್ಕೆಳಸಿ ೧೩
ತೀವಿರ್ದ ಹಿಮವನೋಡಿಸಿ ದಿನಮುಖಕೆ ವಿಶದ
ಭಾವವಿತ್ತರುಣನಿಂ ಮರಳಿಸುತೆ ವಾಜಿಗಳ ಮಲಯಾದ್ರಿಯಂ ತ್ಯಜಿಸಿರೆ||
ಪೂವಾಗೆ, ಪಲ್ಲವಿಸೆ, ಮತ್ತಮಳಿಕೋಕಿಲಾ
ರಾವಮಾವಿರ್ಭವಿಸೆ, ಪರಿವಿಡಿಯಸಾಂತಿಂತು
ಟಾ ವಸಂತಂ ತರುವಿರಾಜಿತವಸಾಳಿಗೈತರುತೆ ತಾಂ ಮೈದೋರಿದಂ||

ದಶರಥನ ಸದುಪಕೃತಿಫಲದ ನಯಗುಣದೊಳಾ ೧೪
ರ್ಜಿಸಿದ ಸಿರಿಗರ್ಥಿಗಳ್ ಮುತ್ತುವೊಲ್ ತಿಳಿಗೊಳದ [ತ್ತಂ||
ಬಿಸಿನಿಯಂ ಮಧುಪೋಷಿತೆಯನ್ನೈದೆ ಮಧುಪಜಲಪಕ್ಷಿಗಳ್ ಮುತ್ತೆ ಮು
ಅಸುಗೆಯಲ್ಲೊಗೆದ ಪೊಸಪೂಪಲ್ಲದೆಯೆ ಕಾಂತ
ವಿಸರಕುನ್ಮದವೀವ ದಯಿತಾಜನಶ್ರುತಿವಿ
ಲಸಿತಕಿಸಲಯಪಾಳಿಯುಂ ಸ್ಮರೋದ್ದೀಪನಮದಾಯ್ತು ತತ್ಸಮಯದಲ್ಲಿ||

ವನಲಕ್ಷ್ಮಿಯಂಗದೊಳ್ ಮಾಧವಂ ಗೆಯ್ದ ನೂ ೧೫
ತನಪತ್ರರಚನದಂತಿರ್ಪ ಕುರವಕವೃಕ್ಷ [ಯೊಳು||
ಗಣಮಳಿಯ ನುಣ್ಚರದ ನುತಿಗೆ ಪಾತ್ರಮದಾಯ್ತು ಮಧುಪಾನಶೌಂಡತೆ
ವನಿತಾಮುಖಾಸವದೆ ಜನಿಸಿ ತತ್ಸದೃಶಗುಣಿ
ಯೆನಿಸೆ ಬಕುಲಪ್ರಸೂನವ್ರಜಂ ತನ್ಮಧುಗೆ
ಮನವಿಟ್ಟು ಮಧುಪಾಳಿ ಸಾಲಾಗಿ ನಡೆತರುತ್ತಲ್ಲಿ ತುಂಬಿದುದು ಮತ್ತಂ||

ಪ್ರಮದೆ ಮಿಗೆ ಮದಿಸಿ ನಾಣಂ ತ್ಯಜಿಸುತೆಸಗಿರ್ದ ೧೬
ರಮಣನಂಗದ ನಖಕ್ಷತಮಂಡನಂಬೊಲತಿ [ಕುಳವ್ರಜಂ||
ರಮಣೀಯಮಾಯ್ತು ಮಧುರಮೆ ಯೊಷರ್ಚಿಪ ಪಲಾಶೋರ್ವೀಜಮು
ರಮಣೀಜನಾಧರಪ್ರಣಕೆ ದುಸ್ಸಹಮೆನಿಸಿ,
ಕಮನೀಯರಶನೆಯಂ ಜಘನದಿಂ ನೂಂಕಿದಾ
ಹಿಮವನೆಲ್ಲವ ಕಳೆಯದಿರ್ದೊಡಂ ತದ್ವಿರಳತೆಯ ಗೆಯ್ದನಾಗ ಸೂರ್ಯಂ

ಮಲಯ ಮಾರುತನಿಂದೆ ಚಲಿಸೆ ತನ್ನೆಳೆವಳಿರ್ ೧೭
ಕಲಿಕಯುತ ಚೂತಲತೆ ಯಭಿನಯವ ಕಲಿಯುವೊಲ್ [ಮತ್ತಂ||
ತೊಳಗುತಂ ಕಲಿಕಾಮುಪಿರಹಿತರ ಹೃದಯಕಂ ಮದವನೀಯುವುದು

ತಳೆದು ಪರಿಮಳವ ಕುಸುಮಿತಮಾದ ವನರಾಜಿ
ಯೊಳಗೆ ಕೋಗಿಲೆಗಳಾರಂಭದೊಳ್ ಮಾಳ್ಪ ಮಿತ
ಕಲರವಂ ಸಲೆ ಕೇಳಬರ್ಕುಮಾ ಮುಗ್ಧವಧುಗಳ ವಿರಳವಚನದಂತೆ॥

ಅಳಿರವಂ ಶ್ರುತಿಸುಖದ ಸಂಗೀತಮಾಗೆ ಪೂ ೧೮
ಗಳ ಕಾಂತಿ ದಂತರುಚಿಯೆನಿಸೆ ಗಾಳಿಗೆ ಚಲಿಪ
ತಳಿರೊಳುಪವನದ ಲತೆಗಳ್ ಹಸ್ತದಿಂದಮುಭಿನಯಿಪಚೆಲ್ವಾಂತೆಸೆವಿನಂ॥
ಲಲಿತವಿಭ್ರಮವ ನೊದಗಿಸುವ ಮತ್ತಂ ಬಕುಳ
ದೆಲರ ನಿಂದಿಸುವ ಗಂಧದ ಮದಿರಮಂ ಸ್ಮರನ
ಕೆಳಯನೆನಿಪುದನಲ್ಲಿ ಕಾಂತರೊಡನೀಂಟುಗುಂ ಕಾಮಿನಿಯರತಿರಾಗದಿಂ॥

ನಗುವ ತಾವರೆಗಳಿಂ ಮದಕಲೋದಕಲೋಲ ೧೯
ಖಗನಿವಹದಿಂದಮುಂ ಬೆಳಗಿದವು ಗೃಹದೀರ್ಘ [ದೊಳು
ಕೆಗಳ್ಕಿದೆ ನಗೆಮೊಗದ ಮೆಲ್ಲುಲಿಯ ಗೆಯ್ವ ಮೇಖಲೆಯಬಲೆಯರ ತೆರ
ಬಗೆಯೆ ಮಧುಖಂಡಿತೆಯೆನಿಪ್ಪ ರಜನೀವನಿತೆ
ಮೃಗಧರೋದಯದೆ ಮುಖದೊಳ್ ಬೆಳ್ಪಡರ್ದು ತನು
ತೆಗೆ ತನುವನಿತ್ತ ಳಾತ್ಮಪ್ರಿಯನ ಸಂಗಸುಖರಹಿತಾಂಗನೆಯೊಲಾಗ ತಾಂ

ಹಿಮವಳಿಯೆ ವಿಶದಕಾಂತಿಯನಾಂತು ಸುರತಸಂ ೨೦
ಗಮುಪರಿಶ್ರಮುವನೋಡಿಸುವ ಕಿರಣಂಗಳಿಂ
ಹಿಮಕರಂ ಮಕರಕೇತನವ ನಿಲಿಸಲ್ಕೆ ಮದನಂಗಿತ್ತ ನುತ್ಸಾಹಮಂ॥
ಅಮಿತಹುತವಹ್ನಿದೀಪ್ತಿಯನುಳ್ಳುದಾಗಿ ವನ
ರಮೆಯ ಪೊಂದೊಡಿಗೆಯಂತಿಹ ಕರ್ಣಿಕಾರನವ [ಲೆಯರದಂ॥
ಸುಮವ ಮೃದುದಲಕೇಸರವ ಕಾಂತರೀಯೆ ಮುಡಿಯೊಳ್ ಮುಡಿವರಬ

ಕುಸುಮಪಂಕ್ತಿಯೊಳೆರಗುತಿರ್ಪ ಕಜ್ಜಲಕಣವಿ ೨೧
ಲಸಿತಮಧುಪಾಳಿಯಿಂ ತಳ್ತ ತಿಲಕಂ ಚೆಲ್ವ
ನೆಸಗಿತುಪವನರಮೆಗೆ, ತಿಲಕಮಬಲಾಜನಕೆ ಚೆಲ್ವನಿತ್ತಂತೆ ಮತ್ತಂ॥
ಕಿಸಲಯಾಧರದಿಂದೆ ಮಧುಗಂಧದಿಂದೆ ಸುಮ
ವಿಶದಹಾಸಮರೀಚಿಯಿಂದಮುಂ ಕೂಡಿ ಮದ
ವಶವರ್ತಿಯಂ ಗೆಯ್ದುದೀಕ್ಷಿಪರ ಮನವ ತರುಸಂಸಕ್ತನವಮಲ್ಲಿಕೆ॥

ಅರುಣರುಚಿಯುಂ ತಿರಸ್ಕರಿಪಂಬರಂಗಳುಂ ೨೨
ನೆರೆ ಕಿವಿಗೆ ಧರಿಸಿದ ಯವಾಂಕುರಂಗಳುಮತುಳ
ಪರಭೃತರವಂಗಳೆಂಬೀ ಸ್ಮರಬಲಂ ಪ್ರಿಯಾವಶರನಾಗಿಸಿತು ಧವರಂ॥
ಪರಿಕಿಪೊಡೆ ಮತ್ತೆ ಸಿತರೇಣುಪೂರ್ಣಾವಯವ
ಪರಿಲಸತ್ತಿಲಕಸುಮುಮಂಜರಿಯು ತುಂಬಿಗಳಿ [ತುಬು॥
ನುರೆ ಕೂಡಿ, ಕಾಮಿನಿಯ ರಲಕಜಾಲಕಮೌಕ್ತಿಕಾಂಶುಶೋಭೆಯನಾಂ

ವಿಲಸಿತ ಧನುರ್ಧರ ಮನೋಜನ ಪತಾಕೆಯುಂ ೨೩
ಲಲಿತಮಧುರಮೆಯ ಮುಖಕಾಂತಿಕರ ಚೂರ್ಣಮೆನಿ [ಹಂ॥
ಪಲಘುವನಸುಮರಜವ ನನಿಲೋದ್ಧತವನಂಟಿ ಚರಿಸುಗುಂಭೃಂಗನಿವ
ಲಲನಾಜನಂ ವಸಂತೋತ್ಸವದೊಳಾಡುತು
ಯ್ಯಲೆಯನದರೊಳ್ ಜಾಣ್ಮೆಯಿದೊ ಡಂ ಪ್ರಿಯತಮರ
ಗಳದ ಪರಿರಂಭಣಕ್ಕೆಳಸಿ ಕೈಗಳ ಸಡಿಲ್ಚಿಪುದು ಪೀಠದ ರಜ್ಜುವಿಂ॥

ಸಂತಸಂಬಡು ಮುಳಿಸ ಬಿಡು ಕೆಣಕದಿರು ಚಾರು ೨೪
ಕುಂತಳೆಯೆ! ಗತಯೌವನಂ ಮರಳಿ ಸಿಗದೆಂದು
ಕಂತುಮತಮಂ ಕೋಗಿಲೆಗಳೊರೆದವೆಂಬಂತೆ ರಮಿಸಿತಬಲಾಸಮಾಜಂ॥
ಇಂತೆಸೆವ ತದ್ವಸಂತೋತ್ಸವದ ಸುಖವ ಭೂ
ಕಾಂತದಶರಥ ನರಸಿಯರ್ವೆರಸಿ ಭೋಗಿಸುತ [ತಂ॥
ನಂತರಂ ಬೇಂಟೆಯಂ ಬಯಸಿದಂ ಮಧುಮಥನ ಮಧುಮನ್ಮಥನಿಭನಾ

ಚಲಲಕ್ಷಪಾತನಾಭ್ಯಾಸಮುಂ ಭಯರೋಷ ೨೫
ಕಲಿತ ತನ್ಮೃಗಮುಖ್ಯಭಾವದರಿವುಂ ಶ್ರಮವ [ನರಿದು॥
ದಳಿದು ತನುವಿಗೆ ಬಲಂ ಬೇಂಟೆಯಿಂದಪ್ಪುದಂ ಸಚಿವರೊಪ್ಪಿದುದ
ತಳೆದು ಮೃಗಯಾವಿಹಾರಾನುಗುಣ ವೇಷಮಂ
ಗಳಲಗ್ನಧನುವಾಗಿ ಗಮಿಸಿದಂ ತತ್ಪುರುಷ
ತಿಲಕ ನಾಗಸ ಕೊಡಚುರ್ಂತೆ, ವಿತಾನಮನಶ್ವಖುರಸಮುದ್ಧೂತರಜದಿಂ॥

ತುರಗವಲ್ಗನಕೆ ಕಂಪಿಸೆ ಕುಂಡಲಂ ಕಾಡಿ ೨೬
ನರಲ ಸರದಿಂ ಮುಡಿಯ ಕಟ್ಟಿ ಗಿಡದೆಲೆಗಳಂತಿ
ತಿರುವ ಬಂಣದ ಕವಚಮಂ ತೊಟ್ಟು ದಶರಥಂ ರುರುವಾಸಭುವಿಗೈತರೆ॥

ಸರಣಿಯೊಳ್ ತನುವ ಲತೆಯಲ್ಲಿ ಮರೆಗೆಯ್ದು ಮೇಣ್
ಮುಳಿದುಂಬಿಯಲ್ಲಿಟ್ಟು ದಿಟ್ಟಿಯಂ ನೋಡಿದರ್
ಹರುಷದಿಂ ವನದೇವತೆಯರಾ ಸುನಯನನಂ ನಯವಿತ್ರೋಷಿತದೇಶನಂ||

ಜಲಕೆ ಖಗಮೃಗಗವಯಕುಲಕೆ ಹಯಗಮನಕಂ ೨೭
ಸಲೆ ತಕ್ಕ ನೆಲೆಯುಳ್ಳ ಚೋರಾಗ್ನಿರಹಿತವನ
ದೊಳಪೊಕ್ಕನರಸು ತಾಂ ಬಳಿಸಾಯ್ದುಗಳಿಂ ಬೇಂಟೆಯಾಪ ವಲ್ಲ ಕಾಡುತ್ತಿರೆ||
ಬಳಿಕಮೂ ಪೊಂಗದಿರ ಮಿಂಚೆಂಬ ತಿರುವಾಂತ
ಬಲವೈರಿಧನುವ ಭಾದ್ರಂ ಪಿಡಿದವೋಲ್ ಪಿಡಿದ
ನೊಲವಿಂದಧಿಜ್ಯಚಾಪವ ತದ್ರವದೆ ಕೆರಳಿಸುತೆ ಹರಿಗಳಂ ತನ್ನೃಪಂ||

ಮೊಲೆಗೆಳಸಿ ಮರಿವಿಂಡು ತಡೆಯುತಿರೆ ತಾಯ್ಗಳಂ ೨೮
ಸಲೆ ಕೊರ್ಬಿದೊಂದುಗಂಡೆರಳೆ ಮುಂಮುಂದೆ ಬರೆ [ನೃಪವರಂ||
ತಳೆದು ಬಾಯೊಳ್ ಕುಶವ ಮೃಗಕುಲಂ ಮೆಯ್ದೋರೆ ತನ್ನಿದಿರೊಳಾ
ಅಲಗ ತೆಗೆದಿಷುಧಿಯಿಂ ಹಯವೇರ್ದು ಜವದಿಂದೆ
ಬಳಿಸಾರೆ ಚದರ್ದು ತದ್ಯೂಥ ಮಡವಿಗೆ ಕರ್ಪ [ಷ್ಟಿಯಿಂ||
ಬಳಿದುದನಿಲಂ ಕುವಲಯಂಗಳಂ ಪರಪುವೋಲ್ ಪರಪಿ ಬಾಷ್ಪದ ವೃ

ಗುರಿಗೆಯ್ದು ಮಿಗದೊಡಲ ಮರೆಗೆಯ್ದು ನಿಂದ ಸಹ ೨೯
ಚರಿಯ ಕಂಡಾ ಧನ್ವಿನೃಪತಿ ಕಾಮಂ ತನಗ
ಮಿರುವಕತದಿಂ ಮರುಕವಾಂತು ಪಿಂದೆಗೆದನಾಕೃಷ್ಟಧನುವಿಂ ಬಾಣಮಂ
ನರಪನನ್ಯಮೃಗಾಳಿಗಿಸುವಾಗಳುಂ ಭೀತಿ
ತರಳಿತಾಕ್ಷಿಗಳನೀಕ್ಷಿಸಿ ಚತುರಕಾಂತೆಯರ [ತು||
ವರವಿಲಾಸಾಂಬಕವ ನೆನೆಯೆ ಕಿವಿಯೊಂತ ತದ್ದೃಢಮುಷ್ಟಿಯುಂ ಬಿಚ್ಚಿ

ತೆರೆದಬಾಯಿಂ ಜಗುಳ್ದ ಮುಸ್ತಾಂಕುರಂಗಳುಮ ೩೦
ನುರೆ ನಾಂದ ಸಿಟ್ಟಿಡಿಯ ಕುರುಪುಗಳನೊಳಕೊಂಡ
ಭರದೆ ಪಲ್ವಲಪಂಕದಿಂದ ಮೆಳ್ದೋಡಿರ್ದ ಪಂದಿಗಳ ಪಥವ ಪೊಂದಿ||
ತುರಗದತ್ತಣಿನೊಡಲ ನಸು ಬಾಗಿಸುತಮಿಸುವ
ನರಪನಂ ಘಾತಿಸಲ್ಕೆಳ್ದ ಪೊರ್ವ್ವಕೇಸರವ
ಕಿರಿಕುಲಂ ತನ್ನ ಜಘನಾಶ್ರಯಕುಜಂಗಳೊಳ್ ಕೆತೆದಿಷುವನರಿಯುದಿಲ್ಲಂ|

ಜವದೆ ಮೇಲ್ವಾಯಲ್ಕೆತಂದ ಕೋಣವ ನೇತ್ರ ೩೧
ವಿವರಕೆಚ್ಚರಸನಿಪು ಸೀಳ್ದು ತನ್ನವಂ ಕಡೆದು
ದವಿಲಿಪ್ತರಕ್ತಪುಂಖಮುದಾಗಿ, ಮೊದಲಿ ಕಡೆವಿರೆ ಸೈರಿಭಮದು ಮುತ್ತಂ||
ತವೆ ನಿಶಿತಶರದೆ ಕೋಳ್ಮಿಗಗಳ್ಗೆ ಕೋಡುಗಳ
ನವನಿಪಂ ತರಿದು ತಲೆಹೊರೆಗಳೆದ ಸುರೆ ಖಳರ [ಪನ್ನೇಂ||
ಜವನವಂ ಪರರಾಯುವಂ ಸಹಿಸಿದೊಡ ಮುವರ ತುಂಗಶೃಂಗವ ಸಹಿ

ಮರುತನಿಂ ಮುರಿದ ವಿಕಸಿತಸರ್ಜಶಾಖೆಗಳೊ ೩೨
ಲಿರುವ ಪುಲಿಗಳ್ ಗವಿಗಳಿಂದೆಳ್ದು ಪಾಯೆ ಮೊರೆ
ಯುರೆಗಳಿಗೆಯಲ್ಲವುಗಳಂಗಮಂ ಕಣೆಗಳಿಂ ತುಂಬಿ ಮೂಡಿಗೆಯ ಗೆಯಂ||
ಭರದೆ ಮತ್ತಂ ಪೊದೆಯೊಳಡಗಿರ್ದ ಹರಿಚಯವ
ನಿರಿವಳ್ತಿಯಿಂ ಕೆರಳಿಸಿದ ಸುಗ್ರಟಂಕೃತಿಯೊ
ಳುರುತೇಜಕಲಿತ ತನ್ಮೃಗರಾಜಶಬ್ದಕಳ್ಕಜವಾಂತನೆನೆ ತನ್ನೃಪಂ||

ದ್ವಿರದಕುಲತೀವ್ರವೈರಂ ಕುಟಿಲನಖಲಗ್ನ ೩೩
ವರಮೌಕ್ತಿಕಮುಮುಪ್ಪ ಹರಿಚಯವ ಕೊಂದು ತ
ದ್ಧರಣಿಪಂ ರಣಕೆ ನೆರವಾದ ಕರಿಗಳ ರಿಣವ ತೀರ್ಚಿದೆನೆಸುತ್ತೆ ಮತ್ತಂ||
ಭರದೆ ತುರಗವನೋಡಿಸುತೆ ಬಳಸಿ ಚಮರಂಗ
ಳಿರುವೆಡೆಯ ನಾಕೃಷ್ಟಶರವೃಷ್ಟಿಯಿಂ ಸುರಿಸು
ತರಿನೃಪರಿಗೆಸಗಿದೋಲ್ ಸಿತಬಾಲಚಾಮರಪರಿಸ್ಮೃತೆಯುಮನವಕೆಸಗಿದಂ

ಸುರುಚಿರಕಲಾಪದ ಮಯೂರ ಮತ್ಸವ ಬಳಿಗೆ ೩೪
ಬರೆ ಕಂಡು ದಶರಥಂ ಗುರಿಯಿಟ್ಟುದಿಲ್ಲದಂ [ಮ ತಾಂ||
ಸುರತದೊಳ್ ಬಿರ್ಚಿದಿನಿಯಳ ಚಿತ್ರಮಾಲೆಯಿಂ ತಳ್ತಮುಡಿಯುಂ ನೆನೆ
ಉರೆ ಬೇಂಟೆಯಿಂದಿಂತು ಬಳಲ್ದ ತನ್ನೃಪನ ಮುಖ
ಸರಸಿಜದೊಳೊಗೆದ ಬೆವರ್ವನಿಯನೀಂಟಿತು ವನಾಂ
ತರದ ನಿರ್ದಲಿತಕಿಸಲಯಪುಟಂ ಶಿಶಿರಾಂಬುಕಣಸೀಕರೋಯುತಮಾರುತಂ||

ನಿಲಿಸಿ ಭಾರವ ಸಚಿವರೊಳ್ ಮರೆದು ಕಾರ್ಯಸಂ ೩೫
ಕುಲವ ಸಂತತಸೇವೆಯಿಂ ಪೆರ್ಚಿದಕ್ಕರ್ಗೆ
ನೆಲೆಯೆನಿಸಿದಾ ನೃಪತಿ ಚದುರಪೆಣ್ಗೆಂತಂತೆ ಪಶನಾಗಿ ಬೇಂಟೆಗಳ್ಗೆ||

ತೊಳಗುವ ಮಹೌಷಧಿಗಳೇ ದೀವಿಗೆಗಳಾಗೆ
ಲಲಿತಸುಮಪಲ್ಲವದ ಪಾಸಿನೊಳ್ ಮಲಗಿ ತಾಂ [ದೆ॥
ಕಳೆದನೊಂದೆಡೆಯೊಳಿರುಳಂ ಬಳಿಯೊಳನುಚರನನೋರ್ವನುಮನಿರಿಸಿಕೊಳ

ಹರಿದಶ್ವನುದಯದೊಳ್ ಪಟುಪಟಹನಿಸ್ವನದ ೩೬
ಕರಿಕರ್ಣತಾಲಂಗಳಿಂ ನಿದ್ರೆಯಂ ತ್ಯಜಿಸು
ತರಸು ಖಗಕಲರವಮೆನಿಪ್ಪ ವೈತಾಲಿಕಸುಗೀತಮಂ ಕೇಳ್ದು ನಲಿವಂ॥
ತರುವಾಯ ಮಟವಿಯೊಳ್ ರುರುಮಾರ್ಗಗತನಾಗಿ
ಪರಿಜನಕೆ ಕಾಣದೋಲ್, ದಣಿದ ತುರಗದ ಮುಖದೆ [ಮಂ॥
ನೊರೆ ಬೀಳುತಿರೆ ಸೇರ್ದನಾತನುರೆ ಮುನಿಕುಲಾಶ್ರಯದ ತಮಸಾತೀರ

ಆ ನದೀಜಲದಲ್ಲಿ ಕುಂಭಪೂರಣಜನಿ ೩೭
ಸ್ವಾನಮಂ ಕರಿಬೃಂಹಿತಮನಾಗಿ ತಿಳಿದು ತ
ದ್ಭೂನಾಯಕಂ ಶಬ್ದಪಥವ ಗುರಿಗೆಯ್ದೆಚ್ಚನಾಗ ತನ್ನಯ ಬಾಣಮಂ॥
ಕ್ಷೋಣಿಪತಿಗಿಭವಧೆ ನಿಷಿದ್ಧಮಾಗಿರ್ದೊಡಂ
ತಾನದಂ ಗೆಯ್ದನರಸಂ ಮೀರ್ದು ಶಾಸ್ತ್ರಮಂ [ಲ್ತೇ॥
ಜ್ಞಾನಯುತರುಂ ರಜೋಗುಣಕಲಿತರಾಗೆ ದುಷ್ಪಥದೊಳಡಿಯಿಡುವರ

ಅನಿತರೊಳ್ ಹಾತಂದೆ! ಎಂಬ ದನಿಗೇಳ್ದು ತ ೩೮
ಜ್ಜನಪನದನರಸಿ, ವೇತಸದ ಮರೆಯೊಳ್ ಸಘಟ
ಮುನಿತನಯನುರದಲ್ಲಿ ನಟ್ಟಂಬುವಂ ಕಂಡು ದುಃಖಾಸ್ತ್ರವಿದ್ಧನಾಗಿ॥
ಘನವಂಶನಾತನಶ್ವದಿನಿಳಿದು ಕುಂಭಗತ
ತನುವಪ್ಪ ತನ್ಮನುಜನಂ ಕುಲವ ಕೇಳೆ ಕಂ
ಪನವಾಂತ ವಚನದಿಂ ತಾಂ ದ್ವಿಜೇತರತಪಸ್ವಿಯ ಪುತ್ರನೆಂಬನವನು॥

ಮುನಿತನಯನಿಷ್ಟದಂತವನ ನಾಗಳೆ ನಟ್ಟ ೩೯
ಕಣೆಯ ಕೀಳದೆಯೆ ಅಂಧಕಪಿತೃಗಳೆಡೆಗೊಯ್ದು
ತನಗೊದಗಿದಜ್ಞತೆಯೊಳಾ ಏಕಸುತನಿಗಾದುದನೊರೆಯೆ ತನ್ಮಹೀಶಂ॥
ಎನಿತೊ ರೋದಿಸುತೆ ತದ್ದಂಪತಿಗಳರಸನಿಂ
ತನುಜನೆದೆಯಿಂ ಶರವ ತೆಗೆಯಿಸಲ್ಕಾತ್ಮಜಂ [ಳಾಂತು॥
ತನುವನೇ ತೊರೆಯೆ ಋಷಿ ಶಪಿಸಿದಂ ದೊರೆಗಿಂತು ಕಣ್ಣೀರ ಕೆಯ್ಯೊ

ನಿನಗೆ ನನ್ನೋಲ್ ಮುಪ್ಪಿನೊಳ್ ಪುತ್ರಶೋಕದಿಂ ೪೦
ಜನಿಸುಗುಂ ಮೃತಿಯೆನುತೆ ಪಾದಾಹತಾಹಿ ನಂ
ಜನೆ ಕಾರಿದಂತಿರ್ಪ ಮುನಿಗೆ ತತ್ಪ್ರಥಮಾಪರಾಧಿನೃಪನೊರೆದನಿಂತು॥
ತನಯನಾನನವನಜಶೋಭೆಯನೆ ನೋಡದಿ
ರ್ಪೆನಗೆ ನೀಂ ಕೊಟ್ಟ ಶಾಪಮೆ ವರಂ ಯತಿವರನೆ!
ಅನಲನಿಂಧನದೆ ತಾಂ ಜ್ವಲಿಸಿ ದಹಿಸಿದ ಪೊಲವ ಸಸ್ಯಹೇತುವ ಮಾಡನೇಂ

ಮುನಿವರನೆ! ನಿಷ್ಕರುಣನುಂ ನಿನಗೆ ವಧ್ಯನಾ ೪೧
ದೆನಗೀಗ ಮಾಳ್ಪುದಂ ಬೆಸಸೆನೆ ನೃಪಂ, ತಪಸಿ [ನಂ॥
ತನುಜಾನುಗಮನಮನನಾಗಿ ಸತಿಯೊಡನೆ ತನಗಂ ಚಿತೆಯ ಯಾಚಿಸುವಿ
ಜನಪನನುಚರರೊಡನೆ ಜನದೆ ತದ್ಯತಿಯ ಶಾ
ಸನವ ನಡೆಸುತೆ, ಶಾಪಲುಪ್ತಧೃತಿಯಾಗಿ ತಾಂ
ವನಧಿಯೌರ್ವವನಾಂತೊಲಾತ್ಮನಾಶಕಶಾಪವಾಂತು ವನದಿಂ ಮರಳಿದಂ।

---

# ದಶಮಸರ್ಗಂ.

ಸೂ:— ಸುರರಿಷ್ಟದಂತೆ ರಾವಣನ ಸಂಹರಿಸಲ್ಕೆ
ಸರಸಿಜಾಕ್ಷಂ ಪುತ್ರಕಾಮೇಷ್ಟಿಯಂ ಗೆಯ್ದ
ನರನಾಥದಶರಥನ ಸುತನಾಗಿ ಜನಿಸಿದಂ ರಾಮಾಭಿಧಾನದಿಂದಂ॥

ಭೂರಿಸಂಪದವಾಂತು ಸುರರಾಜತೇಜದಿಂ ೧
ರಾರಾಜಿಪವನಿಪಂ ದಶರಥಂ ಸಲೆ ರಾಜ್ಯ
ಭಾರಮಂ ನಡೆಸುತಿರೆ ಗತಿಸೆ ಕಿಂಚಿನ್ನ್ಯೂನದಶಸಹಸ್ರಾಬ್ದಮಿನ್ನುಂ॥
ಆ ರಘುವರಂ ಪೂರ್ವಪಿತೃನಿವಹಋಣಮುಕ್ತಿ
ಕಾರಣಮು ಮಧಿಕದುಃಖಾಂಧಕಾರವ್ರಜನಿ
ವಾರಣಮು ಮಪ್ಪ ಸುಕುಮಾರನಾಮಕ ಲಸಜ್ಜ್ಯೋತಿಯಂ ಪಡೆದುದಿಲ್ಲಂ

ಕಡೆವುದಕೆ ಮುನ್ನಮವ್ಯಕ್ತರತ್ನಾತ್ರಯದ ೨
ಕಡಲಿರ್ಪವೊಲ್ ಕಾರಣಾಪೇಕ್ಷಸಂತಾನ
ಕೆಡೆಯಾಗಿ ದಶರಥಪ್ರಭುವಿರುತೆ ಚಿರಕಾಲಮಂ ಕಳೆದ ಬಗೆಯ ಕಂಡು॥

ಪೊಡವಿಯೊಡೆಯಂ ಬಿಡದೆ ತಾಂ ಪುಣ್ಯಸಂತತಿಯ
ಪಡೆಯಪೇಳ್ಕೆಂದು ಸುತಕಾಮೇಷ್ಟಿಯಂ ಮಾಡ [ಕರು॥
ತೊಡಗಿದರ್ ಮುದದೆ ಯಾಜ್ಞಿಕರಾಗಿ ಋಷ್ಯಶೃಂಗಾದಿ ಮುನಿಕುಲತಿಲ

ಆ ಸಮಯದಲ್ಲಿ ಪೌಲಸ್ತ್ಯಪೀಡಿತರಾಗಿ ೩
ವಾಸವಾದ್ಯಖಿಳದಿವಿಜರ್ ಹರಿಯ ಮರೆವುಗ
ಲ್ಕಾಶಿಸಿದರಧ್ವಗರ್ ಘರ್ಮಾರ್ತರಾಗಿ ಛಾಯಾತರುವನೆಳಸುವಂತೆ॥
ಭಾಸುರಾಬ್ಧಿಯನವರ್ ಸೇರ್ದರಾ ಪೊಳ್ತಿನೊಳೆ
ಕೇಶವಂ ಯೋಗನಿದ್ರೆಯನುಳಿದು ಕುಳಿತನು
ಲ್ಲಾಸದಿಂದಿಂತನವಕಾಶಮೇ ಭಾವಿಕೃತಿಸಿದ್ಧಿಯ ಸುಚಿಹ್ನಮಲ್ತೇ॥

ಪರಮಪಾವನಮೂರ್ತಿಯಾಗಿ ತಾಂ ಭೋಗಿಪನ ೪
ವರಕಳೇಬರದ ಪರಿಪೀಠದೊಳ್ ಕುಳಿತು ತ
ತ್ಸುರುಚಿರಫಣಾಮಂಡಲೋದ್ರತ್ನಕಾಂತಿಶೋಭಿತದೇಹನಾಗಿ ಮತ್ತಂ॥
ಸ್ಫುರಿಪರಶನೆಯದು ಮರೆಯಪ್ಪಂತೆ ದುಗುಲಮಂ
ಧರಿಸುತಂ ಸರಸಿಜಾಸನದಲ್ಲಿ ಮಂಡಿಸಿದ
ಸಿರಿಯ ಕರಪಲ್ಲವಾಸ್ತೀರ್ಣಾಂಕದಲ್ಲಿಟ್ಟ ಚರಣಯುಗದಿಂ ಮೆರೆವನಂ॥

ಪ್ರವಿಲಸಿತವಿಕಸಿತಾಂಭೋಜಾಂಬಕಂ ಬಾಲ ೫
ರವಿರುಚಿನಿಭಾಂಬರಂ ಪ್ರಾರಂಭಸುಖವರ್ತ [ಳು॥
ನವಿಮಳನುವೆನಿಸಿ ಶಾರದದಿನಂಬೋಲ್ ನಾಡೆ ಕಂಗೊಳಿಸುತಂ ಮುಗು
ನವಶೋಭೆಯಿತ್ತು ತಾಂ ಶ್ರೀವತ್ಸಲಾಂಛನಕೆ
ತವೆ ಸಿರಿಗೆ ಮುಖಮುಕುರಮೆನಿಸಿರ್ಪ ತತ್ಕೌಸ್ತು
ಭವ ಶರಧಿಸಾರವ ವಿಶಾಲವಕ್ಷಸ್ಥಲಮೊಳಾಂತು ರಂಜಿಸುತಿರ್ಪನಂ॥

ಜ್ವಲಿತದಿವ್ಯಾಭರಣ ಭೂಷಿತಂಗಳೆನಿಪ್ಪ ೬
ನಳಿತೋಳ್ಗಳೆಸೆಯೆ ವಿಟಪಂಗಳಿಗೆ ಸಮಮಾಗಿ [ತ್ತಂ॥
ಜಲಧಿಮಧ್ಯದೊಳುದಯಿಸಿರ್ದಪರಪಾರಿಜಾತದೊಲೊಪ್ಪುತಿರ್ದ ಮ
ಕಳೆಮ ದನುಜಾಂಗನಾಗಂಡಸ್ಥಲವ ರೇಖೆ
ಗಳ ಮಮೋಚ್ಛ್ವಾತರಾಗವ ಚೇತನವನಾಂತು [ನಂ॥
ತೊಳಪಸ್ತ್ರದೇವತೆಗಳುಚ್ಚರಿಪ ಜಯಘೋಷದೊಡನೆ ರಾಜಿಸುತಿರ್ಪ

ತೋಃ ಮ ಶೇಷದ್ವೇಷಮಂ ಸುರಪವಜ್ರದಿಂ ೭
ದೊರೆದ ಗಾಯದ ಕುರುಪನಾಂತು ನಮ್ರತೆಯಿಂದೆ [ತ್ತಂ||
ಕರಯುಗವ ಮುಗಿದು ಮುಂದಿರ್ಪ ಖಗರಾಜನಿಂ ಸೇವೆಯಂ ಕೆಯ್ಕೊಳು
ಹರುಷದೊಳ್ ಸುಖಶಯನಮಂ ಕೇಳ್ವ ಭೃಗ್ವಾದಿ
ವರಮುನಿಗಳಂ ಯೋಗನಿದ್ರಾಂತ ನಿರ್ಮಳಸು
ಕರುಣಾವಲೋಕನಂಗಳೊಳನುಗ್ರಹಿಸುವಾ ಹರಿಯ ಸಮರರ್ ಕಂಡರು||

ಬಳಿಕಂ ಸುರಾರಿಸಂದೋಹನಾಶಕನಾದ ೮
ನಳಿನನಾಭನ ರಾಜಿಪಂಘ್ರಿಪಂಕೇಜಕ್ಕೆ
ತಲೆವಾಗಿ ವಂದಿಸುತ್ತಂ ಸಕಲನಿರ್ಜರರ್ ಮತ್ತಮತಿವಿನಯದಿಂದಂ||
ತಿಳಿವಡೆಂದುಂ ಮಾತಿಗಂ ಮನಸಿಗಂ ಸಿಲುಕ
ದಲಘುತರಮಹಿಮೆಗಾತ್ರಯನೆನಿಸುತಿರ್ಪ ನಿ
ರ್ಮಳಚರಿತನಾದ ತತ್ಪುರುಷೋತ್ತಮನನಿಂತು ಪೊಗಳಲುವಾದರಾಗಂ

ಎಲೆ ದೇವ! ಮುನ್ನಮೀವಿಶ್ವಮಂ ಸೃಜಿಸುತಂ ೯
ಬಳಿಕಮುರೆ ರಕ್ಷಿಸುತ್ತಂ ಮತ್ತೆ ಕಡೆಗಿದ [ಣು||
ಕ್ಕಳಿವನೊಡರಿಸುವ ಮೂದೆರದ ರೂಪವ ಧರಿಪ ಮಹಿತಪ್ರಭಾವ! ಶರ
ಮಳೆಯ ನೀರ್ ಮಾಧುರ್ಯಯುತಮಾದೊಡಂ ಧರಾ
ತಳದೊಳಾಯಾನೆಲೆಯೊಳಿರ್ದನ್ಯರಸವ ತಾಂ
ತಳೆವಂತೆ ಗುಣಯೋಗದಿಂ ಭಿನ್ನತೆಯ ಪಡೆವೆ ನೀನೇಕರೂಪನಿರ್ದುಂ||

ಅಳತೆಗಳವಡದ ನೀಂ ಜಗವನಳೆಯುವೆ ಕಾಮ ೧೦
ಕಲಿತನಾಗದೆ ಬೇಡಿದುದನೀವೆ ನಿನ್ನನಾರ್
ಗೆಲರೆಲ್ಲರಂ ನೀನೆ ಗೆಲ್ದೆ ಯಣುವಾಗಿ ಮಹದಾದಿಕಾರಣನೆನಿಸುವೆ||
ತಿಳಿಯೆ ನೀಂ ಹೃದಯಗತನಾಗಿ ದೂರಿರುವೆ ಮೇ
ಣೊಳಸದಿರೆಯುಂ ತಪವ ಗೆಯ್ವ ವರದಯೆಗೆ ಮಿಗ
ನೆಲೆಯೆನಿಸಿ ನಿರ್ದುಃಖಿಯೆನಿಪೆ ಚಿರಕಾಲದಿಂದಿರೆ ನಿನಗೆ ಜರೆಯುಡಸದು||

ಅರಿವೆ ನೀನೆಲ್ಲವಂ ನಿನ್ನನರಿದವರಿಲ್ಲ ೧೧
ಮುರೆ ಸರ್ವಮಂ ಪಡೆದೆ ನಿನ್ನ ಪಡೆದವರಿಲ್ಲ
ಮೆರೆಯನಖಿಲರ್ಗೆ ನೀಂ ನಿನಗೊಡೆಯರಿಲ್ಲ ಮೇಣೊರ್ವನೆ ಸರ್ವರೂಪವಾಂತೆ||

ಹರಿಯೆ! ನಿನ್ನಯ ವಂದಿಗಳ್ ಸಪ್ತಸಾಮಂಗ
ಳುರುಶಯನಮೇ ಸಪ್ತಶರಧಿಗಳ್ ನಿನ್ನ ಭಾ
ಸುರಮುಖಮೆ ಸಪ್ತಾರ್ಚಿಯಾಗಿರ್ಪನಲ್ತೆ ಪೇಳ್ ಸಪ್ತಲೋಕೈಕಾಶ್ರಯ!

ಜ್ಞಾನಮಾವುದು ಚತುರ್ವರ್ಗಫಲಕಂ, ಕಾಲ ೧೨
ಮಾನಮಾವುದು ಚತುರ್ಯುಗಯುತಂ, ಲೋಕ [ಮೆಲ್ಲಂ॥
ನಿರ್ಮಾಣಮಾವುದು ಚತುರ್ವರ್ಣಮಯಮದು ನಿನ್ನ ಚತುರಾಸ್ಯಜನಿತ
ಜ್ಞಾನಿಗಳ್ ಮತ್ತೆ ವಿಷಯವ ಸೋಂಕದಿಹ ಮನದೆ
ಜಾನಿಪರ್ ತಮ್ಮ ಹೃತ್ಪದ್ಮಸಂಸ್ಥಿತಮಪ್ಪ [ಷ॥
ನೂನಸಜ್ಜ್ಯೋತಿಮಯನಾದ ನಿನ್ನಂ ಮೋಕ್ಷಮಂ ಬಯಸಿ, ಪರಮಪುರು

ಜನಿರಹಿತನುಂ ನಿಷ್ಕ್ರಿಯಂ ಜಾಗರೂಕನೆಂ ೧೩
ದೆನಿಪ ನೀಂ ಕ್ರಮದೆ ಜನನವನಾಂತು ರಿಪುನಿರಕ
ಹನನಮಂ ಗೆಯ್ದು ಯೋಗದ ನಿದ್ರೆಯನುಭವಿಪೆ! ನಿನ್ನ ನಿಜವರಿವರಾರು?
ಮನದಿಷ್ಟದಂತೆ ವಿಷಯಂಗಳಂ ಭೋಗಿಸುತೆ
ಘನಮಾದ ತಪವನೆಸಗುವ ಮತ್ತಮೀಜಗದ
ಜನವರಕ್ಷಿಸುತಮೌದಾಸೀನ್ಯದಿಂದಿರುವ ಶಕ್ತಿ ನಿನಗಿರ್ಕುಮಲ್ತೇಂ॥

ಸನ್ನುತಮೆನಿಪ್ಪಾಗಮಂಗಳಿಂ ಪಲತೆರದೆ ೧೪
ಭಿನ್ನಮಾದಖಿಳಫಲಸಾಧಕಪಥಂಗಳುಂ
ನಿನ್ನನೇ ಸೇರ್ವುವುರೆ ಗಂಗೆಯ ಪೊನಲ್ಗಳಂಬುಧಿಯ ತಾಂ ಸೇರುವಂತೆ॥
ನಿನ್ನೊಳಿಟ್ಟಾತ್ಮಚಿತ್ತವ ಸರ್ವಕರ್ಮಮಂ
ನಿನ್ನಡಿಯೊಳರ್ಪಿಸುತ್ತಂ ವೀತರಾಗರಾ
ದುನ್ನತಸುಭಕ್ತರ್ಗೆ ಮುಕ್ತಿಯಂ ಕುಡುವುದಕೆ ನೀನೆ ಗತಿಯಲ್ತೆ ದೇವ!

ನೆರೆ ಕಣ್ಗೆ ಕಂಡೊಡಂ ನಿನ್ನ ಮಹಾದಿಯ್ಕೆ ೧೫
ಸಿರಿಯ ಪಂಮಿತಿಯ ನರಿಯಲ್ಕಾಗದಿನ್ನುಮಾ
ಪರಮವೇದಾನುಮಾನಂಗಳ್ಗಗಮ್ಯನಹ ನಿನ್ನಿರವನರಿವುದೆಂತು॥
ಸ್ಮರಣಮಾತ್ರದೊಳೆ ನರನಂ ಪಾವನಂಗೆಯ್ವೆ
ಪರತರಾತ್ಮನೆ, ತಿಳಿಯದೇನಿನಿತರಿಂದಮೇ
ಪರಿಲಸಿತಭವದೀಯದರ್ಶನಾದಿಗಳ ಫಲಮಿನ್ನವೆಂತಿರ್ಕುಮೊಂದು॥

ಜಡಧಿರತ್ನಂಗಳಿನತೇಜಂಗಳುಂ ಗಣನೆ ೧೬
ಗೆಡೆಯಾಗವಂತೆವೊಲ್ ಮಾತಿಗಂ ಮನಸಿಗಂ
ನಡೆ ನಿಲುಕದಿಪ್ಪ ನಿನ್ನಯ ಚರಿತಮಂ ಬಣ್ಣಿಸಲ್ಕಳವೆ? ದೇವ! ನಮಗೆ॥
ಪಡೆಯುದುದುಮುರಿ ಪಡೆಯ ತಕ್ಕುದುಂ ನಿನಗೆ ತಿಳಿ
ವಡೆ ತಾನವಣಮುಲ್ಲ ದಿದರ್ೊಡಂ ನೀಂ ಜನನ
ವಡೆದು ಕರ್ಮಪ ಮಾಳ್ಪುದಕೆ ಕಾರಣಂ ಜಗದನುಗ್ರಹಮದೊಂದಲ್ಲವೇಂ॥

ಕಂತುಪಿತ! ಭವದೀಯಮಹಿಮೆಯುಂ ನುತಿಪ ವಾಕ್ ೧೭
ಸಂತತಿಯು ಮೌನಸುಂ ಧರಿಪುದಕೆ ಹೇತು ತಾ [ಲ್ತು॥
ನಂತ ಬಳಲಿಕೆಯೊ ಮೋಣಸಮರ್ಥತೆಯೊ ಅತ್ತ್ರಿ ನಿನ್ನ ಗುಣವಂತಮ
ಇಂತೆಂದು ಸುರರಧೋಕ್ಷಜನಂ ಪ್ರಸನ್ನನ
ಪ್ಪಂತೆ ಬಣ್ಣಿಸಿದರಾವರ್ಣನಂ ತಾಂ ರಮಾ
ಕಾಂತನ ಚರಿತ್ರದ ಯಥಾರ್ಥಸಂಕಥನಮಲ್ಲದೆ ನುತಿಯದಲ್ತು ನಿಸದಂ॥

ಅಲಯಕಾಲದೊಳೆ ತಾಂ ಮೇರೆದಪ್ಪಿದ ದನುಜ ೧೮
ಜಲಧಿಯಿಂದೊಗೆದ ಭಯಮಂ ದೇವತಾಳಿಯಾ
ಗಳೆ ಕುಶಲಸಂಪ್ರಶ್ನೆಯಿಂದಳ್ತಿದೋರ್ದ್ದ ತದ್ರಾಕ್ಷಸಾರಿಗೆ ಪೇಳ್ವಿನಂ॥
ಬಳಿಕಮಂಬುಧಿತೀರಸನ್ನಿಕೃಷ್ಟಾಚಲಾ
ವಳಿಗಹ್ವರಂಗಳೊಳ್ ಮಾರ್ದನಿಯನೊದಗಿಸುತೆ
ಲಲಿತಮುಪ್ಪಾತ್ಮಸಿನದಂ ಶರಧಿಘೋಷಮಂ ಪಳಿಯೆ ಹರಿ ನುಡಿದನಿಂತು॥

ಆದಿಕವಿಯೊದ ಮಾಧವನ ತತ್ಕಂಠಾದಿ ೧೯
ಯಾದಕ್ಷರಸ್ಥಾನದಿಂದೆ ಜನಿಪುದರಿಂದ [ಯು॥
ಮಾವಂ ಸುಸಂಸ್ಕೃತಿಯು ಪಡೆದು ಚರಿತಾರ್ಥೆ ತಾನಾದಭಾಷಾವನಿತೆ
ಆವಯಾಘನಹರಿಯ ಮುಖದಿಂದೆ ವಿಮಳರವ
ನೋಪಾರಕಾಂತಿಯುತೆಯಾಗಿ ಪೊರಪೊಣ್ಮಿ ತ
ತ್ಪಾದನಿರ್ಯಾತಾವಶಿಷ್ಯಗಂಗೋರ್ಧ್ವವಾಹಿನಿಯಂತೆ ರಾಜಿಸಿದಳು॥

ಅರಿವಿಸರ್ಗನಾಂ ತಮೋಗುಣ ಮಖಿಳಜೀವಿಗಳೊ ೨೦
ಳಿರುವ ಸ್ವಾತಿಕರಾಜಸಂಗಳೆರಡುಮನಡಗಿ
ಸಿರುವಂತೆ ರಕ್ಕಸಂ ನಿಮ್ಮಯುಶುಭಾನಪೌರುಷಯುಗವನಣಗಿಸಿದುವಂ॥

ಅರಿಯದೆಸಗಿದ ದುರಿತಕೃತಿಯಿಂದೆ ಸಜ್ಜನೋ
ತ್ಕರದ ಹೃದಯಂ ತಪಿಸುವಂತೆವೊಲ್ ತ್ರಿಭುವನಂ
ಪರಿತಪಿಸುತಿರ್ಕು ಮಾಖಳನಿಂದಮೆಂಬುದುಂ ತಿಳಿದುದೆನಗಮರವರರೇ॥

ನಿಸದಮೆಮ್ಮುಭಯರ್ಗಮಿದು ಮುಖ್ಯಕಾರ್ಯಮಿದ ೨೧
ನೆಸಗೆಂದು ಸುರಪ! ನೀಂ ಪ್ರಾರ್ಥಿಸುವುದೇಕೆನ್ನ
ನೊಸೆದು, ಪಹ್ನಿಯ ಸಹಾಯಕೆ ಮಾರುತಂ ತಾನೆ ಸಂಸಿದ್ಧನಪ್ಪಸಲ್ತೇಂ
ದಶವದನನುಂ ತನ್ನಯುಸಿಗೆ ಬಲಿಗೊಡದೆ ನಿಜ
ದಶಮ ಮಸ್ತಕವ ನುಳಿಸಿರ್ಪನೆನ್ನಯ ಕರವಿ
ಲಸಿತಚಕ್ರಾಯುಧಕ್ಕರ್ಪಿಸುವ ಭಾಗವೋ ಎಂಬೊಲದ ತಿಳಿ ಪಪ್ರಿಯೇ॥

ಸರಸಿಜೋದ್ಭವನ ವರದಾನದಿಂದಾ ಮಹಾ ೨೨
ದುರಿತಾತ್ಮರಿಪು ಪಿಂತು ಮೇಲ್ಲೇರ್ದುದಂ ಸಹಿಪೆ [ವಂ॥
ಸುರಗದಾರೋಹಣವ ಚಂದನಮಹೀರುಹಂ ತಾಂ ಸಹಿಪ ಮಾಳ್ಕೆಯಿಂ
ಸುರವರರೆ! ತದ್ರಾಕ್ಷಸಂ ತನ್ನ ತಪದಿಂದೆ
ಪರಿತುಷ್ಟನಾದ ವಿಧಿಯಿಂದೆ ತಾಂ ಬೇಡಿದಂ
ನರರ ಲೆಕ್ಕಿಸದೆ ಸುರರಿಂದೆ ತತ್ತನುಜರಿಂ ಮರಣವಾಗದ ಪರಪನೇ॥

ಅದರಿಂದಮಾಂ ದಾಶರಥಿಯಾಗಿ ಪುಟ್ಟುತಂ ೨೩
ಕದನದೊಳ್ ನಿಶಿತಾಸ್ತ್ರದಿಂದೆ ರಾವಣಶಿರೋ
ಬ್ಜದ ರಾಶಿಯಂ ರಣಾವನಿಯರ್ಚನೆಗೆ ತಕ್ಕುದಂ ಮಾಳ್ಪೆನಚಿರದಲ್ಲಿ॥
ಮುದದಿಂದೆ ಯಾಜ್ಞಿಕರ್ ಶಾಸ್ತ್ರಕ್ರಮದೊಳರ್ಪಿ
ಸಿದ ಹವಿರ್ಭಾಗಮಂ ಮರಳಿ ನೀಂ ಕೈಕೊಳ್ವಿ
ರದನಿನ್ನುಮಸುರಸಂದೋಹಮುಪಹರಿಸದೆಂಬುದ ನಂಬಿರ್ಕೈ ವಿಬುಧರೇ।

ಸುರಸರಣಿಯೊಳ್ ವಿಮಾನವನೇರ್ದು ತಾಂ ಮುಗಿಲ ೨೪
ಮರೆಗೊಂಡು ಚರಿಪರಾ ರಾವಣನ ಪುಷ್ಪಕದ [ಸರ॥
ಪರುಶನದೊಳೊಗೆನ ಸಂಕ್ಷೋಭದೊಳದಂ ತ್ಯಜಿಪರಿನ್ನು ಪುಣ್ಯಕ್ಷೇತ್ರ
ಪರಸತೀಕಚನಿಚಯಮಂ ಬಲ್ಮೆಯಿಂ ಮುಟ್ಟ
ದಿರುವಂತೆ ಶಾಪವಾಂತಾ ದಶಾಸ್ಯನ ದುಷ್ಟ
ಕರದೂಷಿತಂಗಳೆನಿಸದ ನಾಕಬಂದಿಯರ ಜಡೆಗಳಂ ಬಿಚ್ಚುವಿರಿ ನೀವ್

ಪರಿಕಿಪೊಡೆ ರಾವಣಾವಗ್ರಹಕ್ಲಾಂತಮಾ ೨೫
ಗಿರುವ ನಿರ್ಜರಸಸ್ಯಕಿಂತು ವಾಗಮೃತಮಂ [ರುಂ||
ಸುರಿಸಿ ತಾಂ ಮರೆಯೂದುದಾಕೃಷ್ಣಜಲಧರಂ, ಬಳಿಕಮಿಂದ್ರಾದ್ಯಮರ
ಸುರಕಾರ್ಯದೊಳ್ ಸಮುದ್ಯತನಾದ ತತ್ಪರಮ
ಪುರುಷನನುಗಮನಮಂ ಗೆಯ್ದರ್ ನಿಜಾಂಶಾವ [ವಂ||
ತರಣಂಗಳಿಂ ಕುಜಂಗಳ್ ಪ್ರಸೂನಂಗಳಿಂದನುಗಮಿಪವೊಲ್ ವಾಯು

ಸಮನಂತರಂ ದಶರಥನ ಪುತ್ರಕಾಮೇಷ್ಟಿ ೨೬
ಯಮಿತಕರ್ಮಾವಸಾನದೊಳಗ್ನಿಯಿಂದೋರ್ವ [ತಂ||
ವಿಮಳತರದಿವ್ಯಪುರುಷಂ ಯಾಜ್ಞಿಕರ ಸುವಿಸ್ಮಯದೊಡನೆ ಮೆಯ್ದೋರು
ಕಮಲಾಕ್ಷನದರಲ್ಲಿ ನೆಲಸೆ ತನಗಂ ದುರ್ವ
ಹಮೆನಿಪ್ಪ ಹೇಮಪಾತ್ರಸ್ಥಪಾಯಸವ ಸಂ
ಭ್ರಮದಿಂದೆ ನಳಿತೋಳ್ಗಳಿಂದೆ ತಾಂ ಪಿಡಿದು ರಾರಾಜಿಸಿದನತಿತೇಜದಿಂ||

ಹರುಷದಿಂದಂ ಪ್ರಜಾಪತಿಯ ಸಂಬಂಧಿಯಾ ೨೭
ಪುರುಷ ನೊಪ್ಪಿಸಿದ ತತ್ಪಾಯಸವ ಕೈಕೊಂಡ
ನಿರದೆ ದಶರಥ ನಬ್ಧಿಯಿಂ ಪ್ರಕಟತಾಮೃತವನಿಂದ್ರಸುರಿ ಕೊಳ್ವತೆರದಿಂ||
ಪರಿಕಿಸಲ್ಕಾತಂಗೆ ಮೂಜಗವ ಪುಟ್ಟಿಸುವ
ಹರಿಯೆ ಮಗನಾಗಿ ಜನಿಸಲ್ಕೆ ಕಾಮಿಸದನೇ
ನೊರೆವುದಾ ಭೂಕಾಂತ ನನ್ಯದುರ್ಲಭಗುಣವ್ರಜದ ಮಹಿಮಾತಿಶಯಮಂ|

ಕಮಲಮಿತ್ರಂ ವ್ಯೋಮಭೂಮಿಗಳ್ಗೆಳೆವಿಸಿಲ ೨೮
ಸಮಭಾಗದಿಂದೀಯುವಂತೆ ದಶರಥನುಭಯ
ರಮಣಿಯರ್ಕಳ್ಗೆ ಚರುಸಂಜ್ಞೆಯಾ ವಿಷ್ಣುತೇಜವ ಭಾಗಿಸಿತ್ತು ತನಗೆ||
ಕ್ರಮದೆ ಕೌಸಲ್ಯೆಯುಂ ಕೈಕೇಯಿಯುಂ ಮಾನ್ಯೆ
ಯಮಿತಪ್ರಿಯೆಯುಮಾದಕತದಿನವರೀರ್ವರಿಂ
ದಮೆ ತಮ್ಮಭಾಗಮಂ ಕೊಡಿಸುತೆ ಸುಮಿತ್ರೆಯಂ ಗೌರವಿಸಲೆಳಸಿರ್ದನು

ಪತಿಯು ಮುಚಿತಜ್ಞನೆನಸಿದ ತನ್ಮಹೀಪಧೂ ೨೯
ಪತಿಯು ಚಿತ್ತಜ್ಞರಾದಾ ಸತಿಯರೀರ್ವರು
ನ್ನತಹಿತದೆ ತಮ್ಮ ಚರುಭಾಗದ ಸಮಾಂಶಂಗಳಂ ಸುಮಿತ್ರೆಗೆ ಕೊಟ್ಟರು

ಚತುರೆಯುವಳುಂ ಸವತಿಯರೊಳುಭಯರೊಳ್ ಪ್ರೇಮ
ವತಿಯಾಗಿ ವರ್ತಿಸುತ್ತಿರ್ದಳಿಲ್ತ್ರೇಂ ದ್ವಿರದ [ತಾಂ||
ಪತಿಯ ಮದಧಾರೆಗಳೊಳೆರಡರೊಳ್ ಪ್ರಣಯಮಿಟ್ಟಿರ್ಪಂತೆ ಪೆಣ್ದುಂಬಿ

ನಳಿನಸಖ ನಮೃತನಾಮಕಮಪ್ಪರಶ್ಮಿಗಳ್ ೩೮
ಸಲಿಲಮಯಗರ್ಭಮಂ ಧರಿಪಂತೆ ಮೂವರುಂ
ಲಲನೆಯರ್ ಲೋಕಹಿತಹೇತುದೇವಾಂಶಸಂಕಲಿತಗರ್ಭವ ಧರಿಸುತಂ||
ಫಲಸಮಾವಿಭಾವವೊಳಕೊಂಡ ಸಸ್ಯಸಂ
ಕುಲದ ಸತ್ಸಂಪದಂಗಳ ಮಾಳ್ಕೆಯಿಂದವರ್
ತೊಳಗಿದರ್ ತಾಮೇಕಕಾಲದೊಳೆ ಗರ್ಭಿಣಿಯರಾಗಿ ನಸುಬೆಳ್ಪನಾಂತು||

ವರಶಂಖಚಕ್ರಾಸಿಶಾರ್ಙ್ಗಗದೆಗಳನ್ನೈದೆ ೩೧
ಧರಿಸಿದ ವಾಮನಾಕಾರದ ಸುಮೂರ್ತಿಗಳ್ ]ದೊಳು||
ಪರಮಧೈರ್ಯದೆ ಬಳಸಿ ತಮ್ಮನುರೆ ಪೊರೆಯುತಿರ್ಪಂತೆ ಮತ್ತಂ ನಭ||
ಪರಪಿ ಪೊಂಗರಿಯ ಕದಿರೋಳಿಯಂ ವೇಗದಿಂ
ಬರಸೆಳೆಯುತಂ ಮುಗಿಲ್ವಿಂಡ ನಾ ಗರುಡನಾ
ದರದೆ ತಮ್ಮಂ ಬೆನ್ನೊಳಾಂತು ಚರಿಪಂತೆ ಕನಸಂ ಕಂಡರಾ ಸತಿಯರು||

ಮುರಹರಂ ತನ್ನ ಕೆಯ್ಗಿತ್ತ ಕೌಸ್ತುಭವ ನಾ ೩೨
ಸಿರಿ ಕುಚಾಂತರದಲ್ಲಿ ಧರಿಸಿ, ಕಮಲವ್ಯಜನ
ಕರಳಾಗಿ ತಮ್ಮ ಸೇವೆಯನಳ್ತಿಯಿಂ ಮಾಡುತಿರೆ ಮತ್ತ ಮಾಕ್ಷಣದೊಳು|
ಸುರಪಥದ ಗಂಗೆಯೊಳ್ ಮಿಂದು ನಡೆತಂದು ಭಾ
ಸುರವೇದಮಂತ್ರಮಂ ಪಠಿಸುತಂ ಸಪ್ತರ್ಷಿ
ವರರೈದೆ ತಮ್ಮರ್ಚನೆಯನೆಸಗುವಂತೆ ಕನಸಂ ಕಂಡರಾ ಸತಿಯರು||

ಸತಿಯರಿಂದೀ ವಿಧದ ಕನಸುಗಳ ಕೇಳ್ದು ವ ೩೩
ರ್ಧಿತಹರ್ಷಚಿತ್ತನಾದಾ ದಶರಥಂ ಜಗ
ತ್ಪಿತನಿಗಂ ಪಿತನಪ್ಪಕತದೆ ತನ್ನಂ ಸರ್ವರೊಳ್ ಶ್ರೇಷ್ಠನೆಂದು ಬಗೆಯೆ||
ಅತಿವಿಮಳಸಲಿಲಂಗಳೊಳ್ ತೋರ್ಪ ಚಂದ್ರಮ
ಪ್ರತಿಬಿಂಬದಂತನೇಕಾತ್ಮ ಭಾವವನಾಂತು
ಕ್ಷಿತಿಪನರ್ಧಾಂಗಿಯರ ಕುಕ್ಷಿಗಳೊಳಾ ಏಕವಿಭುವಿಷ್ಣು ವಾಸಿಸಿರ್ದಂ||

ಬಳಿಕಮರಸನ ಜ್ಯೇಷ್ಠಪತ್ನಿ ಕೌಸಲ್ಯೆ ಸಂ ೩೪
ಗಳಿಸೆ ತಾಂ ಪ್ರಸವಸಮಯಂ ಪೆತ್ತಳುರುತಮುವ [ಯಂ||
ಕಳೆವ ಸತ್ಪುತ್ರನಂ ರಾತ್ರಿಯಲ್ಲಾ ಮಹೌಷಧಿ ಪಡೆವವೊಲ್ ಜ್ಯೋತಿ
ನಲವಿಂದೆ ತಂದೆ ತತ್ತನುಜನಭಿರಾಮತೆಯ
ನೊಳಕೊಂಡ ದಿವ್ಯತನುವಿಂದೆ ಚೋದಿತನಾಗಿ
ಸಲೆ ರಾಮನಾಮಮಂ ಜಗದಾದಿಮಂಗಳಸ್ತೋಮಮಂ ಮಗನಿಗಿಟ್ಟಂ||

ವಿಶದಯಶವಾಂತ ರಘುಕುಲದ ಪ್ರದೀಪನೆನಿ ೩೫
ಪಸಮತೇಜದ ತತ್ಕುಮಾರ ನುರುಕಾಂತಿಯಿಂ
ನಿಸದಂ ತಿರಸ್ಕೃತಿಯ ಪಡೆದವೆನೆ ಸೂತಿಕಾಗೃಹದ ದೀಪಂಗಳೊಪ್ಪೆ||
ಮಿಸುಪ ಪಾಸಿನೊಳೊರಗಿದಾ ರಾಮನೊಡನೆ ತಾ
ನೆಸೆದಳಾ ತೆಳ್ವಸಿರ ಮಾತೆ ಪುಳಿನಸ್ಥಳದ
ಬಿಸಜೋಪಹಾರದಿಂ ತಳ್ತು ರಾಜಿಪ ಶರತ್ಕೃಶೆಯಾದ ಗಂಗೆಯಂತೆ||

ಭರತಾಭಿಧಾನದಿಂದಂ ಶೀಲಯುತನಾದ ೩೬
ತರುಳನಾ ಕೈಕೇಯಿಯಿಂ ಜನಿಸಿ ವಿನಯಗುಣ
ಮುರೆ ಸಿರಿಯನೆಂತಂತೆ ತಾಂ ತನ್ನ ಜನನಿಯನಲಂಕರಿಸಿದಂ ಬಳಿಕ್ಕಂ||
ಹರುಷದಿಂ ಲಕ್ಷ್ಮಣಂ ಶತ್ರುಘ್ನನೆಂಬ ಭಾ
ಸುರಯುಮಳಸುತರಂ ಸುಮಿತ್ರೆ ಪೆತ್ತಳ್ ನಾಡೆ [ದಿಂ||
ನಿರುತಮಭ್ಯಸ್ತಶಾಸ್ತ್ರಂ ಪ್ರಬೋಧೇಂದ್ರಿಯವಿಜಯಯುಗವ ಪಡೆವತೆರ

ಧರಣಿಗವತರಿಸಿದಾ ಪುರುಷೋತ್ತಮನ ಕೂಡಿ ೩೭
ಸುರಲೋಕಮುಂ ಬಂದುದೋ ಎಂಬ ಮಾಳ್ಕೆಯಿಂ [ಬಿರೆ||
ದಿರದೆ ದುರ್ಭಿಕ್ಷಾದಿದೋಷಮಾರೋಗ್ಯಾದಿಗುಣಮೆ ಭುವಿಯೊಳ್ ತುಂ
ಪರಮಾತ್ಮನಾ ಚತುರ್ಮೂರ್ತಿಯುದಯದೆ, ರಜೋ
ಪರಿಕಲಿತನಾಗದೆಯೆ ತೀಡುವನಿಲಂ ದಿಶಾ [ಗುಂ||
ತರುಣಿಯರ್ ದಶವದನಭೀತಪತಿಯರ್ ಸಂತಸದೊಳುಸಿರ್ಗರೆದೊಲೆಸೆ

ಜಲಜಾಪ್ತನಮಳರುಚಿಯಿಂದೆ ಮೋಣಗ್ನಿ ಪೊಗೆ ೩೮
ಯುಳಿದು ಬೆಳಗುವುದರಿಂ ರಕ್ಕಸನ ಪೀಡೆಯಂ
ಕಳೆದು ತಾಮುವರೀರ್ವರುಂ ದುಃಖಮುಕ್ತರಾದಂತೆವೊಲ್ ತೋರೆ ಮತ್ತಂ

ಖಳನಾದ ದಶಮುಖನ ಮಕುಟಂಗಳಿಂದೆ ಮಣಿ
ಗಳ ನೆವದೆ ತದ್ರಾಕ್ಷಸೇಂದ್ರಲಕ್ಷ್ಮಿಯ ಬಾಷ್ಪ
ಜಲಬಿಂದುಗಳ್ ಭೂತಳಕ್ಕುದಿರ್ದವು ಜನನಸಮಯದೊಳೆ ತದ್ರಾಮನಾ

ಜನಿತಪುತ್ರನ ದಶರಥನ ಪುತ್ರಜನ್ಮಸೂ ೩೯
ಚನವ ಸೂಚಿಪ ಶುಭಾತೋದ್ಯಂಗಳಾರಂಭ
ಮನೆ ಮೊದಲ್ ದಿವದಲ್ಲಿ ದೇವದುಂದುಭಿಗಳಿರದೆಸಗುತಿರೆ ಮತ್ತಮಾಗಂ
ಅನುಪಮಾನಂದತುಂದಿಲ ತನ್ಮಹೀಶನರ
ಮನೆಯಲ್ಲಿ ಸುರಿದ ಸುರತರುಪುಷ್ಪವೃಷ್ಟಿಯೇ [ಮದು॥
ತನಯಜನನೋತ್ಸವದೆ ಗೆಯ್ದ ಮಂಗಳಕಾರ್ಯಚಯದೊಳಾಸ್ಯಮುದಾ

ಜಾತಕರ್ಮಾದಿ ಸಂಸ್ಕಾರಮಂ ಪೊಂದಿ ನೃಪ ೪೦
ಜಾತರುರೆ ದಾದಿಯರ ಮೊಲೆವಾಲನೀಂಟುತಂ
ಪ್ರೀತಿಯಿಂ ಬಳೆದರಗ್ರಜನ ಮಾಳ್ಕೆಯಿನಿರ್ಪ ಪಿತೃಮಹಾನಂದದೊಡನೆ
ಆತರುಳರೊಳ್ ಸಹಜಮಾಗಿ ಕಂಗೊಳಿಪ ಸುವಿ
ನೀತತ್ವಮದು ವೃದ್ಧಿಯಾಂತುದು ಸುವಿದ್ಯೆಯಿಂ
ವೀತಿಹೋತ್ರಪ್ರಕೃತಿಸಿದ್ಧತೇಜಂ ವರ್ಧಿಪಂತಿರಾಜ್ಯಾದಿಯಿಂದಂ॥

ಋತುಗಳೆಲ್ಲಂ ಕೂಡಿ ದಿವಿಜಪತಿನಂದನ ೪೧
ಕ್ಕತಿಶಯ ಸುಶೋಭೆಯಂ ಕೊಟ್ಟಂತಿರನ್ಯೋನ್ಯ
ಹಿತರಾಗಿ ಬಾಳ್ವ ತತ್ತನುಜರಿನವಂಶಕರ್ತರ್ ಪಿರಿದೆನಿಪ್ಪ ಬೆಳಗಂ॥
ಸುತಸೋದರತ್ವದೊಳ್ ನಾಲ್ವರುಂ ತಾಂ ಸಮಾ
ಸತೆಯನಾಂತಿರ್ದೊಡಂ ರಾಮಲಕ್ಷ್ಮಣರಿಂತು
ಸತತಮುರೆ ನಲ್ಮೆಯಿಂ ತಳ್ತಿರ್ದರಂತೆಯೇ ಭರತಶತ್ರುಘ್ನರಿರ್ವರುಂ॥

ಅಪರಿಶೀರ್ಣರೀರ್ಣರಲ್ಲಿಪ್ರೈಕ್ಯತೆಗೆ ಸಮು ೪೨
ಷ್ಟವಿಸಲಿಲ್ಲಂ ಭಂಗಮೆಂದುಂ ವಿಚಾರಿಪೊಡೆ
ಪವನಾಗ್ನಿಗಳಿಗಂ ನಿಶಾಕರಾಬ್ಧಿಗಳಿಗಂ ಭೇದಮೊದಗದ ಪಾಳ್ಕೆಯಿಂ॥
ತನೆ ನಿಜಪ್ರಜೆಗಳ ಸ್ವಾಂತಮಂ ಸೆಳೆದರಾ
ಕುಮರರ್ ಜನಪ್ರಿಯರ್ ವಿನಯತೇಜಂಗಳಿಂ
ಕುವಲಯಶ್ಯಾಮಾಭ್ರಕುಲವೆ ತಳ್ತಾ ನಿದಾಘಾಂತದಿವಸಂಗಳಂತೆ॥

ನೆರೆ ಚತುರ್ಭಾಗಮಂ ಪೊಂದಿರ್ಪ ದಶರಥೇ ೪೩
ಶ್ವರ ಸುಸಂತಾನಮದು ಭೂಲೋಕದೊಳ್ ಕಳೇ [ತಂ||
ಬರವಾಂತ ಧರ್ಮಾರ್ಥಕಾಮಮೋಕ್ಷಂಗಳವತಾರದೊಲ್ ತೋರೆ ಮ
ಶರಧಿಗಳ್ ನಾಲ್ಕುಮುರುಮಣಿಗಳಿಂ ಸಾಲ್ಪಿಸೆಗ
ಳೆರೆಯನಾದಾತ್ಮ ಪಿತನಂ ಸಮರ್ಚಿಸುವೊಲಾ
ಗುರುವತ್ಸಲತೆಯುಳ್ಳ ಪುತ್ರರಾರಾಧಿಸುಗುಮಾತನಂ ಸುಗುಣಗಣದಿಂ||

ಖಳದಾನವರ ಖಡ್ಗಧಾರೆಗಳ ಖಂಡಿಸಿದ ೪೪
ಪೊಳೆವ ವಗ್ಗಂಗಳಾಂತಿರ್ಪ ಸುರಕರಿಯಂತೆ
ಫಲಸಿದ್ಧಿಯಿಂದರಿಯೆಬರ್ಪುಪಾಯಂಗಳಿಂದೆಸೆವ ಸ್ವಪಸ್ನೀತಿಯಂತೆ||
ತೊಳಪ ಯುಗದೀರ್ಘಬಾಹುಗಳಿಂದೆ ತಳ್ತಿರ್ಪ
ಜಲಜಾಕ್ಷನಂತಿರೆ ತದೀಯಾಂಶಭೂತರೆನಿ
ಪಲಘುವಿಕ್ರಮರಾದ ಸಾಲ್ವರಿಂ ತನುಜರಿಂ ದೊಪ್ಪಿರ್ದನಾ ದಶರಥಂ||

---

# ಏಕಾದಶಸರ್ಗಂ.

ಸೂ:—ಮಡಿಪಿ ತಾಡಗೆಯ ಮತ್ತಂ ಕೌಶಿಕನ ಯಜ್ಞ
ದೆಡರನಣಗಿಸಿ ಗೌತಮನ ಸತಿಯಸುದ್ಧರಿಸಿ [ರಾಘವಂ||
ಮೃಡಧನುವ ಮುರಿದು ಸೀತೆಯ ಪಡೆದು ಪರಶುಧರಮುಟಪ ಕಳೆದಂ

ಪಿಂದುದಿನಮಾಗಮಿಸಿ ಕೌಶಿಕಂ ಮಖವಿಘ್ನ ೧
ವೃಂದಮಂ ಕಳೆಯಲ್ಕೆ ಚಲಶಿಖಂಡಕರಾಮ [ಮಂ||
ನಂ ದಯದೆ ಕಳುಪೆಂದು ದಶರಥನನೆರೆದನೀಕ್ಷಿಪರೆ? ಕಲಿಯೊಳ್ ಪ್ರಾಯ
ಅಂದು ಬುಧಸೇವ್ಯನಾದಾ ನೃಪಂ ತಾಂ ಕಷ್ಟ
ದಿಂದೆ ಪಡೆದಾ ತನಯನಂ ಸಲಕ್ಷ್ಮಣನನ್ನೆ [ಲಂ||
ತಂದ ಮುನಿಯೊಡನಟ್ಟಿದಂ ಪ್ರಾಣಭಿಕ್ಷೆಗಂ ಭಯಪಡುವುದೇಂ ರಘುಕು

ಧರಣಿಪಂ ಪುತ್ರರೀರ್ವರ ಗಮನಕಾಲದೊಳ್ ೨
ಪುರದ ಸರಣಿಯ ನಲಂಕರಿಪುದಕೆ ಬೆಸಸಿದೊಡ [ಸುರಿಸೆ ತಾಂ
ನಿರದೆ ಮಾರುತಯುತಾಂಬುದಕುಲಂ ಸುಮಸಹಿತಜಲವೃಷ್ಟಿಯಂ

ಗುರುವಿನಾಣತಿಯ ನಡೆಸಲ್ಕಾಗ ಧನುವಿಡಿದ
ತರುಳರುಭಯರ್ ತಂದೆಯಡಿಗೆರಗೆ ತಪ್ಪಿತಂ
ಸುರಿಸಿದಂ ಬಾಷ್ಪಬಿಂದುಗಳನಾನತಸುತರ ಮೇಲಗಲ್ಕೆಯ ನೆನೆಯುತಂ||

ಜನಕನೇತ್ರಾಂಬುವಿಂ ಶಿಖಿಯಣಂ ತೊಯ್ದ್ದಸೆಯೆ ೩
ತನುಭವರ್ ಧನುವಾಂತು ಋಷಿಯೊಡನೆ ಪೊರಮಡ
ಲ್ಕನುವಾಗೆ ಪುರಮಾರ್ಗತೋರಣಾವಳಿಯಾಗೆ ಪೌರಾಕ್ಷಿಮಾಲೆಯಾಗಂ||
ಮುನಿವರಂ ರಾಮನೊಡನಾ ಲಕ್ಷ್ಮಣನನೋರ್ವ
ನನೆ ಮುದದೆ ಕರೆದೊಯ್ಯಲೆಳಸಿದುದನರಿದು ತ
ಜ್ಜನಪನೀಯದೆ ಪಡೆಯ ಪರಕೆಯಿತ್ತನವರ್ಗೆ ರಕ್ಷಕಮದೆಂದು ಬಗೆದು||

ನಲವಿಂದೆ ತಾಯ್ಗಳಡಿದಾವರೆಗೆ ನಮಿಸುತ್ತ ೪
ಮಲಘುತೇಜದ ಮುನಿಯ ಪಥವಿಡಿದ ಕುವರರಾ
ನಳಿನಾಪ್ತಗತಿಯನನುಸರಿಪ ಮಧುರಾಧಮಾಸಂಗಳಂತೆಸೆಯೆ ಮತ್ತಂ||
ಅಲೆಗಳೋಲ್ ಚಲಿಪ ನಳತೋಳ್ಗಳಾ ಬಾಲಕ
ರ್ಕಳ ಚಪಲಗತಿಯುಮೆಳೆತನದೆ ಕಂಗೊಳಿಸಿದುದು
ಜಲದಾಗಮದೊಳುದ್ಧ್ಯಭಿದ್ಯನದಿಗಳ ನಾಮುಸದೃಶಚೇಷ್ಟಿತದಂದದಿಂ||

ಮಣಿಬದ್ಧಭೂಮಿಯೊಳ್ ಸಂಚರಿಸ ತಕ್ಕ ತ ೫
ತ್ತನುಭವರ್ ಜನನಿಯರ ಬಳಿಯೊಳಿರ್ಪಂತಣಂ [ಲದಿಂ||
ದಣಿದುದಿಲ್ಲಂ ಮಾರ್ಗದೊಳ್ ಮುನಿಪನೊರೆದಾ ಬಲಾತಿಬಲಮಂತ್ರಬ
ಜನಕಸಖನಾ ಪುರಾವಿದಕುಶಿಕಜಂ ಮತ್ತ
ಮನವದ್ಯಪೂರ್ವಕಥೆಗಳ ಪೇಳೆ ಪದಗಮನ
ಮನೆ ನೆನೆಯದಿರ್ದ ನಾ ವಾಹನೋಚಿತರಾಘವಂ ಸಾನುಜಂ ನಲ್ಮೆಯಿಂ||

ತಿಳಿಗೊಳಂಗಳ್ ಮಧುರಜಲದಿಂದೆ ಪಕ್ಕಿಗಳ್ ೬
ಕಲರವದೆ ಮತ್ತಮನಿಲಂಗಳುರೆ ಕಮ್ಮಲ [ಳು||
ರ್ಗಳ ರಜದೆ ಮುಗಿಲೋಳಿ ತಣ್ಣೆಳಲಿನಿಂದೆ ನೃಪಸುತರ ಸೇವಿಸೆ ಪಥದೊ
ಜಲಜಶೋಭಿತವಾರಿಗಳಿನಾದೊಡಂ ಶ್ರಮವ
ಕಳೆವ ತರುಗಳಿನಾದೊಡಂ ತಾಪಸವ್ರಜಂ [ಳು||
ತಳೆಯದಿಹ ಪ್ರೀತಿಯಂ ತಳೆದುದಾ ಕುವರರ ಪ್ರಿಯದರ್ಶನದೆ ವನದೊ

ಹರದಗ್ಧತನುಮದನ ನಾಶ್ರಮವ ನಾ ಧನು ೭
ರ್ಧರರಪಾಶರಥಿ ಸೇರ್ದು ತಾನಲ್ಲಿ ತತ್ಪಂಚ
ಶರನ ಸಮನೆನಿಸಿದಂ ನಿಜಚಾರುದೇಹದಿಂ ಕಾರ್ಯದಿಂದಲ್ತು ಮತ್ತಂ॥
ಬರುತಮಲ್ಲಿಂ ಸುಕೇತುಜೆಯಿರ್ಪ ಪಥಕೆ ತ
ನ್ನರಪಸುತರವಳ ಶಾಪದ ವಿಷಯಮಂ ಋಷಿಯಿ
ನರಿಮು ನೆಲಕೂರ್ದು ತುದಿಗಳ ಬಿಲ್ಗಳಿಗೆ ತಿರುವನೇರಿಸಿದರುರೆ ಲೀಲೆಯಿಂ॥

ಅವರ ಶಿಂಜಿನಿಯ ದನಿಗೇಳ್ದು ಬಹುಳಕ್ಷಪಾ ೮
ಚ್ಛವಿಯ ತಾಟಕೆ ಚಲಕಪಾಲಕುಂಡಲೆ ನಿಜಾ [ಮಿರದೆ॥
ಟವಿಯೊಳ್ ಬಲಾಕಾಳಿಯುತಮೇಘಮಾಲೆಯೊಲ್ ಮೆಯ್ವೇರ್ದು ಮತ್ತ
ಜವಗತಿಗೆ ನಡುಗೆ ಪಥದೊಳ್ ತರುಗಳಾ ದನುಜೆ
ಶವವಸ್ತ್ರದಾಚ್ಛಾದನದೆ ಬಂದು ತಾನುಗ್ರ
ರವದೆ ಮಾರಾಂತಳಾ ರಾಮುಂಗೆ ಪಿತೃಭುವಿಯಿನೆಳ್ದ ವಾತೌಘದಂತೆ॥

ನರರಕರುಳಿನ ರಶನೆ ಜೋಲ್ದಿರೆ ನಿತಂಬದೊಳ್ ೯
ಭರದೊಳುನ್ನಮಿತೈಕಭುಜದಂಡದಾ ದನುಜೆ
ಬರೆ ಕಂಡು ರಾಘವಂ ಸ್ತ್ರೀವಧದ ಕರುಣಮಂ ಬಿಡೆ ನಿಶಿತಬಾಣದೊಡನೆ॥
ತ್ವರಿತದಿಂವಾ ಶರಂ ತಾಟಕೆಯ ಕಲ್ಲೆದೆಯ
ನುರೆ ಪೊಕ್ಕು ಗೆಯ್ದು ರಂಧ್ರಮೆ ಪರಿಕಿಪೊಡೆ ರಕ್ಕ
ಸರ ದೇಶಮಂ ಪ್ರಥಮದೊಳ್ ಪುಗಲ್ಕನುಕೂಲಪಥಮಾಯ್ತು ದಂತಕಂಗೆ

ಶರದಳಿತಹೃದಯೆ ತಾಟಕೆ ಬೀಳೆ ಧರಣಿಗವ ೧೦
ಳಿರುತಿರ್ಪ ಕಾನನಸ್ಥಲಮಾತ್ರಮಲ್ಲದೆಯೆ
ನೆರೆ ಮೂಜಗವ ಗೆಲ್ದು ಸುಸ್ಥಿರತೆಯಾಂತ ರಾವಣನ ಸಿರಿಯುಂ ಕಂಪಿಸೆ
ಪರಿಕಿಸಲ್ಕಿಂತು ದುಸ್ಸಹಮಪ್ಪ ರಾಮಸುಮ
ಶರನಸ್ತ್ರದಿಂ ನಾಡೆ ಗಾಯಗೊಂಡಾ ನಿಶಾ
ಚರಿ ಗಂಧಯುತರುಧಿರಚಂದನವಿಲಿಪ್ತೆ ಸೇರ್ದಳ್ ಜೀವಿತೇಶಗೃಹಮಂ॥

ಬಳಿಕಮಿನನಿಂ ಸೂರ್ಯಕಾಂತಶಿಲೆ, ಯಿಂಧನಂ ೧೧
ಗಳ ಸುಡುವಕಾಂತಿಯಂ ಪಡೆವಂತೆ ನಿಜಶೌರ್ಯ [ಮತ್ತಂ॥
ಕೊಲಿದ ಮುನಿಯಿಂ ತಾಟಕಾಂತಕಂ ದನುಜಘ್ನಮಂತ್ರಾಸ್ತ್ರವಾಂತು

ಸಲಿ ಸೇರ್ದು ತದ್ರುಷಿಯುಸುರ್ದ ವಾಮನನ ನಿ
ರ್ಮಳಮೆನಿಪ್ಪಾಶ್ರಮವ ತಾಂ ಪ್ರಥಮಜನ್ಮಕೃತಿ [ಯೊಳು||
ಗಳ ನೆನೆಯದಿರ್ದೊಡಂ ರಾಘವಂ ಪರಮೋತ್ಸುಕವ ತಳೆದನಾ ನೆಲೆ

ತರುವಾಯದೊಳ್ ಪಲ್ಲವಾಂಜಲಿಯ ತರುಗಳಿಂ ೧೨
ವರಶಿಷ್ಯಸಜ್ಜಿತಾರ್ಚನ ಸುಸಾಮಗ್ರಿಯಿಂ [ಪಂ||
ಮೆರೆವ ತನ್ನಾಶ್ರಮವ ದರ್ಶನೋನ್ಮುಖಮೃಗವ ಸೇರ್ದ್ವನಾ ಮುನಿಪುಂಗ
ಸರಪಸುತರಾಗ ದೀಕ್ಷಿತನಾದ ತದ್ರುಷಿಯ
ನುರುವಿಘ್ನದತ್ತಣಿಂ ಪೊರೆಗುಮಸ್ತ್ರದೆ, ಜಗವ [ಣದಿಂ||
ಪರಿವಿಡಿಯೊಳುದಿಪಸೂರ್ಯೇಂದುಗಳ್ ತಮದತ್ತಣಿಂ ರಕ್ಷಿಪ್ರೊಲ್ ಕಿರ

ಬಂದುಗೆಯ ಪೂಗಳೊಲ್ ಸ್ಥೂಲಮೆನಿಸಿದ ರಕ್ತ ೧೩
ಬಿಂದುಗಳಿನಪವಿತ್ರಮಾಗೆ ವೇದಿಕೆಯೊರ್ಮೆ [ಟು||
ಬೆಂದುದದ ಕಂಡು ಕರ್ಮವನುಳಿದ ಯಾಜ್ಞಿಕಜನಂ ಸ್ರುಕ್ಸ್ರುಗಳನೆ ಬಿಸು
ಅಂದು ಜವದಿಂ ಲಕ್ಷ್ಮಣಾಗ್ರಜಂ ತೂಣೀರ
ದಿಂದಲಗನುಗಿಯುತೆತ್ತಿದ ಮೊಗದೆ ರಾಕ್ಷಸರ
ವೃಂದಮಂ ಗೃಧ್ರಪಕ್ಷಾನಿಲಚಲಧ್ವಜಮನೀಕ್ಷಿಸಿದನಾಗಸದೊಳು||

ಇತರರಂ ಬಿಟ್ಟು ಮುಖ್ಯವೈರಿರಾಕ್ಷಸರಿಗಧಿ ೧೪
ಪತಿಗಳೀರ್ವರನೆ ಗುರಿಗೆಯ್ದನಾ ದಾಶರಥಿ
ಯತುಳಿತಮಹೋರಗಧ್ವಂಸಿ ಗರುಡಂ ಲಕ್ಷಿಪನೆ? ಜಲವ್ಯಾಲಕುಲಮಂ||
ಅತಿಭರದೊಳಸ್ತ್ರವಿದನಾ ರಾಮ ನುಗ್ರಜವ
ಯುತಮಾರುತಾಸ್ತ್ರದಿಂ ಶೈಲಸಮತಾಟಕಾ
ಸುತನಪ್ಪ ಮಾರೀಚನಂ ಕೆಡಪಿದಂ ಜೀರ್ಣಪರ್ಣಮುಂ ಕೆಡುಪ್ರುವಂತೆ||

ಪೆಸರಿಂ ಸುಬಾಹುವೆಂಬಪರದನುಜಂ ಮಾಯೆ ೧೫
ಯೆಸಗುತಲ್ಲಲ್ಲಿ ಸಂಚರಿಸೆ ದಾಶರಥಿ ಖಂ
ಡಿಸುತೆ ಶರದಿಂದವನ ತನುವನಾಶ್ರಮದ ಪೊರಗಿರ್ಪ ಖಗಕುಲಕಂಚಿವಂ
ವಸುಧೇಶಸುತರಿಂತು ಯಜ್ಞವಿಘ್ನವ ನಿವಾ
ರಿಸೆ ಯಾಜ್ಞಿಕರ್ ಪೊಗಳುತವರ ರಣವಿಕ್ರಮವ [ಮುಖಕಾರ್ಯಮಂ||
ನೊಸೆದು ತಾಂ ಕ್ರಮದಿಂದೆ ಮುಗಿಸಿದರ್ ಮೌನಯುತಕುಲಪತಿಯು

ಮುನಿಪ ನವಭೃತಮುಜ್ಜನಂಗೆಯ್ದನಂತರಂ ೧
ಪ್ರಣತಿಕಂಪಿತಶಿಖಂಡಕರನಾ ಸೋದರರ
ಘನಮೋದದಿಂ ಪರಸಿ ಮೆಯ್ಮುಟ್ಟಿದಂ ಕುಶಕ್ಷತಪಾಣಿಯಿಂ ಬಳಿಕ್ಕಂ॥
ಜನಕರಾಜಂ ಯಜ್ಞಕುಜ್ಜುಗಿಸುತಂ ನಿಮುಂ
ತ್ರಣವ ತಾಂ ಕಳುಪೆ ತಚ್ಛಾಪವಿಷಯಶ್ರವಣ [ಶಿಗೆ
ಜನಿತೋತ್ಸುಕರ ಬಾಲಕರನವರ ನೊಡಗೊಂಡು ಋಷಿ ತೆರಳ್ದಂ ಮಿಥಿ

ಮುನಿಮೌಳಿಗೌತಮುನ ಸತಿಯಿಲ್ಲಿ ವಾಸವ ೧
ಕ್ಷಣಕಳತ್ರತೆಯಾಂತಳಾ ತಪೋವನದ ತ
ಣ್ಪಿನ ತರುಗಳಲ್ಲಿ ಸಂಜೆಯ ವಸತಿಯಂಗೆಯ್ದುರೊಲಪಿಂ ಗತಾಧ್ವರವರು
ಎನಿತೊ ದಿವಸಂಗಳಿಂ ಶಿಲೆಯಾಗಿ ಬಿಳ್ದ ತ
ದ್ಘನತಪೋಧನಪತ್ನಿ ಮರಳಿ ತನ್ನಯ ಚಾರು
ತನುವಾಂತಳಾ ಪಾಪಹರರಾಮಚರಣರೇಣುವಿನನುಗ್ರಹದೊಳಾಗಂ॥

ಜನನಾಥಮೈಥಿಲಂ ರಾಮಲಕ್ಷ್ಮಣರೊಡನೆ ೧
ಮುನಿ ಬಂದುದಂ ಕೇಳ್ದಿದಿರ್ಗೊಂಡನರ್ಘ್ಯವಿ [ತಪಸಿಯು
ತ್ತನಘಾರ್ಥಕಾಮಯುತಧರ್ಮಮೇ ಮೆಯ್ವೆತ್ತು ಬಂದೊಲಿರ್ಪಾ
ಜನಕನಗರೀಜನಂ ದಿವದಿಂದೆ ಭುವಿಗಿಳಿದು
ಮಿನುಗುವ ಪ್ರಸರ್ಪಸುಗಳಂತಿರ್ಪ ರಾಘವರ
ಘನರೂಪರಸನ ಕಣ್ಗಳಿನೀಂಟಿ, ಪಕ್ಷ್ಮಪಾತದ ವಂಚನೆಗೆ ಮುಳಿವುದು

ಕ್ರತುಕೃತಿ ಸಮಾಪ್ತಿಯಂ ಪೊಂದೆ ಸಮಯಜ್ಞನಾ ೧
ಸುತಕುಶಿಕಕುಲವರ್ಧನಂ ಮೈಥಿಲಂಗೊರೆದ
ನತಿಮೋದದಿಂದೆ ರಾಮಂ ಶಿವಶರಾಸನವನೀಕ್ಷಿಸಲ್ಕೆಳಸಿರ್ಪಪಂ॥
ಕ್ಷಿತಿಗೆ ಪೆಸರಾದ ಕುಲದಾ ಕುವರನನುಪಮಾ
ಕೃತಿಯನುರೆ ಕಂಡು ಮಣಿಸಲ್ಕಸದಳದ ಧನು
ಸ್ಥಿತಿಗೆ ಮಿಗೆ ಚಿಂತಿಸಿಯುಮಾಜನಕನಾತ್ಮಜಾಶುಲ್ಕದಿಂ ಬಾಧೆಯಾಂತ

ವರಮುನಿಪ ಕೇಳ್ ಮಹಾವಾರಣಸಮೂಹಕ್ಕ ೨
ಮರಿದಪ್ಪ ಕಜ್ಜದೊಳ್ ಬರಿದೆ ಸಾಹಸಪಡುವ
ಕಂಠಾಬಕಕ್ಕೊಪ್ಪಿಗೆಯನೀಯಲೆಳಸೆನೆನುತಂ ಜನಕನಿರದೆ ಮತ್ತಂ॥

ಹರಧನುವದೆನಿತೋ ಧನುರ್ಧರಮಹೀಶರ್ಗೆ
ಪಿರಿದಪ್ಪ ನಾಣನೊದವಿಸೆ ಗುಣವಿಘರ್ಷಣದೊ
ಳುರೆ ಕಠಿಣವಾದನಿಜಬಾಹುಗಳ ಪಳಿಯುತಂ ಪೋದರವರೆಂದೊರೆದನು॥

ಎಲೆ ನೃಪತಿ ಕೇಳೀ ಕುಮಾರ ನುರುಬಲವ ಮೇಣ್ ೨೧
ಪಲತೆರದ ಬಾಯ ಮಾತೇಕೆ ಗಿರಿಯೊಳ್ ಪವಿಯ [ವಿನಂ|
ಬಲಮದೆಂತಂತೆ ಧನುವೊಳೆ ಕಾಣ್ಬುದಿವನಾರ್ಪು ನಿನಗೆಂದು ಮುನಿ ನುಡಿ
ಸಲೆ ತನ್ನಯಾಪ್ತನಿಂತೊರೆದ ನುಡಿಯಿಂದೆಮಿಂ
ಬುಳುವಿನನಿತಿರ್ಪಗ್ನಿಯೊಳ್ ದಹಿಪ ಶಕ್ತಿ ತಾಂ
ನೆಲಸಿದಂತಾತರುಳನೊಳಮಧಿಕಬಲಮಿರ್ಪುದೆಂದು ಜನಕಂ ನಂಬಿದಂ॥

ವರಕಾರ್ಮುಕವ ತರಲ್ಕಾಗ ನೂರಾರು ಪರಿ ೨೨
ಚರರ ಚಯಮಂ ಕಳುಪಿದಂ ಮೈಥಿಲಂ ಸಗ್ಗ [ಯಂ॥
ದರಸು ತೇಜೋಮಯಶರಾಸನವ ಪಡೆಯಲಟ್ಟಿದತೆರದೆ ಮುಗಿಲೋಳಿ
ಪುರಮಥನನಾವುದರೊಳಿಟ್ಟು ಮಾರ್ಗಣವ ತಾ
ನಿರದೋಡುವಧ್ವರಮೃಗಕ್ಕೆಚ್ಚನೋ ಮಲಗಿ ]ಘವಂ॥
ದುರಗೇಂದ್ರನೊಲ್ ಭಯಪ್ರದಮಪ್ಪ ತದ್ಧನುವ ನೋಡಿ, ಪಿಡಿದಂ ರಾ

ಎವೆಯಿಕ್ಕದಂತಚ್ಚರಿಯೊಳಲ್ಲಿ ನೆರೆದವರ್ ೨೩
ತವೆ ನೋಡೆ ಮನಸಿಜಂ ಪೂವಿಲ್ಗೆ ತಿರುವೇರಿ
ಸುವತೆರದೆ ಚಾಪಮನಧಿಜ್ಯಮಂ ಗೆಯ್ದನತಿಸುಲಭದಿಂ ರಾಮನಾಗಂ॥
ಕುವರನತಿಮಾತ್ರಕರ್ಷಣದೊಳಾ ಬಿಲ್ಮುರಿಮು
ಪವಿಪರುಷನಿಸ್ವನವನೆಸಗೆ ದೃಢಮನ್ಯುಭಾ [ದುದು॥
ರ್ಗವನಿಗದು ಮರಳಿ ತಾಂ ಕ್ಷಾತ್ರಕುಲಮೈದೆ ಪುಟ್ಟಿದುದನರುಪುವೊಲೆಸೆ

ಹರಧನುರ್ಭಂಗದೊಳ್ ರಾಮನಾರ್ಪಂ ಕಂಡು ೨೪
ಮಿರದವನ ಶೌರ್ಯಶುಲ್ಕವ ಪೊಗಳಿ ಮೆಯ್ವೆತ್ತ
ಸಿರಿಯಂತಿರಿರ್ಪಯೋನಿಜೆಯಾತ್ಮಭವೆಯ ನಾಬಾಲಕಂಗೀಯಲೆಳಸಿ॥
ವರಸತ್ಯವಾಕ್ಯಮೈಥಿಲ ನಧಿಕತೇಜದಿಂ
ಮೆರೆವ ಕೌಶಿಕನ ಸನ್ನಿಧಿಯೊಳಾ ರಘುವಂಶ
ದರಸುಗುವರಂಗೆ ಸೀತೆಯನೀಯಲೊಪ್ಪಿದಂ ವಹ್ನಿಸಾಕ್ಷಿಕನಂತಿರೆ॥

ನಿಮಿಕುಲದ ಕೊಡಗೂಸ ಕೊಂಡು ಮದ್ಬಂಧುಭಾ ೭
ವಮನೊಲವಿನಿಂದೊಪ್ಪವೇಳ್ಕುಮೆಂದರುಪಲ್ಕೆ
ಸುಮಹಿತಪುರೋಹಿತನನಾ ಮೈಥಿಲಂ ಕಳುಪಿದಂ ಕೋಸಲೇಂದ್ರನೆಡೆಗ
ವಿಮಳದಶರಥನು ಮನುರೂಪಕನ್ಯಾನ್ವೇಷ
ಣಮನೆಸಗುತಿರೆ ಬಂದನನುಕೂಲವಾಗ್ವಿಜನು
ಮಮರತರುಫಲದಂತೆ ಸುಕೃತಿಗಳ ಕಾಂಕ್ಷೆ ತತ್ಕಾಲದೊಳೆ ಫಲಿಸುತಿರ್ಕು

ಸಲಿಪ ಸತ್ಕಾರದಿಂ ನಲಿದ ಭೂಸುರನ ನುಡಿ ೭
ಗಳ ಕೇಳ್ದು ದಶರಥಂ ಬಲವೈರಿಮಿತ್ರ ನಾ [ಗಿ
ಗಳೆ ಮುದದೆ ಪಯಣಗೊಂಡಂ ಪಡೆಯ ದೂಳಿ ಮಾರ್ತಾಂಡತೇಜವನ
ಬಳಸಿ ನಂದನತರುಗಳಿಗೆ ಪೀಡೆಯೆಸಗೆ ನಿಜ
ಬಲಮಾನೃಪಂ ಮಿಥಿಲೆಯಂ ಸೇರ್ದ್ವನಾ ನಗರಿ
ನಲವಿನಾಬಾಧೆಯಂ ಸಹಿಸಿದುದು ಲಲನೆ ಪತಿಚೇಷ್ಟೆಯಂ ಸಹಿಸುವಂ

ವರುಣೇಂದ್ರಸಮಜನಕದಶರಥರ್ ಕೂಡಿ ತಾಂ
ವಿರಚಿತಕುಲಾಚಾರರಾಗಿ, ನಿಜಮಹಿಮೆಗನು
ಸರಿಸಿ ಪುತ್ರೀಪುತ್ರರುದ್ವಾಹಕಾರ್ಯಕ್ಕೆ ತೊಡಗಿದರ್ ಕಡುನಲ್ಮೆಯಿಂ॥
ಧರಣಿಸುತೆಯಂ ರಾಮ ನವಳನುಜೆಯೂರ್ಮಿಳೆಯ
ನುರುವಿಕ್ರಮಂ ಲಕ್ಷ್ಮಣನುಮಧಿಕತೇಜರಾ
ಭರತಶತ್ರುಘ್ನರ್ ಕುಶಧ್ವಜನ ತನುಭವೆಯರಂ ಲಗ್ನವಾದರೊಲವಿಂ॥

ನವವಧೂಯುಕ್ತರಾ ನಂದನರ್ ನಾಲ್ವರುಂ
ಕುವಲಯಾಧೀಶದಶರಥನ ಸತ್ಫಲಸಮುದ
ಯವ ಪೊಂದಿದಾ ಸಾಮದಾನವಿಧಿಭೇದದಂಡಂಗಳಂತಿರೆ ರಾಜಿಸೆ॥
ತವೆ ಕೃತಾರ್ಥತೆಯೊಂತರರಸುಗುವರರು ಮರಸು
ಗುವರಿಯರುಮನ್ಯೋನ್ಯಸಂಗದಿಂದಾಗ ತೇ
ಜವನಾಂತುದಾವಧೂವರಮೇಳನಂ ಪ್ರತ್ಯಯಪ್ರಕೃತಿಯೋಗದಂತೆ॥

ಕಡುಕೂರ್ಮೆಯಿಂದಿಂತು ನಾಲ್ವರಾತ್ಮಭವರ್ಗೆ
ನಡಸಿ ಲಗ್ನವ ಮಿಥುಲೆಯೊಳ್ ದಶರಥಂ ಪುರಿಗೆ [ಕ
ಸಡಗರದೆ ಮರಳಿದಂ ಮೂರಿರುಳುಮೊಡಸಿರ್ದು ಮೈಥಿಲಂ ಪೋಗೆ ಬ

ಬಡವೇರ್ದು ಪರಿವ ತೊರೆ ಕೆಲದ ಭೂಮಿಗೆ ಕೀಡ
ನೊಡರಿಸುವೊಲಧ್ವದೊಳ್ ಧ್ವಜಕುಜಸಮೂಹಮಂ
ಕೆಡಪಿ ತನ್ನೃಪನ ಪಡೆಗೆಡರನೊದಗಿಸಿತು ಪ್ರತೀಪಗಂ ಚಂಡಾಶುಗಂ॥

ತದನಂತರಂ ಭಯಪ್ರದಪರಿಧಿಮಂಡಲಾಂ ೩೦
ತದ ತರಣಿ ತೋರ್ದನಾಗರುಡನಿಂ ಮೃತಿಯ ಪೊಂ
ಪಿದ ಭುಜಂಗದ ಶಿರೋಭ್ರಷ್ಟಮಣಿ ತತ್ಕಾಯವೇಷ್ಟನದೆ ಕಾಣ್ಬೊಲಾಗಂ
ಪುದಿದ ಸಂಜೆಯ ಮುಗಿಲ್ ರಕ್ತಾರ್ದ್ರವಸ್ತ್ರದಂ
ಪದೆ ತೋರೆ ತಾಂ ಶ್ಯೇನಪಕ್ಷಧೂಸರಕುಂತ
ಳದ ದಿಗಂಗನೆಯುರವಲೋಸಾನರ್ಹರಾದರ್ ಪುಷ್ಪವತಿಯುರಂತೆ॥

ತರಣಿ ನೆಲಸಿರ್ದ ದೆಸೆಯೊಳ್ ಗುಂಪುಗೂಡಿ ಭೀ ೩೧
ಕರರವದೆ ಕೂಗಿದವು ನರಿಗಳಖಿಳಕ್ಷತ್ರಿ
ಯರ ರಕ್ತದಿಂದೆ ಪಿತೃತರ್ಪಣಂಗೆಯ್ವ ಭಾರ್ಗವನ ಕರೆನಂತಿರಾಗಂ॥
ಪರಕೃತ್ಯವಿದದಶರಥಂ ದುರ್ನಿಮಿತ್ತ್ಯದೀ
ಪರಿಯ ಕಂಡದಕೆ ಶಾಂತಿಕ್ರಿಯೆಯ ಕೇಳೆ ನಿಜ
ಗುರುವನಾ ಮುನಿ ಶುಭಾಂತಮಿದೆಂದು ಪೇಳ್ವ ಕಳೆದಂ ತನ್ಮಹೀಸನಳಲಂ

ಅನಿತರೊಳ್ ಪಡೆಯ ಮುಂಗಡೆಯೊಳಾವಿರ್ಭವಿಸಿ ೩೨
ತನುಪಮಿತಮಾದ ತೇಜೋರಾಶಿಯೊಂದದೇ
ಮನುಜರೂಪಧೆ ಕಡೆಗೆ ತೋರ್ಪುದಾ ಸೈನಿಕರ ಸಂಮಾರ್ಜಿತಾಕ್ಷಿಗಳ್ಗೆ॥
ಜನಕಾಂಶಚಿಹ್ನಮೆನಿಪುಪವೀತಮಮಂ ಮತ್ತೆ
ಜನನಿಯಂಶವನರುಪುವುರುಧನುವ ಧರಿಸಿದಾ [ದೊಳೆಸೆದಂ॥
ಘನಪುರುಷನಿಂದುಯುತಸೂರ್ಯನೊಲ್ ಫಣಿಯುಕ್ತಚಂದನದ್ರುಮ

ಘನರೋಷದಿಂ ಮೇರೆದಪ್ಪಿರ್ದ ತಂದೆಯ ೩೩
ಪ್ಪಣೆವಿಡಿದು ಕಡಿದು ಜನನಿಯ ಕಂಪಿಸುವ ಶಿರವ [ಷಂ॥
ಗಣಿಸೆ ತಾಂ ಕರುಣಮಂ ಗೆಲ್ದ ಬಳಿಕಂ ಧರಣಿಯುಂ ಗೆಲ್ದನಾವ ಪುರು
ಮಿನುಗುವನದಾವವೀರಂ ಮತ್ತೆ ತನ್ನ ದ
ಕ್ಷಿಣಕರ್ಣದಕ್ಷಮಾಲಾವ್ಯಾಜದಿಂ ಕ್ಷಾತ್ರ [ರದಿಂ।
ಗಣವನಿರ್ಪ್ಪತ್ತೊಂದುಸೂಳ್ ಕೊಂದ ಸಂಖ್ಯೆಗಳ ಗಣನೆಯಂ ತಾಳ್ದತೆ॥

ಪಿತನ ವಧೆಯಿಂದೊಗೆದ ಕೋಪದಿಂ ಕ್ಷತ್ರಕುಲ ೩೪
ಹತಿಗೆ ದೀಕ್ಷಿತನಾದ ತದ್ಭೃಗುಜನಂ ಬಾಲ [ಶರಥಂ॥
ಸುತರನೊಡಗೊಂಡ ತನ್ನಯ ದಶೆಯುಮಂ ನೋಡಿ ಚಿಂತೆಗೊಂಡಂ ದ
ಕ್ಷಿತಿಧವಂಗಾತಂಗೆ ತನುಜನೊಳಮುನ್ನತಾ
ಹಿತನೊಳಿರ್ಪಾ ಸವೃಶರಾಮನಾಮಂ ನೋಡೆ [ಯಂತೆ॥
ಹಿತದಂ ಭಯಪ್ರದಮುಮಾಯ್ತು ಹಾರೋರಗದ್ವಯಗಮಣಿಜಾತಿ

ಪರಶುಧರನಿರದರ್ಘ್ಯಮರ್ಘ್ಯಮೆಂದೊರೆಯುವಾ ೩೫
ದೊರೆಯ ನೋಡದೆಯೆ ತಾಂ ಕ್ಷತ್ರವಿಷಯಕಕೋಪ
ದುರಿಯಂ ಕೆದರ್ವ ಸಮುದಗ್ರತಾರಕೆಯ ದಿಟ್ಟಿಯ ರಾಮನೆಡೆಗಟ್ಟಿದಂ॥
ಧುರಕೆ ಕಾಲ್ಗೆದರಿ ಮತ್ತಂ ಧನುವ ಪಿಡಿದು ಕೈ
ಬೆರಳ ಸಂದಿನೊಳಲಗನಿಕ್ಕಿ ತದ್ಭಾರ್ಗವಂ [ತಾಂ॥
ತೊರೆದು ಭಯಮಂ ಮುಂದೆ ನಿಂದಿರ್ದ ತದ್ರಾಘವಂಗೊರೆದನೀತೆರದೆ

ಎನಗೆ ಪಿತೃಹನನದಿಂ ದ್ವೇಷಿಯಾದಾ ಕ್ಷಾತ್ರ ೩೬
ಗಣವ ಕೊಂದತಿಶಾಂತನಾದನಾಂ ದಂಡಘ
ಟ್ಟನದೆ ಸುಪ್ತಾಹಿಯೆಂತಂತೆ ತಾವಕವಿಕ್ರಮಾಕರ್ಣನದೆ ಕನಲ್ದೆಂ॥
ಜನಪಸುತ ಕೇಳಿನ್ನೆವರಮನ್ಯನೃಪಕುಲಂ
ಮಣಿಸದಾ ಮೈಥಿಲನ ಧನುವ ಮುರಿದಿರ್ಪ ನೀಂ
ಘನತರಮೆನಿಪ್ಪೆನ್ನ ಶೌರ್ಯಶೃಂಗದ ಭಂಗಮಂ ಗೆಯ್ದುಯೆಂದರಿವೆನಾಂ॥

ರಾಮನೆಂಬೀ ಪೆಸರನೆತ್ತಿ ತಾನಿನ್ನೆವರ ೩೭
ಮೀಮಹಿಯೊಳೆನಗೆ ಮಾತ್ರಂ ಸಲ್ಲುತಿರ್ದುದಾ
ನಾಮಮೀಗಂ ನಿನ್ನಯುದಯದಿಂ ವಿಪರೀತಮಾಗಿ ಸಾಣಿತ್ತುದೆನಗೆ॥
ಆಮಹೀಧರದೊಳಂ ಕುಂಠಿತಮೆನಿಸದಿರ್ಪ
ಭೀಮಾಸ್ತ್ರವಾಂತೆನಗೆ ಸಮರಿಪುಗಳೀರ್ವರೇ
ಕಾಮಧೇನುವಿನ ಕರುವಂ ಕಳ್ದ ಹೈಹಯಂ ಜನಪನಸುವಪಹರಿಪ ನೀನುಂ॥

ಅದರಿಂದಮೆನ್ನ ಶೌರ್ಯಂ ಕ್ಷತ್ರಕುಲಕಳಿವ ೩೮
ನೊದಗಿಸಿರೆಯುಂ ನಿನ್ನ ಗೆಲದೆ ಮುದವೀಯದೆನೆ [ಯುತ್ತೆ.
ಗದು ತೃಣದೊಳುರಿವಂತೆ ವನಧಿಯೊಳಮುಜ್ಜಲಿಸಲದೆ ವಹ್ನಿಮಹಿಮೆ

ಮದನಾರಿಧನುವ ಹರಿಬಲದೆ ನಿಸ್ಸಾರವಾ
ದುದ ಮುರಿದೆ ನೀನದಂ ತಿಳಿ ಮರುಳೆ ನದಿಯ ವೇ
ಗದೆ ಸಡಿಲ್ದಿರೆ ಬೇರ್ಗಳಾ ತೀರತರುವ ನುರುಳಿಪುದಲ್ತೆ ಮೃದುವಾತಮುಂ||

ಸರಪಸುಕುಮಾರ ನೀನೆನ್ನ ಬಿಲ್ಗೊಂಡಿದಕೆ ೩೯
ತಿರುವಿಟ್ಟು ಸರಳ ಸಂಧಿಸಿ ಸೆಳೆಯಿದಂ ಸಾಕು [ಬೆಂ||
ಧುರಮದಂತಿರ್ಕೆ ಮತ್ಸದೃಶಭುಜಬಲನಾದ ನಿನಗೆ ನಾಂ ಸೋಲ್ದಿನೆಂ
ತರುಳ ನೀನಂತೆಸಗದೆನ್ನ ಕಿಡಿಗೆದರುವೀ
ಪರಶುಧಾರೆಗೆ ಭೀತನಾಗಿರ್ದ ಪಕ್ಷದೊಳ್ [ಸು||
ಬರಿದೆ ಗುಣಘಾತಕಠಿಣತೆಯಾಂತ ಕೈಗಳಂ ಮುಗಿದಭಯಮುಂ ಯಾಚಿ

ಅಸಮಭೀಕರರೂಪಪರಶುಧರನಿಂತೊರೆಯೆ ೪೦
ನಸುನಗೆಗೆ ಚಲಿಪ ಚಂದುಟಿಯ ರಾಮಂ ಭೃಗುಜ
ವಶವರ್ತಿಚಾಪಸಂಗ್ರಹಣಮನೆ ಸಮುಚಿತೋತ್ತರಮನಾಗಿಸಿದನಾಗಂ||
ಮಿಸುಪ ನಿಜಪೂರ್ವಾವತಾರದಾ ಬಿಲ್ಗೊಂಡು
ದಶರಥಾತ್ಮಜನಾಂತನತಿಚಾರುಶೋಭೆಯಂ [ದಿನ್ನಂ||
ಪೊಸಮುಗಿಲೆ ಕೇವಲಂ ಸುಭಗಮದು ಸುರಪಾಯುಧದೆ ಕೂಡೆ ಪೇಳ್ವು

ಉರುಬಲಾನ್ವಿತರಾಘವಂ ಜವದೆ ಬಿಲ್ದುದಿಯ ೪೧
ಧರೆಯ ಮೇಲಿಟ್ಟದನಧಿಜ್ಯಮುಂ ಗೆಯ್ವಿನಂ
ನರಪಾರಿಭಾರ್ಗವಂ ಧೂಮಶೇಷಾಗ್ನಿಯಂತೊಡನೆ ನಿಸ್ತೇಜನಾದಂ||
ನೆರೆದ ಜನತೆಗೆ ತೋರ್ದರನ್ಯೋನ್ಯಸಂಮುಖದೊ
ಳಿರುತವರ್ ಸಂವರ್ಧಮಾನಪರಿಹೀನರುಚಿ
ಧರರಾಗಿ ತಾಮೀರ್ವರಾಗ ಪಾರ್ವಣದಿನಾತ್ಯಯಚಂದ್ರಸೂರ್ಯರಂತೆ||

ಹರಸೂನು ವಿಕ್ರಮಂ ರಾಘವಂ ಚಾಪದ ೪೨
ಲ್ಲಿರಿಸಿರ್ದ ತನ್ನಮೋಘಾಸ್ತ್ರಮಂ ಬಲವಿಳಿದ [ರ್ದಂ||
ಪರಶುಧರವದನಮುಮನೀಕ್ಷಿಸುತೆ ಕರುಣಾದ್ರ್ರಹೃದಯನಾಗಿಂತುಸು
ಪರಮಾಪರಾಧಿಯಾಗಿರ್ದೊಡಂ ಪಾರ್ವನಾ
ಗಿರುವ ನಿನ್ನಂ ನಿರ್ದಯದೆ ಕೊಲ್ಲಲಾರೆ ನಾಂ [ಸು ನೀಂ||
ಶರಕೆ ಲಕ್ಷ್ಯಂ ನಿನ್ನಗಮನಮೋ ಮೇಣ್ ಮಖಾರ್ಜಿತಲೋಕಮೋ ಕಥಿ

ಎನೆ ಮುನಿಪನಾಗ ಮಾರ್ನ್ನುಡಿದನೆಲೆ ಪರಮಪುರು ೪೩
ಷನೆ ಧರಣಿಗೈತಂದ ನಿನ್ನ ವೈಷ್ಣವತೇಜ [ಯಂ॥
ಮನೆ ನೋಡಲೆಳಸಿ, ಮುಳಿಸಂ ನಿನಗೆ ಪುಟ್ಟಿಸಿದೆನರಿಯೆನೇಂ ತ್ವನ್ಮಹಿಮೆ
ಕನಲುರಿಯೊಳೆನ್ನ ಪಿತೃರಿಪುಗಳಂ ಸುಟ್ಟು ಮೇಣ್
ವನಧಿವೇಷ್ಟಿತಧರೆಯ ಸತ್ಪಾತ್ರಕಿಟ್ಟೆರ್ಪ [ಗಂ॥
ನನಗೆ ಪರಮಾತ್ಮ ನಿನ್ನಿಂದೆ ಬಂದಪಜಯಮೆ ತಾಂ ಶ್ಲಾಘ್ಯಮಾದುದೀ

ವರಪುಣ್ಯತೀರ್ಥಯಾತ್ರೆಯ ಬಯಸುತಿರ್ಪೆನ್ನ ೪೪
ಸರಣಿಯಂ ರಕ್ಷಿಸೈ ಬುಧತಿಲಕ ನೀನಿನ್ನು
ಸುರಲೋಕಪಥವ ತಡೆಗೆಯ್ದೊಡಂ ದುಃಖಮಿಲ್ಲಂ ಭೋಗಕೆಳಸದೆನಗೆ॥
ಪರಶುಧರ ನಿಂತುಸುರ್ದುದನಪ್ಪುಕೆಯ್ದು ನಿಜ
ಶರವನೆಚ್ಚಂ ಪೂರ್ವಮುಖನಾಗಿ ರಾಘವಂ
ಸರಳದಾ ಭೃಗುಜಕೃತಪುಣ್ಯಸಲ್ಲಭ್ಯನಾಕಾಧ್ವಕ್ಕೆ ಪರಿಘಮಾಯ್ತು॥

ಕುಲಭೂಷದಾಶರಥಿಯಾದೊಡಂ ಕ್ಷಮಿಸೆಂದು ೪೫
ಸಲೆ ವಂದಿಸಿದನಾತಪೋನಿಧಿಯ ಚರಣಕ್ಕೆ [ಲ್ತಿಂ॥
ಕಲಿಗಳ್ ಸ್ವಶಕ್ತಿಜಿತರಿಪುಗಳೊಳ್ ತೋರ್ದ ವಿನಯಮೆ ಕೀರ್ತಿಚಿಹ್ನಮು
ಒಲಿದೆನ್ನ ಮಾತೃಸಂಬಂಧರಾಜಸಗುಣವ
ಕಳೆದು ಪಿತೃಸಂಬಂಧಶಾಂತಿಯಿತ್ತುದರಿಂದ
ಮೇಲೆ ದೇವ ನೀಂಗೆಯ್ದುದನವದ್ಯಫಲನಿಗ್ರಹಮೆ ನನಗನುಗ್ರಹಮಿದು॥

ತಳುವದಿನ್ನಾಂ ಪೋಪೆನೆಡರಡಸದಿರ್ಕೆ ಸುರ ೪೬
ಕುಲಕಾರ್ಯದಲ್ಲಿ ತೊಡಗಿರ್ದ ನಿನಗೆಂದು ಮುನಿ
ತಿಲಕನಾ ಲಕ್ಷ್ಮಣಾನ್ವಿತರಾಘವಂಗೊರೆದು ಮೆಯ್ಗರೆಏನಂ ದಶರಥಂ॥
ಗೆಲುವಾಂತರಾಮನಂ ಮರಳಿ ಜನಿಸಿದನೆಂದು
ತಿಳಿಯುತವನಂ ನೇಹದಿಂದಪ್ಪಿ ಕಳೆದಳಲ
ನಲವನಾಂತಂ ವೃಷ್ಟಿಪಾತಮಂ ಪಡೆದಂತೆ ದಾವಾಗ್ನಿತಪ್ತವೃಕ್ಷಂ॥

ಬಳಿಕಂ ಪುರಾರಿಸನ್ನಿಭದಶರಥಾವನಿಪ ೪೭
ತಿಲಕನಖಿಳರ್ವೆರಸಿ ರಮ್ಯಪಟಗೃಹದಲ್ಲಿ
ನೆಲಸುತಂ ಪಥದಲ್ಲಿ ಕೆಲವಿರುಳ್ಗಳನಿಂತು ಪಯಣದೊಳೆ ಕಳೆಯುತಾಗಂ॥

ನಲವಿಂದೆ ಪೊಕ್ಕನಾಸೀತೆಯಂ ನಡೆನೋಡ
ಲೆಳಸಿದಂಗನೆಯರಕ್ಷಿಗಳಿಂದೆ ಕುವಲಯಾ
ಕಲಿತಂಗಳಂತಿಹ ಗವಾಕ್ಷಂಗಳಿಂದೆ ಕಂಗೊಳಿಪಯೋಧ್ಯಾನಗರಿಯಂ||

---

# ದ್ವಾದಶಸರ್ಗಂ.

ಸೂ:— ಜನಕವಾಕ್ಪಾಲನೆಗೆ ವನಕೈದಿ ಕಾಕಾದಿ
ದನುಜರಂ ಗೆಲ್ದು ಸುಗ್ರೀವಸಖ್ಯವ ಗಳಿಸಿ [ರಾಘವಂ||
ಜನಕಜೆಯ ಕಳ್ದ ರಾವಣನ ಸಂಹರಿಸುತವಳಂ ಪೊಂದಿದಂ

ಧರಣೀಶದಶರಥಂ ಪೊಳ್ತರೆಯ ದೀವಿಗೆಯು ೧
ತೆರದೆ ತಾನೈದೆ ವಿಷಯಸ್ನೇಹವೆಲ್ಲವಂ
ಪರಿಭೋಗಿಸುತೆ ದಶಾಂತವ ಪೊಂದುತಾಸನ್ನನಿರ್ವಾಣನಾಗಿರ್ಪನಂ||
ಜರೆಯದಾ ಕೈಕೇಯಿಯಿಂ ಶಂಕೆಗೊಂಡು ತ
ನ್ನರಪತಿಯ ಕರ್ಣಮೂಲವ ಸೇರ್ದು ರಾಮಂಗೆ
ಸಿರಿಯನಿರದರ್ಪಿಸೇದೊರೆವುದೆನೆ ರಂಜಿಸಿತು ನೆರೆಗೂದಲಿನ ನೆವದೊಳು||

ಶ್ರೀರಾಮರಾಜ್ಯಪಟ್ಟಾಭಿಷೇಕದ ವಾರ್ತೆ ೨
ಪೌರರೆಲ್ಲರ್ಗೆ ತಂದಿತ್ತುದತಿಜವದಿಂದೆ
ಭೂರಿಸಂಮುದವ ನುಪವನದಖಿಳತರುಗಳ್ಗೆ ನಲವೀವ ಕುಲ್ಯದಂತೆ||
ಕ್ರೂರನಿಶ್ಚಯದ ಕೈಕೇಯಿಯೂ ಅಭಿಷೇಕ
ಸಾರೋಪಕರಣಮಂ ದೂಷಿತಮನಾಗಿಸಿದ
ಳಾ ರಾಜದಶರಥನ ಶೋಕೋಷ್ಣಬಾಷ್ಪಂಗಳಿಂಬಿಡದೆ ತತ್ ಕ್ಷಣದೊಳ್||

ಇರದೆ ಸಂತೈಸೆ ಪತಿಯಾತನಿಂ ಮುಂಪಡೆದ ೩
ವರವೆರಡನಾ ಚಂಡಿ ಕಾರಿದಳ್ ವಜ್ರ ತಾಂ [ಯುಗಮಂ||
ಸುರಿದ ಮಳೆಯಿಂ ನಾಂದ ಭೂವನಿತೆ ಬಿಲಮುಖದೆ ಕಾರಿದೋಲ್ ಸರ್ಪ
ಪರಿಕಿಸಲ್ಕೊಂದು ವರದಿಂದೆ ಪದಿನಾಲ್ಕುವ
ತ್ಸರದ ವನವಾಸಮಂ ರಾಮಂಗೆ ಕೇಳ್ದುಳಿದ
ವರದೆ ಭರತಂಗೆ ವೈಧವ್ಯೈಕಫಲವ ಸಂಪದವ ನಿಚ್ಛಿಸಿದಳವಳು||

ತಂದೆ ಮೊದಲಿತ್ತ ಮಹಿಯಂ ಪರಿಗ್ರಹಿಸಲಳ ೪
ಲಿಂದೊಡಂಬಟ್ಟನಾ ಬಳಿಕಂ ವನಕ್ಕೆ ಪೋ
ಗೆಂದು ಪೇಳ್ದಾ ಜನಕನಾಜ್ಞೆಯಂ ರಾಮನತಿಮುದದಿಂದೆ ಕೈಕೊಂಡನು॥
ಚಂದದಿಂ ಮಂಗಳಕ್ಷೌಮಯುಗಮಂ ಧರಿಸು
ವಂದು ಮೇಣ್ ನಾರುಡೆಯನುಡುವಂದು ತದ್ರಾಜ
ನಂದನಂಗಿರ್ದೇಕವಿಧದ ಮುಖರಾಗಮಚ್ಚರಿಯಿತ್ತುದಖಿಳಜನಕೆ॥

ಜನಕನಂ ಸತ್ಯವಿಚ್ಯುತನನಾಗಿಸದೆ ತಾಂ ೫
ಜನಕಜಾಲಕ್ಷ್ಮಣರನೊಡಗೊಂಡು ಕೌಸಲ್ಯೆ
ಯಣುಗನಾ ದಂಡಕಾರಣ್ಯಮಂ ಸಜ್ಜನರ ಮನಮುಮಂ ಪೊಕ್ಕನಾಗಂ॥
ತನುಭವವಿಯೋಗದುಃಖಿತನಾದ ರಾಜನುಂ
ತನಗಾದ ನಿಜಕರ್ಮಭವಶಾಪಮಂ ಸ್ಮರಿಸಿ
ತನುಪರಿತ್ಯಾಗಮೇ ತನ್ನಯಾ ತಾಪಕ್ಕೆ ಪರಿಹಾರಮೆಂದು ಬಗೆದಂ॥

ಅಳಿಯೆ ದಶರಥನೃಪಂ ತತ್ತನುಜರೀರ್ವರುಂ ೬
ನೆಲಸೆ ವನದಲ್ಲಿ ರಂಧ್ರಾನ್ವೇಷಣದೆ ಮನವ
ನಿಲಿಸಿರ್ದ ರಿಪುಗಳಾ ದೊರೆಯ ಸಂಪದವನನುಭವಿಸಲುಜ್ಜುಗಿಸಿರ್ಪಿನಂ॥
ತಿಳಿದದನನಾಥರಾಗಿರ್ಪಖಿಳಮಂತ್ರಿಗಳ್
ಕಳುಹಿ ಧೃತಿಯಿಂದೆ ಕಂಬನಿಯ ತಡೆವಾಪ್ತರಂ
ತಳುವದವರಿಂ ಮಾತೃಬಂಧುನಿಲಯದೊಳಿರ್ಪ ಭರತನಂ ಕರೆಯಿಸಿದರು॥

ಜನಕನಾ ಬಗೆಯ ಮಿಳ್ತುವ ಕೇಳ್ದು ಕೈಕೇಯಿ ೭
ಯಣುಗನಾಗಂ ತನ್ನ ತಾಯಿಯಿಂದಲ್ಲದೆಯೆ
ಘನತರಮೆನಿಪ್ಪ ತದ್ರಾಜ್ಯರಮೆಯಿಂದೆಯುಂ ತಾಂ ಪರಾಙ್ಮುಖನಾಗುತಂ॥
ವನಕೆ ಪಡೆಯೊಡಗೊಂಡು ಪೋಗಿ ಸೌಮಿತ್ರಿಯುತ
ನೆನಿಪ ರಾಮನ ನಿವಾಸದ್ರುಮಂಗಳನಲ್ಲಿ
ವನವಾಸಿಗಳ್ ತೋರಿಸಲ್ಕವಂ ಕಂಡು ಕೋಡಿಸುತರಸಿದಂ ಭ್ರಾತೃವಂ॥

ವರಚಿತ್ರಕೂಟದಲ್ಲಿರ್ಪ ರಾಮನ ಕಂಡು ೮
ಭರತನಿರದರುಹಿ ಜನಕಂ ಸಗ್ಗಕೇರ್ದುದಂ
ಕರೆದನಾ ಅಣ್ಣನಂ ವರಿಸಲ್ಕೆ ಪರಿಭುಕ್ತಳಾಗದಿಹ ರಾಜ್ಯರಮೆಯಂ॥

ಸಿರಿಯನವಳಂ ಪರಿಗ್ರಹಿಸಲಗ್ರಜನೊಪ್ಪ
ದಿರಲಾಗಳಾಕೆಯುಂ ಕೈವಿಡಿವಿನಂ ತನಗೆ
ಪಿರಿಯನಿಂ ಮೊದಲೆ ಪಸೆನಿಲ್ವ ಕಿರಿಯನ ದುರಿತಮಪ್ಪುದೆಂದರಿದನವನು॥

ಎಂತೊರೆದೊಡಂ ಸ್ವರ್ಗಗತಜನಕನಾಜ್ಞೆಯಿಂ ೯
ಪಿಂತಿರುಗ ದಣ್ಣನಂ ಬೇಡಿದಂ ಕೊನೆಗೆ ಭರ
ತಂ ತದುನ್ನತಪಾದುಕೆಗಳನೆಸಗಲ್ಕವುಗಳಂ ರಾಜ್ಯದೇವತೆಗಳಂ॥
ಅಂತಾಗಲೆಂದಗ್ರಜಂ ಕಳುಪಲ್ಕೆತಂದು
ತಾಂ ತಿರುಗಿ ಪುಗದಯೋಧ್ಯೆಯ ನಂದಿಯೆಂಬ ಪೆಸ
ರಾಂತೂರೊಳಿರ್ದು ನಿಕ್ಷೇಪಮನದಂತಂತೆ ಪೊರೆದನಾತನ ರಾಜ್ಯಮಂ॥

ಈತೆರದೊಳಗ್ರಜನೊಳಿಟ್ಟು ದೃಢಭಕ್ತಿಯಂ ೧೦
ಭೂತಲಾಧಿಪನಾಗುವಾಶೆಯಂ ಬಿಟ್ಟು ನಿಜ
ಮಾತೆಯೆಸಗಿರ್ದಘಕೆ ಪರಿಹಾರಕೃತಿಗೆಯ್ವನೆನೆ ಭರತನೊಪ್ಪಿರ್ದನು॥
ಸೀತಾಸಮೇತನಾದಾ ರಾಮನುಂ ಸುಮಿ
ತ್ರಾತನುಜನೊಡನೆ ವನದೊಳ್ ಕಂದಮೂಲಮಂ
ಪ್ರೀತಿಯಿಂ ಭುಂಜಿಸುತೆ ಯೌವನದೊಳೇ ವೃದ್ಧರಘುಗಳ ವ್ರತವ ತಳೆದಂ॥

ಒಂದುದಿವಸಂ ಸ್ವಪ್ರಭಾವದಿಂ ಸ್ಥಿರತೆಯಂ ೧೧
ಪೊಂದಿದುರ್ವೀರುಹಚ್ಛಾಯೆಯೊಳ್ ರಾಮನಮ [ನಂ॥
ಳೇಂದುಮುಖಿಜಾನಕಿಯ ತೊಡೆಯಲ್ಲಿ ವಿಶ್ರಾಂತಿಗೆಳಸಿ ತಾಂ ಮಲಗಿರ್ದ
ಅಂದು ದೇವೇಂದ್ರಸುತನಾದ ಕಾಕಾಸುರಂ
ಬಂದು ತದ್ಭೂಸುತೆಯ ಕುಚಯುಗಕೆ ತನ್ನುಗುರ್ಗ
ಳಿಂದೆ ವಿಕ್ಷತಿಯಿತ್ತ ನಿನಿಯನುಪಭೋಗಚಿಹ್ನದ ದೋಷವೆಣಿಪನೆನೆ ತಾಂ॥

ಜವದಿಂದೆ ಕಾಂತೆಯೆಚ್ಚರಗೊಳಿಸಲೆಳ್ದು ರಾ ೧೨
ಘವನೆಚ್ಚ ಕಾಕಾಸ್ತ್ರದತ್ತಣಿಂದೈದೆ ಜೀ
ವವನುಳಿಸಿಕೊಂಡನಾ ಕ್ರೂರಾಸುರಂ ತನ್ನ ಲೋಚನವನೊಂದನಿತ್ತು॥
ಕುವಲಯಶ್ಯಾಮನಾ ರಾಮನಾಸನ್ನದೇ
ಶವಿದಿಲ್ಲಿಗಿರದೆ ಭರತಂ ಮರಳಿ ಬರ್ಪನೆಂ
ಬುವ ಶಂಕೆಯಿಂ ಬಿಟ್ಟನುತ್ಸುಕಿತಮೃಗಕುಲವನಾ ಚಿತ್ರಕೂಟನಗವ॥

ಮುಳಿಗರಿವ ತಾರೆಗಳೊಳಾದಿತ್ಯನೆಂತಂತೆ ೧೩
ನೆಲಸುತಂ ಕೌಸಲ್ಯೆಯಾತ್ಮಭವನತಿಥಿಸಂ
ಕುಲವ ಸತ್ಕರಿಪ ಋಷ್ಯಾಶ್ರಮಂಗಳೊಳ್ಳೈದೆ ತೆಂಕಣದ ದಸೆಗೆ ಪೋದಂ॥
ನಲವಿಂದೆ ವೈದೇಹಿಯಾ ರಘೂತ್ತಮನ ಬೆಂ
ಬಳಿಯೊಳೇ ತೆರಳುತಂ ತೊಳಗಿದಳ್ ಕೈಕೇಯಿ [ಯಂತೆ॥
ಸಲೆ ನಿವಾರಿಸಿದೊಡಂ ತದ್ಗುಣೋನ್ಮುಖಿಯಾಗುತನುಗಮಿಪ ಲಕ್ಷ್ಮಿ

ಅನಸೂಯೆಯಿಂ ಪಡೆದ ವಿಮಲಾಂಗರಾಗದಿಂ ೧೪
ಜನಿಪ ವರಪುಣ್ಯಗಂಧದೆ ಜನಕಜನಪತಿಯ
ತನುಜಾತೆ ವನಮಂ ಸುಮೋಚ್ಚಲಿತಷಟ್ಚರಣಗಣಮನಾಗಿಸಿದಳಾಗಂ॥
ವನದೊಳೈತಂದು ಸಂಧ್ಯಾವಾರಿಧರಕಪಿಶ
ದನುಜಂ ವಿರಾಧನನುಪಮಪರಾಕ್ರಮನ ರಾ
ಮನ ಪಥವ ತಡೆದನಿಂದುವ ಬಟ್ಟೆಯಂ ಕಟ್ಟಿ ನಿಂದ ರಾಹುವಿನತೆರದಿಂ॥

ತಳುವದಪಹರಿಸಿದಂ ಲೋಕಶೋಷಕನವಂ ೧೫
ಸಲೆ ರಾಮಲಕ್ಷ್ಮಣರ ನಡುವಿರ್ಪಸೀತೆಯಂ
ಮಳೆಯನಾ ಶ್ರಾವಣನಭಸ್ಯಮಧ್ಯಸ್ಥಮನವಗ್ರಹಂ ಪರಿಪತೆರದಿಂ॥
ಖಲನನವನಂ ಕೊಲ್ದು ಕಾಕುಸ್ಥರುಭಯರಾ
ನೆಲೆಯ ನಿರ್ಮಲತೆ ತದ್ದುರ್ಗಂಧದಿಂದೆ ಮುಂ
ದಳಿವುದೆಂದರಿದು ತಾಮಿರದವನ ದೇಹಮಂ ಭೂತಲದೊಳೂಳ್ದಿಟ್ಟರು॥

ಬಳಿಕಗಸ್ತ್ಯಾಜ್ಞೆಯಿಂ ಬಿಂಜೆ ಪೂರ್ವಾವಸ್ಥೆ ೧೬
ಯೊಳೆ ಮೇರೆಯಂ ಮೀರದಿರ್ಪಂತೆ ರಾಮನುಂ
ನೆಲಸಿದಂ ಪಂಚವಟಿಯೊಳೆ ತನ್ನ ಮರ್ಯಾದೆಯಂ ದಾಂಟದಂತಿರಾಗಂ॥
ತಳೆಯುತಂ ಬೇಸಗೆಯ ತಾಪವ ಭುಜಂಗಿ ತಾಂ
ಮಲಯತರುವಂ ಸೇರ್ವತೆರದೊಳಾ ರಾಘವನ [ಯು॥
ಬಳಿಯನಾಂತಳ್ ಸ್ಮರಾತುರೆಯಾಗಿ ರಾವಣಾನುಜೆಯಾದ ಶೂರ್ಪಣಖೆ

ಜನಕುಸುತೆಯಿದಿರೊಳೇ ನಿಜವಂಶಮಂ ಪೇಳ್ದು ೧೭
ದನುಜೆ ತಾಂ ರಾಮನಂ ಕೈವಿಡಿಯಲೆಳಸಿದಳ್ [ನಲ್ತೆ॥
ಘನವೃದ್ಧಿಯಾಂತಿರ್ಪ ವನಿತಾಮನೋಭವಂ ಸಮಯಮಂ ತಿಳಿಯ

ನನಗೆ ಸತಿಯಿರ್ಪಳಿಲಿ ಬಾಲೆ ನೀಂ ಪೋಗೆನ್ನ
ಯನುಜಾತನೆಡೆಗಾತನಂ ಸೇವಿಸೆಂದು ಪೇ
ಳ್ದನಘಚರಿತನೆನಿಸಿಪ್ಪ ಕೌಸಲ್ಯೆಯಣುಗನಾ ಕಾಮುಕಿಯ ಬೀಳ್ಕೊಟ್ಟನು||

ಕುಶಲನಾ ಲಕ್ಷ್ಮಣಂ ಮುನ್ನಮಗ್ರಜನ ಮೋ ೧೮
ಹಿಸಿದಕತದಿಂ ತನ್ನನಿಚ್ಛೈಸದೆ ಕಳುಪೆ ಮೇ [ಯಂ||
ಣಸುರಕಾಮಿನಿ ರಾಮನಂ ಸೇರ್ದು ಪೋಲ್ತಿರ್ತ್ತಡಿಯಂಟೆ ಪರಿವ ತೊರೆ
ನಸುಪೊಳ್ತು ತಳೆದವಳ ಸೌಮ್ಯರೂಪಮದಾಗ
ವಸುಧಾತ್ಮಜೆಯ ಹಾಸ್ಯದಿಂ ವಿಕೃತಿಯೊಂತುದಾ
ಶಶಧರೋದಯದಿಂ ನಿವಾತಶಾಂತಾಬ್ಧಿಪೂರಂ ಕ್ಷೋಭವಾಂತತೆರದಿಂ||

ತಳುವದೆಯೆ ಪಡೆವೆ ನಿನ್ನುಪಹಾಸಫಲವ ನೆಲೆ ೧೯
ಲಲನೆ ನೀನೆನಗೀಗ ಗೆಯ್ದ ಹಾಸ್ಯಮಿದು ಪೆ [ದೊಳು||
ಣ್ಬುಲಿಗೆ ಮೃಗಿಯೆಸಗಿದಪಮಾನಮೆಂದರಿದುಕೊಳ್ವುದು ನಿನ್ನಮಾನಸ
ಅಳುಕಿ ವಲ್ಲಭನ ತೊಡೆವಿಡಿವ ಜಾನಕಿಗಿಂತು
ತಿಳುಪುತಂ ರಕ್ಕಸಿಯವಳ್ ತ್ವರಿತದಿಂದೆ ತಾಂ
ತಳೆದಳಾ ಶೂರ್ಪಣಖೆಯೆಂಬ ನಾಮಕೆ ಸದೃಶಮಪ್ಪ ಭೀಕರರೂಪಮಂ||

ರಕ್ಕಸಿಯಿವರ್ಳ್ ಮೊದಲ್ ಕೋಗಿಲೆಯ ನುಣ್ಚರಕೆ ೨೦
ತಕ್ಕ ದನಿಯಿಂ ನುಡಿದುಮೀಗ ಪೆಣ್ಣರಿಯಂತೆ [ರ್ಕ್ಕಂ||
ಕರ್ಕಸಮೆನಿಪ್ಪ ರವದಿಂ ಕೂಗುವಳ್ ಬಗೆವೊಡಿವಳೊಳತಿಮಾಯೆಯಿ
ಸಿಕ್ಕುವ ಮಿದೆಂದರಿದು ಲಕ್ಷ್ಮಣಂ ಜವದಿಂದೆ
ಪೊಕ್ಕು ಬಿಡದೆಲೆವನೆಯ ನೊರೆದೆಗೆದ ಖಡ್ಗದಿಂ
ದಿಕ್ಕಿದಂ ತಾನವಳ ಭೀಷಣಾಕೃತಿಯೊಳಿಮ್ಮಡಿಯಪ್ಪ ವೈರೂಪ್ಯಮಂ||

ದಾನವಾಂಗನೆಯಾಗ ವಕ್ರನಖಪಂಕ್ತಿಯಿಂ ೨೧
ವೇಣುಕರ್ಕಶಪರ್ವದಿಂ ಕೂಡಿದಂಕುಶಸ
ಮಾನಾಂಗುಳಿಗಳಿಂದೆ ತರ್ಜಿಸುತ್ತವರೀರ್ವರಂ ಬಾಂಗಡರ್ದು ಮತ್ತಂ||
ತಾನತಿತ್ವರಿತದಿಂದಂ ಸೇರುತಂ ಜನ
ಸ್ಥಾನಮಂ ಖರಮುಖ್ಯದೈತ್ಯರ್ಗ್ಗೆ ಪೇಳ್ದಳಭಿ
ಮಾನಧನರಾಘವಂ ರಕ್ಕಸರ್ಗ್ಗೆಸಗಿದ ನವೀನಮಾದಪಮಾನಮಂ||

ಮುಖದವಯವಂಗಳಂ ಕೊಯ್ಸಿಕೊಂಡಾ ಶೂರ್ಪ ೨೨
ಣಖೆಯನೇ ಮುಂದಿಟ್ಟುಕೊಂಡು ಕಲಹಕ್ಕೆ ತಾ
ಮಖಿಳದನುಜರ್ ರಾಘವಂಗಿದಿರ್ವಂದವುದೆ ತಮುಗಮುಂಗಳವಾಗಿರೆ॥
ನಿಖಿಳರವರಿಂತು ಕೈದುಗಳಾಂತು ಬಹುಗರ್ವ
ಸಖರಾಗಿ ಬರೆ ಕಂಡು ರಾಮುನಿಟ್ಟಂ ಕಮಳ [ಳಂ॥
ಮುಖಿಜಾನಕಿಯ ರಕ್ಷಣವ ಲಕ್ಷ್ಮಣನೊಳಮರಿವಿಜಯಾತೆಯಂ ಬಿಲ್ಲೊ

ರಣದೊಳೋರ್ವನೆ ರಾಮ ನಸುರರೋ ಸಾಸಿರದ ೨೩
ಗಣನೆಯಿಂದಿರ್ಪರಿಂತಿರ್ದೊಡಂ ನೋಡೆ ತಾ
ಮೆನಿತು ಸಂಖ್ಯೆಯಿನಿರ್ಪ ರನಿತು ಸಂಖ್ಯೆಯು ರಾಮರಂ ಕಂಡರಾದನುಜರು
ಗಣಿಪೊಡಾಗಂ ಶುಭಾಚಾರರಾಘವ ನಸ
ಜ್ಜನದಿಂ ಪ್ರಯುಕ್ತಮಾಗಿರೆ ತನ್ನಮೇಲೆ ಮೂ
ಷಣಮುದನದೆಂತಂತೆ ತಾಂ ಸಹಿಸಲಿಲ್ಲಮಾದೂಷಣಸಮಾಜಿಯಲ್ಲಿ॥

ಕ್ರಮದೊಳಾ ದೂಷಣಂಗಂ ಖರತ್ರಿಶಿರರ್ಗೆ ೨೪
ದಮಿತಾರಿರಾಮನೆಚ್ಚಾ ಮೂರುಕಣೆಗಳುಂ
ಸಮುಕಾಲದೊಳೆ ತಾಂ ಶರಾಸನದಿನೈತಂದವೆಂಬಂತೆ ತೋರಲಾಗಂ॥
ಅಮರರಿಪುಗಳ ಮೂವರೊಡಲ ಪೊಕ್ಕೈದೊಡಂ
ವಿಮಳತೆಯ ಮೊದಲಂತೆಯೇ ಧರಸಿದಂಬುತ್ರ [ದು॥
ಯಮದೀಂಟೆತವರಾಯುವಂ ರುಧಿರಮುಮುನ್ಕೈದೆ ಖಗಸಂಕುಲಂ ಪೀರ್ಗ್ದು

ಅರಿಭಯಂಕರರಾಮು ನಸ್ತ್ರಂಗಳಿಂದೆ ಮಿಗೆ ೨೫
ತರಿದ ರಾಕ್ಷಸಮುಹಾಸೈನ್ಯಸಂಕುಲದಲ್ಲಿ
ಪರಿಕಿಸಲ್ಕೆಳ್ದು ನಿಂದುದು ಕಬಂಧಾಳಿಯಲ್ಲದೆ ಬೇರದೊಂದುಮಿಲ್ಲಂ॥
ಶರವೃಷ್ಟಿಯಂ ಕರೆಯುವಾ ವೀರನೊಡನಿಂತು
ಸುರವೈರಿಗಳ ವರೂಥಿನಿ ಕೆಣಕಿ ಪರ್ದುಗಳ
ನೆರಳಲ್ಲಿ ಮರಳಿ ತಾನೆಳ್ಚರವ ಪಡೆಯದಿಹ ದೀರ್ಘನಿದ್ರೆಯಸಾಂತುದು॥

ಜಾನಕೀಜಾನಿಬಾಣವಿದೀರ್ಣರಾದಖಿಳ ೨೬
ದಾನವರ ದುಷ್ಟವಾರ್ತೆಯನದೆಲ್ಲವನಾ ದ
ಶಾನನಂಗರುಪಲ್ಕೆ ದೂತಿಯಾದಳ್ ನೋಡೆ ತಾಂ ಶೂರ್ಪಣಖೆಯೋರ್ವಳೇ॥

ಮಾನಭಂಗಂ ತಂಗೆಗಾದಕತದಿಂ ಪ್ರಾಣ
ಹಾನಿಯಾಪ್ತರ್ಗ್ಗೆಗೆದಕಾರಣದೊಳಾ ಕುಬೇ
ರಾನುಜಂ ರಾಮನೆನ್ನಯ ಪತ್ತುತಲೆಗಳೊಳ್ ಕಾಲಿಟ್ಟನೆಂದು ಬಗೆದಂ||

ಹರಿಣರೂಪವ ತಾಳ್ದ ಮಾರೀಚನಿಂದ ಮಾ ೨೭
ಸುರವೈರಿ ರಾಮಲಕ್ಷ್ಮಣರ ವಂಚಿಸುತೆ ತಾಂ [ನಂ||
ಸರಣಿಯೊಳ್ ಖಗರಾಜ ನೆಸಗಿದೆಡರಂ ಕಡಿದು ಸೀತೆಯಂ ಕಳ್ದೊಯ್ವಿ
ಅರಸುತಾ ಜಾನಕಿಯನಾ ಸೋದರರ್ ಕಂಡ
ರರಿದಗರಿಯಾಂತು ದಶರಥಸಖ್ಯಋಣವ ಪರಿ
ಹರಿಸಲಿನ್ನುಂ ಕಂಠಸಂಸ್ಥಿತಪ್ರಾಣನಾಗಿರುತೆ ಬಿಳ್ದ ಜಟಾಯುವಂ||

ಸೀತಾಪಹರಣಮಂ ರಾವಣನಿನಾದುದಂ ೨೮
ಮಾತಿನಿಂ ತಿಳುಪುತಂ ಮತ್ತೆ ತಾಂ ಗೆಯ್ದುರ್ದ [ದನು||
ಸಾತಿಶಯರಣವ ತನ್ನೊಡಲ ಗಾಯದೆ ಪ್ರಕಟಿಸುತೆ ಜಟಾಯುವು ಮಡಿ
ಆತನಳಿವಿಂದೆ ಸೋದರವರ್ ಮರಳಿ ನಿಜ
ತಾತಮೃತಿಶೋಕಮಂ ಪೊಂದಿ, ತಂದೆಗೆ ಗೆಯ್ದ
ರೀತಿಯಿಂದಾ ಖಗೇಂದ್ರಂಗೆ ವಹ್ನಿಕ್ರಿಯಾದಿಗಳ ತಾಂ ವಿರಚಿಸಿದರು||

ಬಳಿಕೆ ತಾಂ ಗೆಯ್ದ ವಧೆಯಿಂ ಶಾಪದಂತಮಂ ೨೩
ತಳೆದಾ ಕಬಂಧನುಪದೇಶದಿಂ ರಾಮಂಗೆ
ಸಲೆ ಸಮಾನವ್ಯಸನಾದ ಸುಗ್ರೀವನೊಳ್ ಕೆಳೆತನಂ ಬಳೆದುದಾಗಂ||
ಕಲಿಯೆನಿಪ್ಪಾ ರಾಘವಂ ವಾಲಿಯಂ ಕೊಲ್ದು
ನಿಲಿಸಿದಂ ಚಿರಕಾಂಕ್ಷಿತಮೆನಿಪ್ಪ ತತ್ಪದದೆ [ಮಂ||
ಕೆಳೆಯನಾದಾ ಕಪೀಂದ್ರನ ನಿರಿಸುವೊಲ್ ಧಾತುವಿನ ನೆಲೆಯೊಳಾದೇಶ

ಜಾನಕಿಯನರಸಲ್ಕೆ ಕಪಿಕುಲೇಂದ್ರಂ ಬೆಸಸೆ ೩೦
ನಾನಾಪ್ರದೇಶಂಗಳೊಳ್ ತಿರುಗಿದರ್ ಸರ್ವ
ವಾನರರ್ ವಿರಹಾರ್ತ್ತರಾಮನ ಮನೋರಥಂಗಳ್ ತಿರುಗಿದಂತೆ ಕೊನೆಗೆ
ಕ್ಷೋಣಿಜೆಯ ವಾರ್ತ್ತೆ ತಿಳಿದತ್ತು ಸಂಪಾತಿಯಂ
ಕಾಣುವುದರಿಂದವರ್ಗ್ಗಳೇ ಪವಮಾನ [ಪಂ||
ಸೂನುವುತ್ತರಿಸಿದಂ ಶರಧಿಯಂ ನಿಃಸ್ಪೃಹಂ ದಾಂಟುವೊಲ್ ಸಂಸಾರ

ಧೃತಿಗೆಡದೆ ಲಂಕೆಯಲ್ಲರಸುತುಂ ಕಡೆಗೆ ಮಾ ೩೧
ರುತಿ ವಿಷವ್ರತತಿಪರಿವೃತಸುಸಂಜೀವಿನೀ [ತಾಂ||
ಲತೆಯಂತೆ ಸುತ್ತುಗಟ್ಟಿದ ರಕ್ಕಸಿಯರ ನಡುವಿರ್ಪ ಸೀತೆಯ ನೋಡಿ||
ಪತಿಯಭಿಜ್ಞಾನಾಂಗುಳೀಯಕವನಾ ಧರಾ
ಸುತೆಗೆ ಕುಡೆ ಕಂಡೊಡನೆ ಜನಿತಹರ್ಷದೆ ಸಮು
ದ್ಗತಮಾದ ಶೀತಲದ ಕಂಬನಿಗಳಿಂದಿದಿರ್ಗೊಂಡಳದನಾ ಸಾಧ್ವಿಯು||

ಪ್ರಿಯನ ಸಂದೇಶದಿಂ ನಲವಿತ್ತು ಸೀತೆಗ ೩೨
ಕ್ಷಯನವಧೆಯಿಂ ಗರ್ವವಾಂತು ತಾನಿಂದ್ರಜಿ [ಗ||
ದ್ಭಯದ ಬಾಧೆಯ ಸಹಿಸುತಂ ಕ್ಷಣಂ ಲಂಕೆಯಂ ದಹಿಸಿ ಕೃತಕೃತ್ಯನಾ
ರಯದೊಳೈತಂದು ರಾಮಂಗರ್ಪಿಸಿದ ನಂಜ
ನೆಯ ಸುತಂ ಪ್ರತ್ಯಭಿಜ್ಞಾನಮಣಿಯಂ ಜಾನ [ದಂ||
ಕಿಯ ಹೃದಯಮೇ ಮೂರ್ತಿವೆತ್ತು ತಾನಾಗಮಿಸಿದಂತೆ ರಂಜಿಸುತಿರ್ಪ

ಹೃದಯನಿಕ್ಷಿಪ್ತತನ್ಮಣಿಸಂಗದಿಂದೆ ಮು ೩೩
ಚ್ಚಿದ ಕಣ್ಗಳಿಂದೆ ರಾಮಂ ಕುಚಸ್ಪರ್ಶರಹಿ
ತದ ವಲ್ಲಭಾಲಿಂಗನದ ಸುಸೌಖ್ಯಮನೆ ತಾನನುಭವಿಸಿದಂ ಮಗುಳ್ದುಂ||
ಹೃದಯೇಶ್ವರಿಯ ವಾರ್ತೆಯಂ ಕೇಳ್ದು ತತ್ಸಂಗ
ಮದೊಳಧಿಕಮೋಹವಾಂತಾ ರಾಘವಂಗೆ ತೋ [ಯಾಗಿ||
ರ್ದುದು ಲಂಕೆಯಂ ಸುತ್ತುಗಟ್ಟಿದ ಮಹಾಸಾಗರಮದು ಲಘುಪರಿಖೆ

ಭೂತಲದೊಳಲ್ಲದೆ ನಭಃಸ್ಥಲದೊಳಂ ಕಪಿ ೩೪
ವ್ರಾತಸೇನೆಗಳಿಟ್ಟಣಿಸಿ ಪಿಂತೆ ಬರೆ ಸುವಿ
ಖ್ಯಾತರವಿಕುಲಜಾತರಾಮ ನಾಶತ್ರುಸಂಹಾರಕ್ಕೆ ಪೊರಮಟ್ಟು ತಾಂ||
ಭೀತಿವಡೆಯದೆ ನೆಲಸೆ ಜಲನಿಧಿಯ ತೀರದ
ಲ್ಲಾ ತನೆಡೆಗೈತಂದ ನಾ ವಿಭೀಷಣನಾಗ
ಪ್ರೀತಿಯಿಂ ರಾಕ್ಷಸಶ್ರೀ ತನಗೆ ಬುದ್ಧಿವೇಳ್ದುರಿ ಕಳುಪೆ ಬಂದನೆನೆ ತಾಂ||

ದಶರಥಸುತಾ ದಶಮುಖಾನುಜಂಗಾಗ ರಾ ೩೫
ಕ್ಷಸರಮೆಯ ನಿರದೀವೆನೆಂದು ಪೂಣ್ದಂ ವಿಚಾ
ರಿಸೆ ತಕ್ಕಸಮಯದೆ ಸಮಾರಬ್ಧಮಾದ ನೀತಿಯದು ಸತ್ಫಲವ ಕುಡದೇಂ||

ಅಸಮಬಲನಾರಾಘವಂ ತಡೆಯದೈದೆ ಕ
ಟ್ಟಿಸಿದನಾ ಕಪಿಗಳಿಂ ಲವಣಾಬ್ಧಿ ಸೇತುವನ
ದೆಸೆದುದಬ್ಜಾಂಬಕಂ ಪವಡಿಸಲ್ಕುರಗಲೋಕದಿನೆಳ್ದ ಶೇಷನೆನೆ ತಾಂ||

ಶರಧಿಯಂ ಸೇತುಪಥದಿಂ ದಾಂಟಿ ರಾಘವಂ ೩೬
ಭರದೆ ಲಂಕೆಯ ಸುತ್ತಮಿರಿಸಿದಾ ಪೊಂಬಂಣ
ದುರುವಾನರಾನೀಕಮಾ ನಗರದೆರಡನೆಯ ಪೊಂಗೋಟೆಯಂತೆಸೆದುದು||
ನೆರೆದ ಕಪಿರಾಕ್ಷಸರ್ಗಲ್ಲಿ ನಡೆದುದು ಭಯಂ
ಕರಯುದ್ಧಮಾಗಳ ಖಿಳಾಶೆಯೊಳ್ ತುಂಬಿದುದು
ವರರಾಮರಾವಣರ್ಗ್ಗೊರೆವ ಜಯಜಯರವಂ ದ್ವಂದ್ವಪಕ್ಷಸಮುದ್ಭವಂ||

ತರುಗಳಿಂ ಪರಿಘಾಳಿ ಭಗ್ನಮಾದುದು ಶಿಲೋ ೩೭
ತ್ಕರದಿಂದೆ ಮುದ್ಗರಚಯಂ ಚೂರ್ಣಿತಮದಾಯ್ತು
ಮುರಿದುದಸ್ತ್ರವ್ರಜಂ ನಖಘಾತದಿಂ ಗಿರಿಗಳಿಂ ಕರಿಗಳಳಿದವಲ್ಲಿ||
ತರುವಾಯದೊಳ್ ತರಿದ ರಾಮಮಸ್ತಕವ ಕಂ
ಡಿರದೆ ಮೈಮರೆದ ಸೀತೆಗೆ ಮಾಯೆಯಿಂದಮಿದು
ಪರಿಕಲ್ಪಿತಂ ಸತ್ಯಮಲ್ಲೆಂದು ಪೇಳ್ದು ಚೇತನವನಿತ್ತಳ್ ತ್ರಿಜಟೆಯು||

ಜೀವಿಸಿರ್ಪಂ ನನ್ನ ಜೀವವಲ್ಲಭನೆಂದು ೩೮
ಭಾವಿಸಿದ ವೈದೇಹಿ ದುಃಖಮಂ ಬಿಟ್ಟೊಡಂ
ಜೀವಿಸಿದೆನಾನಾತನಳಿವ ಕೇಳಿಯುಮೆಂದು ಮಿಗೆ ನಾಣ್ಚಿದಳ್ ಬಳಿಕ್ಕಂ||
ರಾವಣಾತ್ಮಜಮೇಘನಾದ ನಹಿಪಾಶದಿಂ
ದಾವೀರರಾಘವರ ಕಟ್ಟೆ ಪುಟ್ಟಿಸ ಕಷ್ಟ
ಭಾವಮಾಗರುಡನಾಗಮಿಸೆ ಕನಸೊಳ್ ಕ್ಷಣಂ ಕಂಡೊಲಾಯ್ತಾಗವರ್ಗೆ||

ಖತಿಗೊಂಡ ರಾವಣನ ಶಕ್ತ್ಯಾಯುಧದೆ ವಿದಾ ೩೯
ರಿತಮಾಗೆ ಲಕ್ಷ್ಮಣನ ವಕ್ಷಮದು ತಾನನಾ
ಹತನಾದೊಡಂ ರಾಮನಧಿಕಶೋಕದೆ ದಳಿತಹೃದಯನಾಗಿರ್ದನಾಗಂ||
ಅತಿಜವದೆ ಪವನಜಂ ತಂದ ಸಂಜೀವಿನೀ
ಲತೆಯಿಂದೆ ಗತಬಾಧನಾಗಿ ಸೌಮಿತ್ರಿ ಶರ
ತತಿಯಿಂದೆ ಮತ್ತೆ ಲಂಕಾಂಗನಾಳಿಗೆ ವಿಲಾಪವ ಪೇಳ್ವ ಗುರುವಾದನು||

ಪರಿಕಿಸೆ ಶರತ್ಕಾಲಮದು ಮೇಘದಸ್ವನವ ೪೦
ಸುರಚಾಪಮುಮನೈದೆ ಸಿಶ್ಶೇಷವೆಸಗುವೋಲ್
ವರಲಕ್ಷ್ಮಣಂ ಮೇಘನಾದನ ಧ್ವನಿಧನುಗಳಂ ಕಾಣದಂತೆಸಗಿದಂ||
ಇರದೆ ಸುಗ್ರೀವನಾ ಕುಂಭಕರ್ಣಂಗೆ ತಾಂ
ವಿರಚಿಸೆ ಸಹೋದರೀಸದೃಶದಶೆಯಂ ಸೀತೆ
ಯರಸನಂ ತಡೆದನಾ ರಕ್ಕಸಂ ಟಂಕವಿದಳಿತಮಣಿಶಿಲಾಚಲನಿಭಂ||

ಬರಿದೆ ನಿನ್ನಗ್ರಜನಕಾಲದೊಳ್ ನಿನ್ನನೆ ೪೧
ಚ್ಚರಿಸಿದಂ ಪ್ರಿಯನಿದ್ರನಂ ನಿರ್ದಯದೊಳೆಂಬ [ಣಂ||
ಮರುಕದಿಂದೆನೆ ದೀರ್ಘನಿದ್ರೆಯಿತ್ತುದು ಕುಂಭಕರ್ಣಂಗೆ ರಾಮಬಾ
ಸುರರಿಪುಗಳಿತರರುಂ ಪ್ರಾಣಮಂ ತೊರೆದು ವಾ
ನರಕೋಟಿಮಧ್ಯದೊಳ್ ಬಿಳ್ದರವರೊಡಲ ನೆ [ಯಿಂದಂ||
ತ್ತರದ ತೊರೆಯೊಳ್ ರಣಾಂಗಣಸಮುತ್ಥಿತರಜಂಗಳ್ ಬಿಳ್ದ ಮಾಳ್ಕೆ

ತರುವಾಯದೊಳ್ ದಶಾಸ್ಯಂ ಮರಳಿ ಗೃಹದಿಂದೆ ೪೨
ಪೊರಮಟ್ಟನಾಜಿರಂಗಕೆ ತನ್ನ ಮನದಲ್ಲಿ
ತರಿಸಂದು ಜಗಮಿಂದರಾವಣಂ ಮೇಣರಾಮಂ ಜವದೊಳಪ್ಪುದೆಂದು||
ಸುರನಾಥನಾಗ ರಾಮಂ ಪಾದಚಾರಿಯಾ
ಗಿರುವುದಂ ರಾವಣಂ ರಥಿಕನಾಗಿರುವುದುಮ
ನರಿದು ದಿವ್ಯಾಶ್ವವಿಲಸಿತರಥವ ಕಳುಪಿದಂ ತಪ್ಪಶರಘಾತ್ಮಜಂಗೆ||

ಸುರನದಿಯ ತೆರೆಗಾಳಿಯಿಂದಮಿನ್ನುಂ ಚಲಿಪ ೪೩
ಸುರುಚಿರಧ್ವಜಪಟದೆ ಶೋಭಿಪಾಸ್ಯಂದನವ
ವರಜಯಾಕರವನಿರದೇರಿದಂ ಮಾತಲಿಯ ಕರವ ಪಿಡಿದಾ ರಾಘವಂ||
ಸುರರಿಪುಗಳಸ್ತ್ರಂಗಳುತ್ಪಲದಳಂಗಳಂ
ತಿರೆ ನಿಷ್ಫಲತೆಯ ಪೊಂದುಗುಮಾವುದಂ ಸೋಂಕೆ
ಸುರಪಕವಚಮನದ- ತೊಡಿಸಿದಂ ಮತ್ತಮಾತಂಗೆ ತದ್ದೇವಸೂತಂ||

ಚಿರಕಾಲದಿಂದಮುಂ ತಂತಮ್ಮ ಶೌರ್ಯಮಂ ೪೪
ನೆರೆ ತೋರಿಸಲ್ಕೆಳಸಿದಾರಾಮರಾವಣರ [ಯೆ||
ವರಯುದ್ಧಕವಸರಂ ದೊರೆದಕತದಿಂದಮದು ಚರಿತಾರ್ಥಮಾದೊಳಿಸೆ

ಪರಿಚಾರಶೂನ್ಯನಾ ದಶಮುಖಂ ರಣದಲ್ಲಿ
ಪರಿಕಿಪೊಡೆ ತಾನೋರ್ವನಾದೊಡಂ ಭುಜಶಿರ [ನು॥
ಶ್ಚರಣಬಾಹುಳ್ಯದಿಂ ಮಾತೃಕುಲದವರನೊಡಗೂಡಿದವನೋಲ್ ತೋರ್ದ್ದ

ಲೋಕಾಧಿಪರ್ಕಳಂ ಲೀಲೆಯಿಂ ಗೆಲ್ದು ಗೌ ೪೫
ರೀಕಾಂತನಂ ಶಿರೋಬ್ಜಂಗಳಿಂದರ್ಚಿಸಿಯು
ಮಾ ಕನತ್ಕೈಲಾಸಮಂ ನೆಗಪಿ ಪೆಸರಾಂತ ಪಗೆಯು ಬಣ್ಣಿಸೆ ರಾಘವಂ॥
ರಾಕೇಂದುಮುಖಿಜಾನಕೀಸಂಗಮಂಗಳ
ಕ್ಕಾಕರಮೆನಿಪ್ಪ ಸಂಸ್ಫುರಣಮಂ ತಳೆದ ತತ್ [ಗಂ॥
ಕಾಕುತ್ಸ್ಥಬಲಬಾಹುವೊಳ್ ನಟ್ಟನುರುಶರವ ಮುಳಿದು ಪೌಲಸ್ತ್ಯನಾ

ಕಡುಕನಲ್ದಿರದೆ ರಾಘವನೆಚ್ಚ ಮಾರ್ಗಣಂ ೪೬
ತಡೆಯದೆ ದಶಾಸ್ಯನುರುವಕ್ಷಮಂ ಭೇದಿಸುತೆ [ಮಂ॥
ಪೊಡವಿಯೊಳಪೊಕ್ಕುದುಸುರಕ್ಕಿಂಬೊಲುರಗಾವಳಿಗೆ ತತ್ಪ್ರಿಯೋದಂತ
ನುಡಿಗೆ ಮಾರ್ನ್ನುಡಿಗುಡುತೆ ಕಣೆಗೆ ಮಾರ್ಗ್ಗಣೆಯನುರೆ
ಬಿಡುತಿಂತು ಯುದ್ಧಮಂ ಗೆಯ್ವವರೊಳೀರ್ವರೊಳ [ದು॥
ಮೆಡೆಗೊಂಡ ವಿಜಯಸಂರಂಭಮುದು ವಾದಿಗಳೊಳಿಂತಂತೆ ವರ್ಧಿಸಿದು

ಕ್ರಮದಿಂದಮೊರ್ವರೊರ್ವರ್ಗೆ ತೋರಿಸುವ ವಿ ೪೭
ಕ್ರಮವ ಕಂಡಾ ವಿಜಯಲಕ್ಷ್ಮಿಯುವರೀರ್ವರೊಳ್ [ತೆ॥
ಸಮಮಾಗಿ ನಡುವಿರ್ದಳುರೆ ಕೆಣಕುವಿಭಯುಗದ ನಡುವಿರ್ಪಭಿತ್ತಿಯಂ
ಸಮಸತ್ವದಸ್ತ್ರಪ್ರಯೋಗತತ್ಪ್ರತಿಕೃತ
ಕ್ಕಮರದನುಜರ್ ನಲಿಯುತವರ ಮೇಲುರೆಸುರಿದ
ಸುಮವೃಷ್ಟಿಯಂ ಸಹಿಸಲಿಲ್ಲಮಾ ಉಭಯರನ್ಯೋನ್ಯಶರನಿವಹಮಾಗಂ॥

ತರುವಾಯದೊಳ್ ಕೂಟಶಾಲ್ಮಲಿಕ್ಷಿತಿರುಹದೊ ೪೮
ಲಿರುವ ಯಮದಂಡಮಂ ಪೋಲ್ತಯಃಕಂಟಕೋ [ರಂ॥
ತ್ಕರದೆ ತಳ್ತಿರ್ಪ ವಿಜಯಾರ್ಜಿತಶತಘ್ನಿಯಂ ಕೊಂಡು ರಿಪುಗೊಗೆದನಸು
ಭರದಿಂದೆ ರಾಘವಂ ರಥವ ಪೊರ್ದಟುದದಂ
ಸುರವೈರಿಗಳ ಗೆಲುವಿನಳ್ತಿಯುಮನತಿಕೋಪ
ಪರನಾಗಿ ಕದಳಿಯಂ ಕಡಿವಂತೆ ಖಂಡಿಸಿದನರ್ಧಚಂದ್ರಾಸ್ಯಶರದಿಂ॥

ಬಳಿಕಮನುಪಮಧನುರ್ಧರವಾಶರಥಿ ಬಿಲ್ಗೆ ೪೯
ಸಲೆ ಸಂಧಿಸಿದನರಿಯಕೊಲಲಮೋಘಂ ಧರಾ
ಲಲನಾತ್ಮಜಾಶೋಕಶಲ್ಯಮಂ ಕಿಳ್ತೌಷಧಮುಮೆನಿಪ ಬ್ರಹ್ಮಾಸ್ತ್ರಮಂ॥
ತಳುವದುರೆ ಗಗನದೊಳ್ ವ್ಯಾಪಿಸಿದ ಶತಮುಖಂ
ಗಳಿನುಜ್ವಲಿಸುವಸ್ತ್ರಮದು ಭಯಂಕರಫಣಾ [ದಾಗಂ॥
ವಳಯದ ಮಹೋರಗನ ತನುವಿನಂತಿರೆ ಭೀಷಣತೆಯಾಂತು ತೋರ್ಪು

ದನುಜಾಧಿಪನ ಶಿರಃಪಂಕ್ತಿ ತನಗಾದ ಛೇ ೫೦
ದನದಳಲನನುಭವಿಸದಂತೆ ನಿಮಿಷಾರ್ಧದೊಳ್
ಘನವಿಕ್ರಮದೆ ರಾಮನದನಿರದೆ ಕೆಡಪಿದಂ ತದಭಿಮಂತ್ರಿತಬಾಣದಿಂ॥
ಮಿನುಗಿದುಟು ಮಸ್ತಕಾವಳಿ ತನ್ನಿಶಾಚರನ
ತನುವಿಡಿದು ಜಾರುತಮದಾಗ ಜಲದಲ್ಲಿ ಕಂ [ನಾ॥
ಪನಯುತೋರ್ಮಿಗಳಿಂದನೇಕತೆಯ ತಳೆದ ಪಡಿನೆಳಲಿನೋಲ್ ಬಾಲಾರ್ಕ

ಧರೆಗುರುಳ್ದಾ ಶಿರಂಗಳನೀಕ್ಷಿಸಿದೊಡಮವು ೫೧
ಮರಳಿ ತದ್ದಾನವನ ತನುಗೂಡುತಿರ್ಪವೆಂ [ಬಳಿಕಂ॥
ಬುರುಶಂಕೆಯಿಂದೆ ದಿವಿಜರ್ ಮೊದಲ್ ತದ್ವಧೆಗೆ ಮಿಗೆ ನಲಿಯದಿರ್ದು
ಸುರಿಸಿದರ್ ಸನ್ನಿಹಿತಪಟ್ಟಾಭಿಷೇಕನಾ
ಗಿರುವ ರಾಮನ ಮೇಲೆ ಸುರಭಿಸುಮವರ್ಷಮಂ
ಸುರಕರಿಕಪೋಲಮಂ ತೊರೆದ ಮದಭಾರಪಕ್ಷ್ಮಾಳಿಗಣದಿಂ ತಳ್ತುದಂ॥

ಸುರಕುಲದ ಕಜ್ಜಮಂ ತೀರ್ಚಿ ಪೆದೆಯಂ ತನ್ನ ೫೨
ವರಧನುವಿನಿಂದುರ್ಚಿ ನಿಂದ ಕೋಸಲನರೇ
ಶ್ವರನ ಸುಕುಮಾರನಾಣತಿಯಾಂತ ದಿವಿಜಾಧಿನಾಥಸಾರಥಿಯಾಗ ತಾಂ॥
ಭರದಿಂದೆ ಸುರಮಾರ್ಗವಿಡಿದು ಪೋದಂ ಕೊಂಡು
ಹರಿಸದಿಂ ದಶಶತಹಯಾನ್ವಿತವರೂಥಮಂ
ಪರಿಲಸಿತನಾನಾಂಕರಾವಣಶರೌಘಚಿಹ್ನಿತಕೇತುದಂಡಯುತಮಂ॥

ಪಾವಕನ ಮುಖದಿಂದೆ ಪರಿಶುದ್ಧಳಾದ ರಾ ೫೩
ಜೀವಮುಖಿಜಾನಕಿಯ ನೊಲವಿಂ ಪರಿಗ್ರಹಿಸಿ
ರಾವಣನ ರಾಜ್ಯರಮೆಯಂ ಪ್ರಿಯಸ್ನೇಹಿತವಿಭೀಷಣಂಗಿತ್ತು ಬಳಿಕಂ॥

ದೇವನುತರಾಘವಂ ನಿಜಭುಜಾರ್ಜಿತಮೆನಿ
ಪ್ಪಾ ವಿಮಾನವನೇರ್ದು ದಶಮುಖಾವರಜಸು
ಗ್ರೀವಸೌಮಿತ್ರಿಗಳ್ ಬೆಂಬಳಿಯೊಳಿರೆ ತನ್ನ ಪುರಿಗೆ ಪೊರಮಟ್ಟನಾಗಂ||

---

# ತ್ರಯೋದಶಸರ್ಗಂ.

ಸೂ:— ಘನಮೋದದಿಂ ಪುಷ್ಪಕವನೇರ್ದು ಬರುತೆ ತ
ನ್ನಿನಿಯಳ್ಗೆ ಜಲಧಿಗಿರಿವಿಪಿನದಲ್ಲಿರ್ಪೆಡೆಗ [ರಾಮಚಂದ್ರಂ||
ಳನಿತುಮಂ ತೋರಿಸುತೆ ನಿಜನಗರಿಯುಪವನವ ಸೇರ್ದನಾ

ಸಮನಂತರಂ ಶಬ್ದಗುಣಮಾತ್ರಪದಮುಮ ೧
ಪ್ಪಮರಪಥದೊಳ್ ವಿಮಾನವನೇರ್ದು ಬರುತೆ ನಿಜ
ರಮಣಿಗಿಂತೆಂದನೇಕಾಂತದೊಳ್ ರಾಮಾಭಿಧಾನಹರಿ ಕಂಡು ಕಡಲಂ||
ಕಮಲಾಕ್ಷಿ ನೋಡು ಬಾಂದೊರೆಯಿಂ ವಿಭಕ್ತಮಾ
ದಮಳತಾರಾನ್ವಿತಶರನ್ನಭದೊಲೆಸೆವುದೀ
ಅಮಿತಫೇನಾಂಬುನಿಧಿ ಮತ್ಸೇತುವಿಂ ದ್ವಿಭಾಗವನಾಂತು ಮಲಯಂಬರಂ

ಪಿತನೆಸಗುತಿರ್ಪ ಮಖದಶ್ವಮುಂ ಕಪಿಲಮುನಿ ೨
ಪತಿಯುರಗಲೋಕದಲ್ಲಿಟ್ಟನೆಂದರಿದದಂ
ಕ್ಷಿತಿಗೆ ತರಲೆಮ್ಮ ಪೂರ್ವಜರಿಳೆಯನಗುಳ್ದು ಪಿರಿದಂಗೆಯ್ದರೀ ಶರಧಿಯಂ||
ಚತುರೆ ಕೇಳೀ ಪಯೋನಿಧಿಯಲ್ಲಿ ರವಿಕಿರಣ
ತತಿಯಂಬುಗರ್ಭಮಂ ಧರಿಸುಗುಂ ಮಣಿಗಣಮು
ಮತಿವೃದ್ಧಿಯಾಂಪುದಾಲ್ಹಾದಕರಶಶಿಯೊಗೆದನುರೆ ಪೆರ್ಚುಗುಂ ಬಾಡಬಂ

ಧರಿಸುತಂ ವಿವಿಧರೂಪವನಾತ್ಮಮಹಿಮೆಯಿಂ ೩
ದಿರದೆ ದಶದಿಶೆಗಳಂ ವ್ಯಾಪಿಸುತಮಬ್ಧಿಯಿದು
ಹರಿಯೋಲ್ ಪ್ರಕಾರದಿಂ ಪರಿಮಾಣದಿಂದೆಯುಂ ವರ್ಣನಾತೀತಮಕ್ಕೆ||
ಪುರುಷೋತ್ತಮಂ ಸಂಹರಿಸಿ ಲೋಕವೆಲ್ಲವಂ
ವರಯೋಗನಿದ್ರೆಯಿಂ ಯುಗದಂತದೊಳ್ ಪವಡಿ
ಸಿರುವನೀಶರಧಿಯೊಳ್ ನಾಭಿಕಮಲಾಸನದ ವಿಧಿ ಪೊಗಳುತಿರೆ ತನ್ನನು||

ಗರಿಗಡಿಯೆ ವಜ್ರಿ ಬಿಂಕವನುಳಿದು ನೂರಾರು ೪
ಗಿರಿಗಳೈತಂದು ಮರೆವೊಕ್ಕವೀ ಸಾಗರವ
ನರಪರರಿಭಯದಿಂ ಶರಣ್ಬೊಕ್ಕೊಲಾರ್ತ್ತಬಂಧುವೆನಿಪ್ಪ ಭೂಮೀಶನಂ॥
ತರುಣಿ ಕೇಳಾದಿಪುರುಷಂ ರಸಾತಳದಿಂದ
ಮಿರದೆ ಮೇಲಕ್ಕೆತ್ತಿದುರ್ವಿಗರೆಗಳಿಗೆಯೀ
ಶರಧಿಯ ಪ್ರಳಯಪ್ರವೃದ್ಧಾಚ್ಛಜಲಮಾನನಾವಗುಂತನಮಾದುದು॥

ಅಲೆದುಟಿಯನೀವ ಚದುರಂ ಜಲಧಿ ಸಾಜದಿಂ ೫
ದೊಲಿದು ಮೊಗವೀವ ತೊರೆಗಳನೀಂಟುವಾಗಳೇ
ಸಲೆ ತನ್ನ ಭಂಗಾಧರವನೀಂಟಿಸುವನಸಾಮಾನ್ಯಮೀತನ ಭೋಗವು॥
ಜಲಚರಾನ್ವಿತನದೀಮುಖಪಯಂ ತೆರೆದ ಬಾ
ಯ್ಗಳೊಳೈದಿ ತುಂಬೆ ಮುಚ್ಚುತೆ ಪಾರುತಿರ್ಪ ತಿಮಿ
ಗಳ ಶಿರೋರಂಧ್ರಂಗಳಿಂ ಚಿಮ್ಮುತಿಹ ಸಲಿಲಧಾರೆಗಳನಿಲ್ಲಿ ನೋಡು॥

ಜಲಕರಿಗಳುತ್ಪತನದಿಂದಂ ದ್ವಿಭಾಗಮಂ ೬
ತಳೆದ ವಾರಿಧಿಫೇನಮಾದಂತಿಗಳ ಕೆನ್ನೆ
ಗಳನಂಟಿ ಕರ್ಣಚಾಮರಶೋಭೆಯಂ ಕ್ಷಣಂ ಪೋಲ್ತಿರ್ಪುದಿಲ್ಲಿ ಮತ್ತಂ॥
ಜಲಜಾಕ್ಷಿ! ವೇಲಾನಿಲವನೀಂಟಲೈದುರಗ
ಕುಲಮಂ ಮಹಾತರಂಗಾಳಿಯಿಂ ಬೇರೆಂದು
ತಿಳಿಸುಗಂ ನೋಡು ರವಿಕಿರಣದಿಂದುಜ್ವಲಿಪ ತತ್ಫಣೋನ್ಮಣಿಸಂಚಯಂ॥

ಅಲೆಯ ಸೆಳೆತದೆ ನಿನ್ನ ತುಟಿಗೆಣೆಯ ವಿದ್ರುಮಾ ೭
ವಳಿಯ ತುದಿಗಂಟಿದ ನಿಜಾನನವನೀಶಂಖ [ಮಿಲ್ಲಿ॥
ಕುಲಮೆನಿತೊ ಕಷ್ಟದಿಂ ಪಿಂದೆಗೆದುಕೊಳ್ವುದಿದ ನೋಡು ನೀಂ ಮತ್ತ
ಜಲವನುರೆ ಕುಡಿಯತೊಡಗಿದ ಜಲಧರಂ ಪಿರಿಯ
ಸುಳಿಯಲ್ಲಿ ಸಿಲ್ಕುತದರಂತೆ ತಾಂ ಭ್ರಮಿಸುತಿರೆ [ತೋರ್ಕುಂ॥
ಜಲಧಿಯಂ ಮಂದರಾಚಲದಿಂದೆ ಮರಳಿ ಮಥಿಸುವ ಮಾಳ್ಕೆಯಿಂದೆ

ವನಧಿ ತಾಂ ಲೋಹಚಕ್ರದೊಲೊಪ್ಪೆ ದೂರದಿಂ ೮
ದಣುರೂಪದೊಳ್ ತೋರ್ಪ ತಾಲೀತಮಾಲವರ
ವನರಾಜಿನೀಲಕೂಲಮದು ತಚ್ಚಕ್ರದ ಕಲಂಕರೇಖೆಯೊಲೆಸೆವುದು॥

ವನಜಾಕ್ಷಿ! ನಾಂ ನಿನ್ನ ಚೆಂದುಟಿಯ:ನೆಳಸಿ ಮಂ
ಡನಕಾಲಪಾನಿಯುಂ ಸಹಿಸದಿರ್ಪುದನರಿದ
ನೆನೆ ತಪಾನಿಲನೀಗ ಕೇದಗೆಯ ದೂಳಿಯಿಂ ತ್ವನ್ಮುಖವ ಸಿಂಗರಿಪನು॥

ಫಲಭರವೆ ಬಾಗಿರ್ಪ ಪೂಗಾಳಿಯಿಂ ಮತ್ತೆ ೯
ಪುಳಿನಂಗಳೊಳ್ ಶುಕ್ತಿಯಿಂ ಸಿಡಿದ ಮುತ್ತುಗಳ
ನೊಳಕೊಂಡ ಶರಧಿತೀರವ ಸೇರ್ದ್ವಿಮಾನದ ವೇಗದಿಂ ಕ್ಷಣದೊಳು॥
ಸಲೆ ತಿರುಗಿ ನೋಡು ಲಂಘಿತಪಥವ ಕರಭೋರು
ವೆಲೆ ಹರಿಣನಯನೆ! ದೂರಾಗುವಾ ಸಾಗರವ
ನುಗಿದು ಮರಳ್ದಪುದೆಂಬತೆರದೊಳೀ ಕಾನನಾನ್ವಿತಭೂಮಿ ಕಂಗೊಳಿಪುದು

ಸುರಮಾರ್ಗದಿಂದೊರ್ಮೆ ವಾರಿಧರಸರಣಿಯಿಂ ೧೦
ದಿರದೊರ್ಮೆ ಪಕ್ಷಿಗಳ್ ಚರಿಪ ಪಥದಿಂದೊರ್ಮೆ
ನೆರೆ ನನ್ನ ಮನದಿಚ್ಛೆಯಂತಂತೆ ಪೋಪುದೀ ಪುಷ್ಪಕಂ ಮತ್ತಮಿಲ್ಲಿ॥
ಗುರುಪಯೋಧ ! ದಿವಿಜಗಜದಾನಗಂಧದಿಂ
ಬೆರೆದು ಬಾಂದೊರೆಯ ತೆರೆಯಿಂ ನಾಂದು ಸಲೆ ಸುಳಿವ [ಕುಡಿವನು॥
ಮರುತನೀ ನಡುವಗಲಿನೊಳ್ ನಿನ್ನ ಮೊಗದೊಳೊಗೆದಿರ್ಪ ಬೆಮರಂ

ವನಜಾಕ್ಷಿ! ನೀಂ ವಿಮಾನದ ಜಾಲಮಾರ್ಗದೊಳ್ ೧೧
ಬಿನದದಿಂ ಲಂಬಿಸಿದ ಕರದಿಂದೆ ಮುಟ್ಟುವೀ [ದಲ್ತೆ?
ಘನಮಿರದೆ ನಿನಗೆ ಕುಡುವೆರಡನೆಯ ವಲಯಮನೆ ಮಿಂಚಿದರೊಳೆಸೆದು
ಎನಿತುಮೆಡರಿಲ್ಲೀ ಜನಸ್ಥಾನದಲ್ಲಿನ್ನು
ಮೆನುತೆ ಕಟ್ಟಿರ್ದ ನವಪರ್ಣಶಾಲೆಗಳಿಂದೆ
ಮಿನುಗುವ ಚಿರೋಜ್ಝಿತಾಶ್ರಮಯಾಶ್ರಮಂಗಳಲ್ಲಿರ್ಪ ತಪಸಿಗಳ ನೋಡು।

ರಮಣಿ! ನಾನರಸುತಿರೆ ನಿನ್ನಂ ಭವಚ್ಚರಣ ೧೨
ಕಮಲವಿಶ್ಲೇಷದಿಂದೊಗೆದಳಲಿನಿಂದೆ ಮಾ [ಳು॥
ನಮನಾಂತು ಬಿಳ್ದುದೆನೆ ತೋರ್ಪ ನಿನ್ನಯ ನೂಪುರವ ಕಂಡೆನೀ ಸ್ಥಲದೊ
ಅಮರರಿಪುದಾವಪಥದಿಂ ನಿನ್ನನೊಯ್ದನದ
ನಮಿತಕೃಪೆಯಿಂ ಸೂಚಿಸಿದವೆನಗೆ ಲತೆಗಳಿವು
ತಮಗೆ ವಾಗಿಂದ್ರಿಯಮುದಿಲ್ಲದಿರೆ ನಮಿತಪಲ್ಲವಶಾಖೆಯಿಂ ಭೀರುವೆ!॥

ಕೊರೆದು ದರ್ಭಾಂಕುರಾಹಾರಮಂ ಮತ್ತಿಲ್ಲಿ ೧೩
ಹರಿಣಿಗಳ್ ಪರಪಿ ತಮ್ಮುತ್ಫುಲ್ಲಾಕ್ಷಿಗಳ
ಪಿರದೆ ತೆಂಕಣದ ಕಡೆಗರುಪಿದವು ನಾನರಿಯದಿರ್ದ ನಿನ್ನಯ ಮಾರ್ಗಮಂ
ಕರಿಗಮನೆ! ಮುಂದೆ ತೋರ್ಪುದು ನೋಡು ಮಾಲ್ಯವ
ನ್ಗಿರಿಯಭ್ರಚುಂಬಿಶೃಂಗಮದಲ್ಲಿ ಮುಗಿಲೋಳಿ [ನೆಯೇ||
ಸುರಿಸಿದುದು ನವಪಯವ ತಾಂ ತ್ವದ್ವಿಯೋಗಾಶ್ರುವಂ ಸುರಿಪ ನನ್ನೊಡ

ಅಳಿವೇಣಿ! ವೃಷ್ಟಿಧಾರಾಹತಮೆನಿಪ್ಪ ಪ ೧೪
ಲ್ವಲದ ಗಂಧಂ ನವಿಲ ನುಣ್ಚರಮುಮರೆವಿರಿದು
ಕೊಳಪ ನೀಪಪ್ರಸೂನಂ ನಿನ್ನನುಳಿದನಗಸಹ್ಯಮಾಗಿರ್ದುವಿಲ್ಲಿ||
ತಳೆದ ಕಂಪನದೆ ನೀ ನಂದೆನ್ನ ನಪ್ಪಿದುದ
ಸಲೆ ನೆನೆದುಕೊಳುತೆ ನಾಂ ಗವಿಗಳೊಳ್ ವ್ಯಾಪಿಸುವ
ಜಲಧರಧ್ವನಿಯು ಸಮಯವ ಕಳೆದೆನೆನಿತೊ ಕಷ್ಟದೊಳಿಲ್ಲಿ ಭಯಶೀಲೆಯು!

ಮಳೆಯಿಂದೆ ನಾಂದಿಳೆಯಿನೆಳ್ದ ಬಾಷ್ಪವನಂಟು ೧೫
ತಲರ್ದ ಕದಳೀಸುಮಂ ಲಗ್ನಧೂಮದೆ ಕೆಂಪ
ವಳೆದ ನಿನ್ನಕ್ಷಿಗಳ ಸಿರಿಯನನುಕರಿಸಿ ಪೀಡಿಸಿತೆನ್ನನಿಲ್ಲಿ ವನಿತೆ!||
ಬಳಿಯ ವಂಜುಳವನದ ಹೊದಿಕೆಯಿಂ ನಸುತೋರ್ಪ
ಚಲಸಾರಸವ್ರಜದೊಳಂ ಪೊಳೆವ ಪಂಪಾಸು
ಜಲಕೆರಗಿತೆನ್ನ ದೂರದಿನೈದಿ ದಣಿದಿರ್ಪ ದಿಟ್ಟಿಯದ ಕುಡಿವೊಲೀಗಂ||

ನೀರೆ! ಕೇಳಿಲ್ಲಿ ಕುವಲಯಕೇಸರಂಗಳಂ ೧೬
ಭೂರಿಮುದದಿಂದೊಂದಕೊಂದೀಯುತಗಲದೆಯೆ
ಸೇರಿರ್ಪ ಕೋಕಮಿಥುನಂಗಳಂ ನಲ್ಮೆಯಿಂದೀಕ್ಷಿಸಿದೆನಗಲ್ದು ನಿನ್ನಂ||
ಚಾರುಸ್ತನಸ್ತಬಕಭಾರದಿಂ ಬಾಗಿದೀ
ತೀರಸ್ಥಿತಾಶೋಕಶಾಖೆಯಂ ನೀನೆ ಕೈ
ಸೇರಿದೆಂದಪ್ಪಿಕೊಳಲೆಳಸುವೆನ್ನಂ ತಡೆದನಶ್ರುಮುಖಸೌಮಿತ್ರಿಯು||

ಜನಕಸುತೆ! ನೋಡು ಪುಷ್ಪಕದಲ್ಲಿ ಜೋಲ್ದ ಕಾಂ ೧೭
ಚನಕಿಂಕಿಣಿಗಳ ದನಿಗೇಳ್ದು ಬಾಂದಳಕೇಳ್ವ
ವಿನುತಗೋದಾವರೀಸಾರಸಂಗಳ್ ನಿನ್ನನಿದಿರ್ಗೊಳ್ಪತೆರದೆ ತೋರ್ಕುಂ||

ತನುಮಧ್ಯೆ! ನೀಂ ಘಟೋದಕದೆ ಬೆಳೆಯಿಸಿದ ಮಾ
ಏನ ಕಿರುಗಿಡಂಗಳೊಳ್ ಮೊಗವೆತ್ತಿ ನೋಳ್ಪ ಮೃಗ
ಗಣದೊಳಂ ಶೋಭಿಪೀ ಪಂಚವಟಿಯೆನ್ನ ಮನಕಿತ್ತುದೊಲಪಿದನೀಕ್ಷಿಸು॥

ಸೊಗಸುವಡೆದೀ ಗೌತಮಿೀತಟವನಂಗಳೊಳ್ ೧೮
ಮೃಗಯಾನಿವೃತ್ತನುಂ ವೀಚಿಕಾಮರುತನಿಂ
ವಿಗತಖೇದನುಮಾಗಿ ನಿನ್ನಂಕದೊಳ್ ಪವಡಿಸಿದುದು ನೆನಪಾದುದೀಗಂ॥
ಮೃಗನೇತ್ರೆ! ನೋಡಿತ್ತಲೈದೆ ಕಲುಷಾಂಬುಶು
ದ್ಧಿಗೆ ಹೇತುವೆನಿಪನುಂ ಭ್ರೂಭಂಗಮಾತ್ರದಿಂ
ನಗಭಿತ್ಪದವಿಯಿಂದೆ ನಹುಷನಂ ಕೆಡಪಿದನುಮಪ್ಪಗಸ್ತ್ಯನ ವಸತಿಯಂ॥

ಆಮಹಿತಕೀರ್ತಿಕಲಶೋದ್ಭವನ ತ್ರೇತಾಗ್ನಿ ೧೯
ಧೂಮಂ ಹವಿರ್ಗಂಧಯುತಮಾಗಿ ಮುಸುಕಿತೀ
ವ್ಯೋಮಯಾನವನಿದಂ ಮೂಸಿದೆನ್ನಾತ್ಮಂ ರಜೋಮುಕ್ತನಿತ್ತ ನೋಡು॥
ಪ್ರೇಮದಿಂ ಮುನಿಶಾತಕರ್ಣಿ ಕ್ರೀಡಿಪ ಕೊಳಂ
ನಾಮದಿಂ ಪಂಚಾಪ್ಸರಮದು ಬನದಿಂ ಬಳಸಿ
ಭಾಮಿನಿಯೆ! ದೂರದಿಂ ಮೇಘಾಂತರಾಲಕ್ಷ್ಯಶಶಿಬಿಂಬದಂತೆಸೆವುದು॥

ಹರಿಣಗಣದೊಡನೆ ದರ್ಭಾಂಕುರಾಹಾರದಿಂ ೨೦
ಚರಿಸುವಾ ಶಾತಕರ್ಣಿಯ ನೂಂಕಿದಂ ಸುರೇ
ಶ್ವರನವನ ತಪಕಂಜಿ ಪಂಚಾಪ್ಸರೋಯೌವನದ ಬಲೆಗೆ ಪೂರ್ವದಲ್ಲಿ॥
ಪರಿಶೋಭಿಪಾ ಸರದ ಜಲದೊಳಿಹ ಸೌಧವ
ಲ್ಲಿರುತಿರ್ಪ ತನ್ಮುನಿಯ ಸಂಗೀತಮುರಜರವ [ಸುವುದು॥
ಮುರೆ ಬಾಂಗಡರ್ದು ಪುಷ್ಪಕಶಿರೋಗೃಹದೊಳ್ ಪ್ರತಿಧ್ವನಿಯನೊದಗಿ

ಪೆರನೋರ್ವತಪಸಿ ಪೆಸರಿಂ ಸುತೀಕ್ಷ್ಣಂ ಸೌಮ್ಯ ೨೧
ಚರಿತನೀತಂ ಜ್ವಲಿಪ ಚತುರಗ್ನಿಗಳ ನಡುವೆ
ಪರತಪವನೆಸಗುತಿರ್ಪಂ ಲಲಾಟಂತಪದಿನಾಧೀಶನಾಗಿ ನೋಡು॥
ಸುರಪಂಗೆ ಶಂಕೆಯಿತ್ತೀ ಮುನಿಯ ಮನಸಿಗ
ಸ್ಥಿರತೆಯಂ ಕುಡಲಾರ್ತುವಿಲ್ಲಮರವನಿತೆಯರ ಗಳುಂ॥]
ಕಿರುನಗೆಯ ನೋಟಮುಂ ನೆವದೆ ನಸು ತೋರಿಸುವ ರಶನೆಯ ವಿಲಾಸಂ

ರಮುನಿಪನುದ್ಬಾಹುವೀತಂ ಮೃಗಾಂಗಮುಂ ೨೨
ರಿಪ ಮೇಣ್ ಕುಶವ ಕೊಯ್ವುದಕೆ ನೆರವಾದ ಬಲ
ರಮ ನಭವಾಕ್ಷಿಮಾಲಾವಲಯಮುಂ ನಮ್ಮ ಕಷೆ ನೀಡಿ ಗೌರವಿಸುತಂ॥
ರದೆ ನಾನರ್ಪಿಸಿದ ನತಿಯ ಮೌನವ್ರತವ
ರಿಸಿರ್ಪಕತದೆ ಮಸ್ತಕದ ನಸುಕಂಪನದೆ [ಯುಂ॥
ರೆ ಪರಿಗ್ರಹಿಸಿ, ಪುಷ್ಪಕದ ಮರೆ ತೊಲಗೆ ಮರಳಿಟ್ಟನಿಸನೊಳ್ ದಿಟ್ಟಿ

ಳಗೆ ಕಾಣ್ಬುದು ನೋಡು ಶರಭಂಗಋಷಿಯ ನಿ ೨೩
ರ್ಗಳತಪೋವನಮಾಹಿತಾಗ್ನಿ ತನ್ಮುನಿ ತೃಪ್ತಿ
ೊಳಿಸಿ ಚಿರಮಿಂಧನದೊಳಗ್ನಿಯಂ ಕಡೆಗೆ ಮನುಪೂತತನುವನೆ ಬೇಳ್ದನು
ಲಕಂಠಿ! ಈಗಳೀವನದಲ್ಲಿ ನೆರಳಿನಿಂ
ಳಲಿಕೆಯ ನೀಗಿ ತನಿವಣ್ಗಳಂ ತಿನಲಿತ್ತು
ಲೆ ಮಾಡುತಿರ್ಕುಮತಿಥಿಗಳ ಸೇವೆಯನವನ ಮಕ್ಕಳಂತಿರೆ ತರುಗಳೇ॥

ಾರಾರವೋದ್ಗಾರಿದರಿಯ ಮುಖದಿಂ ಮತ್ತೆ ೨೪
ಾರುಶೃಂಗಾಗ್ರಗತಘನವಪ್ರಪಂಕದಿಂ
ಾರಾಜಿಪೀ ಚಿತ್ರಕೂಟಮೆಳೆವುದು ದಿಟ್ಟಿಯಂ ವೃಷಭನೋಲ್ ಸುಗಾತ್ರಿ!
ೂರಮಿರ್ಪುದರಿಂದೆ ತನುತೆಯಿಂ ಕಾಂಬ ಚಲ
ೂರದಿಂ ಶೈಲಮಂ ಬಳಸಿ ವಿಮಳತೆಯಾಂತು [ಮೊಗದ॥
ೋರುವೀ ಮಂದಾಕಿನಿಯು ಭುವಿಯ ಕೊರಳ ಮುಕ್ತಾವಳಿಯೊಲಿಸೆಗು

ರಿಯ ಬಳಿಯಿರ್ಪೀ ತಮಾಲಮಂ ನೋಡಿದರ ೨೫
ರಿಮುಳಿತಪಲ್ಲವದೆ ವಿರಚಿಸಿರ್ದೆಂ ಯವಾಂ
ರಪಾಂಡುಮುಪ್ಪ ಸಿನ್ನಯ ಕಪೋಲವ ರಂಜಿಪವತಂಸಮಂ ಮಾನಿನಿ॥
ರಿಕಿಸಿತ್ತಲ್ ಮತ್ತಮತ್ರಿಯ ತಪಃಸಿದ್ಧಿ
ರವನಮನಿಲ್ಲಿ ಕುಸುಮಿಸದೆ ಫಲಿಸುವ ಕುಜೋ [ಮಹಿಮೆಯಂ॥
ಕ್ರಮಭಯದೊಳೆ ನಮ್ರತೆಯನಾಂತ ಜಂತುಗಳುಮೊರೆಗುಮಾ ಮುನಿ

ನಸೂಯೆಯಿಲ್ಲಿ ಮುನಿಜನದ ಮಜ್ಜನಕಾಗಿ ೨೬
ುನಸಿಜಾರಿಯ ಮೌಳಿಮಾಲೆಯೆನಿಸುವ ಜಹ್ನು [ಯುಂ॥
ನಯೆಯಂ ಪ್ರವಹಿಸುವೊಲೆಸಗಿದಳ್ ಸಪ್ತರ್ಷಿಕರಲೂನಹೇಮಾಬ್ಜೆ

ಅನಿಲನಿಲ್ಲದಕತದೆ ಚಲಿಸದೀ ತರುಗಳುಂ
ವನಮಧ್ಯವೇದಿಯೊಳ್ ಯೋಗಮಂ ಮಾಳ್ಪವೆನೆ [ರಮಣಿ॥
ಮಿನುಗುವವು ವೀರಾಸನದೊಳಿಲ್ಲಿ ಜಾನಿಸುವ ಋಷಿಗಳೊಲ್ ನೋಡು

ವಿಮಳೆ! ಮುನ್ನಂ ನಿನ್ನ ನುತಿಯಾಂತ ವಟಮಹೀ ೨೭
ಜಮಸಿದಂ ಶಾಮನಾಮಕಮನೀಕ್ಷಿಸು ಪಣ್ತು
ಕಮನೀಯಮಾಗಿರ್ಪುದಿದು ಪದ್ಮರಾಗಯುತಮರಕತದ ರಾಶಿಯಂತೆ॥
ರಮಣಿ! ಮತ್ತಂ ಪರಿಕಿಸಿಂದ್ರನೀಲಾನ್ವಿತೋ
ತ್ತಮಮೌಕ್ತಿಕಾಹಾರದಂತಿರೊಂದೆಡೆಯಲ್ಲಿ [ಯೊಳು॥
ಕುಮುದಂಗಳೊಡನೆ ರಚಿಸಿದ ಸಿತಾಬ್ಜದ ಮಾಲೆಯಂತೆ ಪೆರತೊಂದೆಡೆ

ನೀಲವರ್ಣಮರಾಳಸಂಕಲಿತರಾಜಹಂ ೨೮
ಸಾಳಿಯಂತೊಂದೆಡೆಯೊಳೊಪ್ಪುತಂ ಮೇಣ್ ಲಸ
ತ್ಕಾಲಾಗರುವಿರಚಿತಚಿತ್ರಪತ್ರದ ಚಂದನೋರ್ವಿಯೊಲ್ ಬೇರೆಡೆಯೊಳು॥
ಭೂಲಲನೆಯಣುಗಿ! ಪರಿಕಿಸು ನೆಳಲೊಳಿಹ ತಮೋ
ಜಾಲದಿಂ ತಳ್ತ ಜೊನ್ನದೊಲೊಂದೆಡೆಯೊಳಂತ
ರಾಳಗತನಭದಿಂದೆ ಕೂಡಿದ ಶರನ್ಮೇಘಲೀಲೆಯೋಲ್ ಬೇರೆಡೆಯೊಳು॥

ಫಣಿವೇಣಿ! ನೋಡು ಬೇರೆಡೆಯೊಳಸಿತಾಹಿಭೂ ೨೯
ಷಣವಾಂತ ಭಸಿತಭೂಷಿತಶಿವಶರೀರವೋಲ್
ಮಿನುಗುವಳ್ ಯಮುನಾತರಂಗಸಂಕಲಿತಪ್ರವಾಹೆಯೊದೀಗಂಗೆಯು॥
ವನಧಿಯರಸಿಯರುಭಯರೀ ಸಂಗಮದ ಸುಪಾ
ವನಜಲಸ್ನಾನದಿಂ ಪೂತಾತ್ಮರಾದವರ್
ತನುವ ಸಂತ್ಯಜಿಸೆ ತತ್ವಜ್ಞಾನಮಿರದೊಡಂ ಮರುಭವಮೆ ಇಲ್ಲವರ್ಗೆ॥

ಏಣಾಕ್ಷಿ! ನೋಡೀ ನಿಷಾದಪತಿನಗರಮಂ ೩೦
ನಾನಿಲ್ಲಿ ಮಕುಟಮಂ ಬಿಟ್ಟು ಜಡೆಯಂ ಕಟ್ಟೆ
ತಾನಳಲ್ದಂ ಸುಮಂತ್ರಂ ಸಫಲಮಾಯ್ತು! ಕೈಕೇಯಿ! ನಿನ್ನಿಷ್ಟಮೆಂದು॥
ಮೇಣೀಕ್ಷಿಸೀ ಸರಯುವಂ ಬುದ್ಧಿಗೆಂತು ಪ್ರ
ಧಾನಮಂತಿವಕೆ ಜನ್ಮಸ್ಥಲಂ ಪುಣ್ಯಜನ
ಮಾನಿನೀಕುಚಭುಕ್ತಕನಕಾಜ್ಜರೇಣುಮಾನಸಸರಮೆ ಎಂದೊರೆವರು॥

ಸರಯುವಿದು ನಮ್ಮಯೋಧ್ಯಾಪುರಿಯ ಬಳಿಯಿಂವೆ ೩೧
ಪರಿತರ್ಪದಿಕ್ಷ್ವಾಕುತುರಗಮೇಧಾವಭೃತ [ತು॥
ಪರಿಪೂತಜಲದೊಳಂ ತೀರದೊಳ್ ನಟ್ಟ ಯೂಪಂಗಳೊಳ್ ಶೋಭೆಯಾಂ
ಪಿರಿದಾಗಿ ಪಯುಪೀಂಟ್ಸ ಬಳೆದು ಪುಳಿನಾಂಕದೊಳ್
ನೆರೆ ಸುಖಂಬಡೆವ ರಘುನೃಪತಿಗಳ್ಗೆಲ್ಲರ್ಗ
ಮರಿಯೆ ಸಾಮಾನ್ಯಧಾತ್ರಿಯೊಲೊಪ್ಪುಪೀ ನದಿಯುನೆನ್ನ ಬಗೆ ಗೌರವಿಪುದು

ಜನಕಸುತೆ! ನೋಡು ಮಜ್ಜನನಿಯೊಲ್ ಪೂಜ್ಯಭೂ ೩೨
ಪನನಗಲ್ದೀ ತರಂಗಿಣಿ ತಂಬೆಲರ್ಗೂಡಿ
ಮಿನುಗುವಾ ತೆರೆಗೆಯ್ಗಳಿಂ ದೂರವರ್ತಿಯಾದೆನ್ನನಪ್ಪುವೊಲಿಸೆವಳು॥
ವನಜಾಕ್ಷಿ! ಮತ್ತಮೀಕ್ಷಿಸು ಮುಂದೆ ಸಂಜೆಗೆಂ
ಪಿನ ದೂಳಿ ನೆಲದಿನೆಳ್ವುದದರಿನಾಂ ಪವನ
ತನಯಸೂಚಿತನಾಗಿ ಬಲಯುತಂ ಭರತನೈತರ್ಪನೆಂದೂಹಿಸುವೆನು॥

ಘುರದೊಳ್ ಖರಾದಿಗಳ ಕೊಂದು ಬಂದೆನಗೆ ತಾಂ ೩೩
ನೆರೆ ರಕ್ಷಿಸಿದ ನಿನ್ನನಿತ್ತವೋಲ್ ಲಕ್ಷ್ಮಣಂ,
ಗುರುವಚವ ಪೊರೆದೆನಗೆ ಶುದ್ಧರಮೆಯಂ ಸಾಧುಭರತನೀವುದು ನಿಕ್ಕುವಂ।
ತರುಣಿ ನೋಡಲ್ಲಿ ಮುಂದಿರೆ ವಸಿಷ್ಠಂ ಸೈನ್ಯ
ಮಿರೆ ಪಿಂತೆ ತಾನುಟ್ಟು ನಾರುಡೆಯನೆನ್ನೆಡೆಗೆ [ಯಿಂ॥
ಬರುತಿರ್ಪನವನರ್ಘ್ಯಮಂ ಪಿಡಿದು ವೃದ್ಧಮಂತ್ರಿಗಳೊಡನೆ ಕಾಲ್ನಡೆಗೆ

ಹರೆಯದೊಳೆ ತನ್ನಂಕಗತಳಾದ ಪಿತನಿತ್ತ ೩೪
ಸಿರಿಯನುಪಭೋಗಿಸಂ ಮದ್ಭಕ್ತಿಯಿಂದಮೀ
ಭರತನಸಿಧಾರಾವ್ರತಸ್ಥನಾದಂತಿರವಳೊಡನಿಸಿತು ಕಾಲಮೆಂದು॥
ಧರೆಯ ತನುಭವೆಗಿಂತು ಪೇಳ್ವ ರಾಮನ ಬಗೆಯ
ನರಿದಭ್ರಯಾನಾಧಿದೇವತೆ ವಿಮಾನಮಂ
ಸುರಪಥದಿನಿಳೆಗಿಳುಪಿದಳ್ ವಿಸ್ಮಯದೆ ನೋಡುತಿರೆ ಬಂದ ಜನತೆಯಾಗಂ।

ಧರಣಿಗಾಸನ್ನಮಾದ ಸ್ಫಟಿಕಸೋಪಾನ ೩೫
ಸರಣಿಯಂ ಮುಂದಿರ್ದು ತೋರಿಸೆ ವಿಭೀಷಣಂ
ನೆರೆ ಸೇವೆಗೆಯ್ವ ಕಪಿವಲ್ಲಭನ ಕೈಪಿಡಿದು ಯಾನದಿಂದಿಳಿದು ರಾಮಂ॥

ಭರದೆ ಕುಲಗುರುಗೆರಗಿ ಕೊಂಡರ್ಘ್ಯಮಮಂ ಬಳಿಕ
ಭರತನಂ ಬಿಗಿದಪ್ಪಿ ತನಗಾಗಿ ಪಿತೃರಾಜ್ಯ
ಪರಮಜ್ಜನವನುಳಿದ ತಚ್ಛಿರವನಾಘ್ರಾಣಿಸಿದನಶ್ರುಗಳ ಸುರಿಸುತಂ||

ಬೆಳೆದ ಮುಖರೋಮದಿಂ ವಿಕೃತಿಯಂ ಪೊಂದಿ ನೆಲ ೩೬
ಕಿಳಿದ ಜಡೆಗಳ ವಟಂಗಳೊಲಿರ್ದು ನತಿಗಳಂ
ಸಲಿಪ ವೃದ್ಧಾಮಾತ್ಯರಂ ಕೃಪಾದೃಷ್ಟಿಕುಶಲಪ್ರಶ್ನೆಯಿಂದೆ ಪರಸಿ||
ಬಳಿಕವಮಾಪದ್ಬಂಧುವೀಕಪೀಂದ್ರಂ ಮತ್ತೆ
ಕೊಳುಗುಳದ ವೀರನೀ ಪೌಲಸ್ತ್ಯನೆಂದು ತಾಂ
ತಿಳಿಸೆ ರಾಮಂ ಲಕ್ಷ್ಮಣನನುಳಿದು ಭರತನಪರೀರ್ವರ್ಗೆ ವಂದಿಸಿವನು||

ಬಳಿಕ ನಾಭರತನೈತಂದು ಲಕ್ಷ್ಮಣನೆಡೆಗೆ ೩೭
ತಲೆವಾಗಿದವನ ತಾಂ ತೆಗೆದಪ್ಪಿ ತನ್ನ ತೋ
ಳ್ಗಳ ಪೀಡಿಪೋಲ್ ತೋರ್ದನಿಂದ್ರಜಿತ್ಪ್ರಹರಣವ್ರಣಕಠಿಣತದ್ವಕ್ಷದಿಂ||
ತಳೆದು ನರತನುವ, ರಾಮಾಜ್ಞೆಯಿಂ ವಾನರಂ
ಗಳ ಚಮೂಪತಿಗಳಾಗಂ ಮದೋದಕಧಾರೆ
ಗಳ ಸುರಿವ ವರಗಜಂಗಳನೇರ್ದು ಪಡೆದರಚಲಾಧಿರೋಹಣಸೌಖ್ಯಮಂ||

ದನುಜಮಾಯಾಕಲಾರಚಿತಸ್ವಕೀಯರಥ ೩೮
ಗಣಮುಮಂ ಪಳಿವ ತೇರ್ಗಳನಾಂತನಾ ವಿಭೀ
ಷಣನಾತ್ಮಚರರೊಡನೆ ದಶರಥಕುಮಾರನಾಜ್ಞಾಬದ್ಧನಾಗಿ ಬಳಿಕಂ||
ಅನುಜಯುತತದ್ರಾಮನೇರ್ದಂ ಮರಳ್ದು ಶೋ
ಭನಪತಾಕವ ಕಾಮಗತಿಯಾನಮಂ ನಿಶಾ
ಜನಿತಚಲತಟಿದಭ್ರವೃಂದಮಂ ಬುಧಗುರುಗಳೊಡನಿಂದುವೇರ್ದ ತೆರದೆ||

ಪ್ರಳಯದಿಂ ಭೂವನಿತೆಯಂ ವರಾಹಂ ಜಲದ ೩೯
ಕುಲದಿಂದೆ ಚಂದ್ರಿಕಳೆಯಂ ಶರತ್ಸಮಯಮುಂ
ಸಲೆ ಮರಳಿ ತಂದಂತೆ ರಾಮನಾ ದಶಕಂಠನಿಂ ತಂದ ಸೀತೆಗಲ್ಲಿ||
ನಲವಿಂದೆ ನಮಿಸೆ ಭರತಂ ಭ್ರಾತೃವಂತೆ ಜಡೆ
ಗಳ ಧರಸಿದವನ ತಲೆಯುಂ ರಕ್ಕಸನ ನತಿಯು
ಪಳಿದ ಸದ್ವ್ರತದ ತತ್ಪಾದಮುಂ ತಳ್ತು ಪಡೆದವು ಪರಸ್ಪರಪುಷ್ಟಿಯಂ||

ಮುಂದೆ ಗಮಿಸುತಿರೆ ನಿಖಿಳಪ್ರಜಾವರ್ಗಮಾ ೪೦
ನಂದದಿಂ ಪೂಜ್ಯನಾದಾ ದಶರಥಾವನಿಪ
ನಂದನಂ ಮಂದವೇಗದ ವಿಮಾನದೊಳನುಜಸೀತಾಸಮೇತನಾಗಿ॥
ಬಂದು ತಾಂ ಕ್ರೋಶಾರ್ಧಪರ್ಯಂತಮುತ್ಸುಕತೆ
ಯಿಂದೆ ಶತ್ರುಘ್ನಸಜ್ಜಿತಪಟಾಲಯನಿಚಯ
ದಿಂದೆ ಕಂಗೊಳಿಪ ಸಾಕೇತನಗರೋಪವನಮಧ್ಯದೊಳ್ ವಾಸಿಸಿದನು॥

---

# ಚತುರ್ದಶಸರ್ಗಂ.

ಸೂ:— ಕುಂದಿಲ್ಲದಂತೆ ರಾಜ್ಯವನಾಳ್ವೊಡಂ ಲಂಕೆ
ಯಿಂದೆ ಸೀತೆಯ ಮರಳ್ದು ತಂದ ಕಾರಣದಿಂದೆ
ಬಂದ ಲೋಕಾಪವಾದಕ್ಕಂಜಿ ರಾಮನುಳಿದಂ ಗರ್ಭವತಿಯನವಳಂ॥

ಬಳಿಕ ಮಾಶ್ರಯವೃಕ್ಷವಿಚ್ಛೇದಯುಕ್ತ ಲತೆ ೧
ಗಳತೆರದೆ ಭರ್ತೃನಾಶದೆ ಶೋಕದಶೆಯ ತಾಂ
ತಳೆದ ತಾಯ್ವರನೇಕಕಾಲದೊಳ್ ತದ್ವನದೆ ರಾಮಲಕ್ಷ್ಮಣರೀಕ್ಷಿಸಿ॥
ಸಲೆ ನಮಿಸೆ, ರಿಪುಹನನವಿಕ್ರಮಾನ್ವಿತಸುತ
ರ್ಕಳನವರನಾ ಉಭಯಮಾತೆಯರ್ ಸುರಿವಳಲ
ಜಲದ ಕಣ್ಣಿಂ ನೋಡದೊಡಮರಿದರವರಂಗಸಂಸ್ಪರ್ಶಸುಖದೊಳಾಗಂ॥

ಸುರಸರಿತ್ಸರಯುಗಳ ಗ್ರೀಷ್ಮತಪ್ತಾಂಬುವಂ ೨
ಪರಿವ ಹಿಮಗಿರಿನಿರ್ಝರೋದಕಂ ವಾರಿಪೋಲ್
ಪರಿಹರಿಸೆ ತಮ್ಮ ಶೋಕೋಷ್ಣಬಾಷ್ಪವ ಶೀತಹರ್ಷಾಶ್ರುವಾ ತಾಯ್ಗಳು॥
ವರತನುಜರಂಗದಸುರಾಸ್ತ್ರವ್ರಣಂಗಳಂ
ಸುರಿವ ನೆತ್ತರದೇರ್ಗಳಂ ಮುಟ್ಟುವೊಲ್ ಮುಟ್ಟಿ
ಮರುಗುತಂ ಕೋರ್ದುದಿಲ್ಲಂ ಕ್ಷತ್ರವನಿತೇಷ್ಟವೀರಸೂಪದವನಾಗಂ॥

ಪೇಳಲಾಗದ ಕಷ್ಟಮಂ ಪತಿಗೆ ಕೊಟ್ಟದು ೩
ಶ್ಶೀಲಯುತೆ ಸೀತೆ ನಾನೆಂದು ನಿಜನಾಮಮಂ
ಪೇಳಿ, ಸಮಭಕ್ತಿಯಿಂ ಸೊಸೆ, ಸಗ್ಗವಾಂತ ಮಾವನ ಮಹಿಷಿಯರ್ಗೆ ನಮಿಸೆ

ಏಳು ಬಾಲಿಕೆ! ಸಾನುಜನ ಕಾಂತನತಿದುಃಖ
ಜಾಲಮಂ ನಿನ್ನ ಸದ್ವೃತ್ತಮೇ ನೀಗಿದುದು
ಕೇಳೆಂದವರ್ ಪ್ರೇಮವಚನದಿಂ ನನ್ನಿಯನೆ ನುಡಿದರಾ ಪ್ರಿಯವಧುವಿಗೆ॥

ಬಳಿಕಮಾ ರಾಮನಭಿಷೇಕಮಂ ಜನನಿಯ ೪
ರ್ಕಳ ಹರ್ಷಬಾಷ್ಪದಿಂ ಪ್ರಾರಬ್ಧಮಾದುದಂ
ನಲಿದು ತೀರ್ಥಾನೀತಕನಕಕಲಶೋದಕದೆ ನಡಸೆ ವೃದ್ಧಾಮಾತ್ಯರು॥
ನಿಲದೆ ರಕ್ಷಃಕಪೀಂದ್ರರ್ ಸರೋವರಸರಿ
ಜ್ಜಲಧಿಯಿಂ ತಂದಂಬುರಾಶಿ ಬಿಳ್ದತ್ತು ತ
ನ್ಮಲರಹಿತಶಿರದಲ್ಲಿ ವಿಂಧ್ಯಾಶಿಖರದಲ್ಲಿ ಬಿಳ್ದೊಲಂಬುದಜಲಾಳಿ॥

ಪರಿಕಿಸೆ ತಪಸ್ವಿನೇಪಥ್ಯಮಂ ತಳೆದಂದೆ ೫
ನೆರೆ ದರ್ಶನೀಯನಾಗೆಸೆದ ರಾಮಂಗಾಗ
ವಿರಚಿಸಿದ ರಾಜವೇಷದ ಶೋಭೆ ಪುನರುಕ್ತಿದೋಷಮೆನಿಸಿರಲಾತನು॥
ವರಮಂತ್ರಿದನುಜಕಪಿನಿಜಬಲಾನ್ವಿತನಾಗಿ
ಪುರವ ತೋರಣಯುತವ ಪೊಕ್ಕನಾ ಪೌರರ್ಗೆ
ಪಿರಿದಾಗೆ ತೂರ್ಯರವದಿಂ ಮುದಂ ಸೌಧಂಗಳಿಂ ಸುರಿಯೆ ಲಾಜವೃಷ್ಟಿ॥

ಚಾಮರಂಗಳ ಬೀಸೆ ಶತ್ರುಘ್ನಲಕ್ಷ್ಮಣರ್ ೬
ಪ್ರೇಮದಿಂ ಭರತನೇ ಕೊಡೆವಿಡಿಯೆ ಮೆಯ್ವೆತ್ತ
ಸಾಮಾದ್ಯುಪಾಯಸಂಘದೊಲೊಪ್ಪಿದಂ ರಾಘವಂ ರಥದೊಳನುಜರೊಡನೆ
ರಾಮಣೀಯಕಸೌಧಪಂಕ್ತಿಯಿಂದೆಳ್ವಗರು
ಧೂಮರಾಜಿಯದಸಿಲಭಿನ್ನಮಾಗೆಸೆದುದಾ
ರಾಮನೈತಂದು ವನದಿಂದೆ ಬಿರ್ಚಿದ ಪುರಾಂಗನೆಯ ಜಡೆಯೆಂಬೊಲಾಗಂ॥

ಧರೆಯಣುಗಿಯತ್ತೆಯರ್ ಗೆಯ್ದ ವರವೇಷಮಂ ೭
ಧರಿಸಿ ಕರ್ಣೀರಥದೊಳಾಗಮಿಸಿದಳ್ ನಮಿಸೆ [ಮತ್ತಂ॥
ಪುರವನಿತೆಯರ್ ಸೌಧಜಾಲಂಗಳೊಳ್ ಕಾಣ್ಬ ಮುಗಿದ ಕರಯುಗದೆ
ಹರಿಸದಿಂದನಸೂಯೆ ತನಗಿತ್ತ ಶಾಶ್ವತ
ಸ್ಫುರದಂಗರಾಗವಾಂತೆಸೆದಳಾ ಸೀತೆ ಪತಿ
ಪರಿಶುದ್ಧಳೆಂಬುದಂ ಪುರಿಗರುಪಲೆಳಸೆ ಮಗುಳ್ವಗ್ನಿಗತಳಾವತೆರದೆ॥

ಪರಿಭೋಗ್ಯವಸ್ತುಯುತಗೇಹಂಗಳೊಳ್ ಸಖರ ೮
ನಿರಿಸುತಾಲೇಖ್ಯಶೇಷನ ಪಿತನ ಪೂಜೋಪ
ಕರಣಾನ್ವಿತಾಲಯುವ ಸುರಿವ ಕಂಬನಿಯಿಂದೆ ಪೊಕ್ಕು ರಾಘವನಾಗ ತಾಂ।
ಕರಯುಗವ ಮುಗಿದು ನಿಂದೆಲೆ ತಾಯೆ! ನಿನ್ನಭಾ
ಸುರಪುಣ್ಯದಿಂದೆನ್ನ ತಂದೆ ಸುರಪದವೀವ
ವರಸತ್ಯದಿಂ ಜಗುಳ್ದುದಿಲ್ಲೀದು ಭರತಜನನಿಯು ಲಜ್ಜೆಯಂ ಕಳೆದನು॥

ಜನಕಜಾಪತಿಯಾಗ ಸಂಕಲ್ಪಮಾತ್ರಸಂ ೯
ಜನಿತಸಿದ್ಧಿಗಳ ಕಪಿವರವಿಭೀಷಣಮುಖರ
ಮನಕಚ್ಚರಿಯನೀವ ವಸ್ತುಸಮುದಾಯದಿಂದವರನುಪಚರಿಸಿ ಮತ್ತಂ।
ತನಗೆಸಗಲಭಿನಂದನವ ಬಂದ ದಿವ್ಯಮುನಿ
ಜನಮುಖ್ಯರೆಲ್ಲರ್ಗೆ ತಾಂ ಕೊಂದ ಶತ್ರುವಿನ
ಜನನಾದಿಚರಿತಮಂ ನಿಜಶೌರ್ಯಗೌರವಾಸ್ಪದಮನೈಸಲೆ ಪೇಳ್ದನು॥

ವರತಪೋಧನರವರ್ ಪೋಗೆ, ಸುಖಪರತೆಯಿಂ ೧
ಪರಿಯುದೊಲ್ ಮಾಸಾರ್ಧಮಂ ಕಳೆದ ಕಪಿನಿಶಾ
ಚರನಾಥರವನಿಜಾಕರಲಬ್ಧಗೌರವರ ಬಿಳ್ಕೊಟ್ಟು ರಾಮನಾಗಂ॥
ಸ್ಮರಣಮಾತ್ರದೆ ಬಳಿಗೆ ಬರ್ಪುದುಂ ರಾವಣನ
ಹರಣದೊಡನೆಯೆ ಸೆಳೆದುಕೊಂಡುದಭ್ರದ ಸುಮಾ
ಭರಣಮುಮೆನಿಪ್ಪ ತತ್ಪುಷ್ಪಕವ ಕಳುಪಿದಂ ತಾಂ ಕುಬೇರಂಗೆ ಮರಳ್ದು

ಜನಕನಾಜ್ಞೆಯೊಳಿಂತು ವನವಾಸಮಂ ಗೆಯ್ದು ೧
ಜನಕಜಾಧವನಾಂತು ರಾಜ್ಯಭಾರವ ತನ್ನ
ಯನುಜರೊಳ್ ಧರ್ಮಾರ್ಥಕಾಮಂಗಳಲ್ಲದೆಂತಂತೆ ಸಮವೃತ್ತನಾಗಿ॥
ಜನನಿಯರನೆಲ್ಲರಂ ನೇಹದಿಂ ಭೇದ
ವೆಳ್ಳನಿತುವಂ ಮಾಡದುಪಚರಿಸಿದಂ ನಿಜಷಡಾ
ನನಪೀತಕುಚಸಮನ್ವಿತಕೃತ್ತಿಕೆಯರಂ ಕುಮಾರನಾದರಿಸಿದಂತೆ॥

ತನ್ನುದಾರತೆಯಿಂದೆ ಪ್ರಜೆಗಳುರೆ ಧನಿಕರುಂ ೧
ತನ್ನ ಭಯರಹಿತರಕ್ಷಣದೆ ಸತ್ಕೃತಿಗಳುಂ
ತನ್ನ ಶಿಕ್ಷಣದೆ ಪಿತೃಮಂತರುಂ ತಾನಳಲ ಕಳೆಯೆ ಸುತಯುತರಾಗಿರೆ॥

ತನ್ನ ಪೌರಪ್ರಯೋಜನವನಾವಗಮೈದೆ
ತನ್ನಕ್ಷಿಯಿಂ ನೋಳ್ಪ ರಾಘವಂ ಕ್ರೀಡಿಸಂ
ತನ್ನೊಡನೆ ಭೋಗಿಸಲ್ಕಮಳತನುವಾಂತ ರಮೆಯಂತಿರ್ಪ ಸೀತೆಯೊಡನೆ||

ಪುನಮೆಳಸಿದೊಲ್ ಚಿತ್ರಶೋಭಿತಗೃಹಂಗಳ ೧೩
ಲ್ಲನಿತು ವಿಷಯವ ಭೋಗಿಸವನಿಜಾರಾಘವರ್
ನೆನೆಯೆ ದಂಡಕವಿಪಿನದುಃಖಮನದುಂ ಸೌಖ್ಯಮೆನಿಸಿತ್ತವರ್ಗೆ ಬಳಿಕಂ||
ಜನಕಸುತೆ ಸಂಸ್ನಿಗ್ಧನೇತ್ರದಿಂ ಮತ್ತೆ ಶರ
ತೃಣಶುಭ್ರತೆಯನಾಂತ ಮುಖದಿಂದೆ ಗರ್ಭಲ [ತಾಂ||
ಕ್ಷಣವ ಸೂಚಿಸಿ ಪತಿಗೆ ಮಿಗೆ ಮೋದವಿತ್ತಳೊರೆಯದೆಯೆ ಬಾಯಿಂಪವಂ

ಚಾರುತನುಕಾರ್ಶ್ಯದೊಳ್ ನೀಲಚೂಚುಕದೊಳಂ ೧೪
ರಾರಾಜಿಸುವ ವಿಲಜ್ಜಿತೆಯ ಸತಿಯಂ ತೊಡೆಯ
ನೇರಿಸಿಕೊಳುತ್ತೆ ರಹದೊಳ್ ರಾಘವಂ ಮನದ ಬಯಕೆಯಂ ಕೇಳಲವಳು|
ಕ್ರೂರಮೃಗದಷ್ಟನೀವಾರಬಲಿಗಳೊಳಂ ಸು
ಧೀರಮುನಿಕನ್ಯೆಯರ್ಕಳೊಳೆಸೆವ ಸುರನದೀ
ತೀರಕುಶರಂಜಿತತಪೋವನಂಗಳ್ಗೆ ಮಗುಳ್ದಂ ಪೋಗಲಿಚ್ಛೈಸಿದಳು||

ಇನಿಯಳೆಳಸಿದುದನೆಸಗಲ್ಕೊಪ್ಪಿ ತನ್ನ ರ ೧೫
ಕ್ಷಣೆಗೆ ಮುದವಾಂತಯೋಧ್ಯೆಯ ನೋಳ್ಪಕತದಿಂದ
ಮನುಚರರ್ವೆರಸಿ ನಭಮುಂ ಚುಂಬಿಸುವ ಸೌಧತಲಕೇರ್ದು ರಾಮನಾಗಂ||
ಘನವೃದ್ಧಿಯಾಂತಂಗಡಿಗಳ ನೃಪಮಾರ್ಗಮಂ
ಬಿನದಿಪಾ ಪುರವಿಲಾಸಿಗಳಿಂದೆ ತುಂಬಿದುದ [ದಂ||
ವನವೃಂದಮಂ ಮತ್ತಮುಟೆ ಚರಿಸುವೋಡುಗಳ ಸರಯುವಂ ಕಂಡು ನಲಿ

ಪರಿಶುದ್ಧಚರಿತನುಂ ವಾಗ್ಮಿವರನುಂ ವಿಲಸ ೧೬
ದುರಗಾಧಿಪೋರುಭುಜನುಂ ವಿಜಿತರಿಪುವೆನಿಪ
ನರಪರಾಮಂ ಭದ್ರನೆಂಬ ಚರನಂ ಕೇಳಲೆಳಸುತಂ ಜನವಾರ್ತೆಯಂ||
ಇರದೆ ನಿರ್ಬಂಧಿಸಲ್ಕಾಗ ರಾಜೋತ್ತಮನೆ
ಸುರವೈರಿಭವನದಿಂ ದೇವಿಯಂ ತಂದು ನೀ
ನಿರಿಸಿಕೊಂಡುದನುಳಿದು ನಿನ್ನಿತರಗುಣವ ಬಣ್ಣಿಪುದು ಜನಮೆಂದನವನು||

ಸತಿನಿಂದೆಯಿಂದಿಂತು ಬಂದ ದುಷ್ಕೀರ್ತಿಯಿಂ ೧೭
ಹತವಾಗಿ ಸೀಳ್ದುಪೋದುದು ಜನಕನೃಪಸುತಾ
ಪತಿಹೃದಯಮಭಿತಪ್ತಲೋಹಂ ವಿದೀರ್ಣಮಾದಂತಯೋಘನಘಾತದಿಂ
ಧೃತಿಯಿಂ ಗಮಿಾ ಸ್ವಾಪವಾದಮನುಪೇಕ್ಷಿಪುದೆ
ಹಿತವೊ ದೋಷವಿರಹಿತಪತ್ನಿಯುಂ ತ್ಯಜಿಪುದಭಿ [ದುದು॥
ಮತವೊ ಎಂದೊಂದುಕಡೆ ನಿಲದೆ ತಚ್ಚಿತ್ತಮದು ಚಲಿಪ್ಪುಯ್ಯಲೆಯೊಲಾ

ಮನದನ್ನಳಂ ತ್ಯಜಿಸದೆಯೆ ಪೋಗದಪವಾದ ೧೮
ಮೆನುತದನೆ ನಿಶ್ಚಯಿಸಿದಂ ರಾಘವಂ ಯಶೋ
ಧನರಾದವರ್ಗೆ ತನುವಿಂದೆ ಜಸಮೇ ಪಿರಿದು ವನಿತಾದಿವಿಷಯದಿಂದೇಂ?॥
ಅಣಮಾದೊಡಂ ತೇಜಮಂ ಪಡೆಯದಾ ರಾಮ
ನನುಜರಂ ಕರೆಯಿಸುತಮೂರ್ತಿಯವಿಕೃತಿದ
ದರ್ಶನಲುಪ್ತಹರ್ಷರಾದವರೊಡನೆ ನಿಜನಿಂದೆಯಂ ಪೇಳ್ದು ಪಿಂತೆಂದನು॥

ರವಿಗೆ ಜನ್ಮವನಿತ್ತ ಮೇಣ್ ಸದಾಚಾರದಿಂ ೧೯
ಪ್ರವಿಮಳತೆಯಾಂತ ರಾಜರ್ಷಿಕುಲಕೆನ್ನಿಂದೆ
ಕವಿದುದೀ ಕುಂದು ಮಳೆಗಾಳಿಯಿಂ ಮುಕುರಕ್ಕೆ ಮಾಲಿನ್ಯಮೊದಗುವಂತೆ॥
ಜವದಿಂದೆ ತೈಲಬಿಂದುವು ತೆರೆಗಳೊಳ್ ಪ್ರಸರಿ
ಸುವತೆರದೆ ಪೌರರೊಳ್ ಪರ್ಬುವಪವಾದವಾ
ಕ್ಯವನಿದಂ ಸಹಿಸಲಾರೆಂ ವಾರಣೇಂದ್ರಸಾಲಾನಮಂ ಸಹಿಸದಂತೆ॥

ತಂದೆಯಪ್ಪಣೆಯಿಂದೆ ಪೂರ್ವದೊಳ್ ಸಾಂಪರಧಿ ೨೦
ಯಿಂದೆಬಳಸಿದ ಭೂಮಿಯುಂ ತೊರೆದತೆರದಿಂದ
ಮಿಂದು ವೈದೇಹಿಯುಂ ತ್ಯಜಿಪೆನವಳಾಂತ ಗರ್ಭದ ಫಲಕೆ ಮೋಹಿಸದೆಯೇ
ಕುಂದಿಲ್ಲ ತತ್ಸತಿಯೊಳೆಂದರಿವೆನಾದೊಡಂ
ಬಂದ ಲೋಕಾಪವಾದಮನೆ ಪಿರಿದೆಂಬೆನಮ
ಳೇಂದುವೊಳ್ ನೆಲದ ನೆಳಲಂ ಕಲಂಕತೆಯಿನಾರೋಪಿಸುವುದಲ್ತೆ ಲೋಕಂ

ದಶಮುಖವಧಾಂತಮೆನ್ನ ಪ್ರಯಾಸಂ ಪಗೆಯ ೨೧
ಪೆಸರಡಗಿಸುವುದಕಾದುದು ನಿಷ್ಫಲಮದಲ್ತು
ಮುಸುಪ ಮುಳಿಸಾಂತ ಸರ್ಪಂ ತನ್ನ ತುಳಿದವನ ಕಚ್ಚುವುದೆ? ರಕ್ತಾಶೆಯಿಂ

ಆಸುಗಳೊಳ್ ನಟ್ಟ ನಿಂದಾಶಲ್ಯವಿದಕಿಳ್ತು
ಮೊಸೆದು ಚಿರಕಾಲಮಾಂ ಜೀವಿಪುದನೆಳಸಿದೊಡೆ
ನಿಸದಮೆನ್ನಯ ನಿರ್ಣಯುವ ನಿಷೇಧಿಸಲಾಗದತಿದಯದೆ ನೀಮೆಂದನು॥

ಜನಕಜೆಯ ವಿಷಯದಲ್ಲಿಂತು ತಾನತಿತೀಕ್ಷ್ಣ ೨೨
ಮೆನಿಪಾಗ್ರಹವನಾಂತ ರಾಮಚಂದ್ರನ ವಚನ
ಕನುಜರಲ್ಲಾರುಮನುಮತಿಯನಿಲ್ಲವೆ ನಿಷೇಧಮನೆಸಗಲಾರದಿರೆ ತಾಂ॥
ವಿನುತಯಶನುಂ ಸತ್ಯಭಾಷಿಯುಮೆನಿಪ್ಪ ತ
ದ್ವಿನಪಕುಲವರಸು ಸೌಮ್ಯನೆ! ಎಂದು ತನ್ನ ಶಾ
ಸನಬದ್ಧನಾದ ಲಕ್ಷ್ಮಣನನೇಕಾಂತದೊಳ್ ಕರೆದಿಂತು ಪೇಳ್ವನಾಗಂ॥

ಅರಸಿ ಬಸುರಿನ ಬಯಕೆಯಿಂದಂ ತಪೋವನವ ೨೩
ಪರಿಕಿಸಲ್ಕೆಳಸಿರ್ಪಳಾನೆವದೊಳೇ ರಥದೊ [ಸೆ॥
ಳಿರಿಸಿಕೊಂಡವಳ ನೀಂ ಪೋಗಿ ವಾಲ್ಮೀಕಿಪದದೊಳ್ ಬಿಡುವುದೆಂದು ಬೆಸ
ಪರಶುಧರನರಿಯುಸಿರಿವಂತೆ ಪಿತನಾಜ್ಞೆಯಂ
ಧರಿಸಿ ಮಾತೆಯು ಕೊಂದುದರಿದಿರ್ದ ಲಕ್ಷ್ಮಣಂ
ಪರಮಾಗ್ರಜನ ಬೆಸನಕೊಪ್ಪಿದಂ ಗುರುಶಾಸನಂ ವಿಚಾರಿಸತಕ್ಕುದೇಂ?

ಬಳಿಕಮಳ್ಕದ ಕುದುರೆಗಳ ತೇರ್ಗೆ ಕಟ್ಟುತ್ತೆ ೨೪
ಸಲೆ ಪಗ್ಗ ವಿಡಿದಿರೆ ಸುಮಂತ್ರನಾರಥದಲ್ಲಿ
ಫಲಿಸಿತೆನ್ನಿಷ್ಟಮೆಂದರಿದ ಸೀತೆಯನಿರಿಸಿಕೊಂಡು ಸೌಮಿತ್ರಿ ತೆರಳೆ॥
ತಳುವದಧ್ವದ ರಮ್ಯದೃಶ್ಯಮಂ ಕಾಣುತಾ
ಲಲನೆ ಕಾಂತಂ ಪ್ರಿಯಂಕರನೆಂದು ನಲಿಯುತಂ
ತಿಳಿದುದಿಲ್ಲಾತನಸಿಪತ್ರತರುವಾದುದಂ ತೊರೆದು ಸುರಕುಜಭಾವಮಂ॥

ಸರಣಿಯೊಳ್ ಲಕ್ಷ್ಮಣಂ ಮರೆಗೆಯ್ದನಾವುದಂ ೨೫
ಪಿರಿದೆನಿಪ ಭಾವಿದುಃಖಮುನದಂ ವೈದೇಹಿ
ಗರುಪೆ ತಾಂ ಸ್ಫುರಿಪ ತದ್ಬಲಲೋಚನಂ ಲುಪ್ತರಾಘವಪ್ರಿಯದರ್ಶನಂ॥
ಧರೆಯುಣುಗಿಯಾ ದುರ್ನಿಮಿತ್ತದಿಂದೊಗೆವಳ
ಲ್ಲುಗ್ಗರೆ ಕಂದಿದಾನನಾಂಬುಜದಿಂದಮುಡಿಗಡಿಗೆ [ಳು॥
ನರನಾಥನನುಜರೊಡನಿರ್ಕೆ ಸೌಖ್ಯದೊಳೆಂದು ಕೋರುತಿರ್ದಳ್ ಮನದೊ

ಪಿರಿಯನಪ್ಪಣೆಯಿಂದಮಾ ಸಾಧ್ವಿಯಂ ವನಾಂ ೨೬
ತರದಲ್ಲಿ ಬಿಡಲ್ಕೈದ ಸೌಮಿತ್ರಿಯಂ ಬಿಡದೆ
ತೆರೆಗೈಗಳಿಂದೆ ತಡೆದಿರ್ಪಳೆನೆ ಜಹ್ನುಸುತೆಯೆಸೆಯೆ ಮುಂದೆಸೆಯೊಳವನಾ।
ತುರಗಂಗಳಂ ನಿಲಿಸೆ ಸೂತನಗ್ರಜಸತಿಯ
ಸುರೆ ಪುಳಿನಮೊಳ್ ರಥದಿನಿಳಿಸಿ ಶಬರಂ ತಂದ
ತರಣಿಯಿಂದಾ ತೊರೆಯನುತ್ತರಿಸಿದಂ ಪ್ರತಿಜ್ಞೆಯ ದಾಂಟುವಂತಾತನು॥

ಬಳಿಕಂ ಗಳಸ್ತಂಭಿತಾಶ್ರು ಸೌಮಿತ್ರಿ ನುಡಿ ೨೭
ಗಳನೆನಿತೊ ಕಷ್ಟದಿಂದಂ ತಿರ್ದಿಕೊಳುತೆ ಕ
ಲ್ಮಳೆಯನುತ್ಪಾತಮೇಘಂ ಸುರಿಸುವಂತೆ ರಾಮಾಜ್ಞೆಯಂತಾನೊರೆವಿನಂ॥
ತಳುವದೆ ಪರಾಭವಾನಿಲಘಾತದಿಂ ಜಾರೆ
ವಿಲಸಿತಾಭರಣಕುಸುಮಂಗಳ್ ನಿಜೋದ್ಭವದ [ಯು॥
ನೆಲೆಯಾದ ವಸುಮತಿಯ ಮೇಲೆ ಬಿಳ್ದಳ್ ಲತೆಯುಮಾಳ್ಕೆಯಿಂದಂ ಸೀತೆ

ಅನುಪಮೇಕ್ಷ್ವಾಕುಕುಲಜಾತನುಂ ಸಚ್ಚರಿತ ೨೮
ನೆನಿಪ ಪತಿ ನಿಷ್ಕಾರಣದೆ ನಿನ್ನ ಬಿಟ್ಟುದೇ
ಕೆನುತೆ ಶಂಕಿಸುವಳೆನೆ ಭೂಮಾತೆ ಸೀತೆಗಿಂಬೀಯದಿರೆ ತನ್ನೊಡಲೊಳು॥
ಅಣಮಾದೊಡಂ ಮೂರ್ಛೆಯಲ್ಲಿಳಲ ತಳೆಯದಾ
ವನಿತೆ ಯೆಳ್ಚತ್ತು ದುಃಖವಿದಗ್ಧೆಯಾಗೆ ಲ
ಕ್ಷ್ಮಣಯತ್ನಜಪ್ರಬೋಧಂ ಮೂರ್ಛೆಯಿಂ ಕಷ್ಟತರಮೆನಿಸಿತಾಕೆಗಾಗಂ॥

ದೋಷಮಿಲ್ಲದೆಯೆ ತನ್ನಂ ನಿರಾಕರಿಸಿದಾ ೨೯
ತ್ಮೇಶನಪವಾದವಿಷಯಮನೆ ನುಡಿಯದೆ ಚಿರ
ಕ್ಲೇಶಕರಮರಿತಯುತೆ ನಾನೆಂದು ತನ್ನನೇ ಜರೆದುಕೊಳ್ವ ಸಾಧ್ವಿಯಂ॥
ಆಸುಮಿತ್ರಾಸುತಂ ಸಂತೈಸಿ ವಾಲ್ಮೀಕಿ
ವಾಸಮಾರ್ಗವ ತೋರ್ದು ಪರತಂತ್ರನಾಂ ಸ್ವಾಮಿ
ಶಾಸನದೆ ಗೆಯ್ದ ಪಾರುಷ್ಯಮಂ ದೇವಿ! ನೀಂ ಕ್ಷಮಿಸೆನುತ್ತಡಿಗೆರಗಿದಂ॥

ಸೀತೆ ತಾನಾತನಂ ಪಿಡಿದೆತ್ತಿ ಸೌಮ್ಯನೇ! ೩೦
ಪ್ರೀತಳಾದೆಂ ಚಿರಂ ಜೀವಿಸೈ ನೀನಗ್ರ
ಜಾತಂಗಧೀನನಿರ್ಪುದು ನಿಸದಮಿಂದ್ರಂಗುಪೇಂದ್ರನೆಂತಂತಿರೆನುತಂ॥

ಖ್ಯಾತಗುಣ! ನೀನೆನ್ನ ನತಿಗಳಂ ಕ್ರಮದಿಂದೆ
ಪೂತರಾದತ್ರಿಯರ್ಗ್ಗರುಪಿ ನಿಜತನುಜಸಂ
ಜಾತಮದ್ಗರ್ಭಕ್ಕೆ ಶುಭವ ಕೋರುತ್ತಿರ್ಪುದೆಂದು ಬಿನ್ನೈಸೆಂದಳು||

ಕಣ್ಣ ಮುಂದೆಯೆ ವಹ್ನಿಯಲ್ಲಿ ಪರಿಶುದ್ಧಳಾ ೩೧
ವೆನ್ನ ನೀಪರಿ ಲೋಕವಾದದಿಂ ತ್ಯಜಿಸಿದುದು
ತನ್ನ ಕುಲದುನ್ನತಿಗೆ ಸರಿಯೆ! ನೃಪನಂ ಕೇಳು ಸೌಮಿತ್ರಿ! ಮದ್ವಚನದಿಂ||
ಇನ್ನೊರೆವುದೇಕೆ? ಕಲ್ಯಾಣಮತಿರಾಘವಂ
ಬನ್ನಮೆನಗೀ ತೊಡರ್ಚಿದನೆಂಬುದಂ ಬೇಡ
ಮುನ್ನಮಾಂಗೆಯ್ದ ದುರಿತದ ಫಲಮೆ ಸಿಡಿಲಂತೆ ಬಂದೆರಗಿತಿದು ನಿಕ್ಕುವಂ

ಬಳಿಸಾರ್ದ ಲಕ್ಷ್ಮಿಯಂ ತೊರೆದು ಮುನ್ನಂ ವನ ೩೨
ಸ್ಥಳಿಯನೆನ್ನೊಡನೆ ನೀಂ ಸೇರ್ದ ಕತದಿಂದೆ ತಾಂ
ಮುಳಿದವಳ್ ನಿನ್ನ ಗೃಹದಲ್ಲಿ ನಾನಿರ್ಪುದಂ ಸಹಿಸಲಿಲ್ಲಂ ರಘುವರ!||
ಖಳದನುಜಪೀಡಿತತಪಸ್ವಿಗಳ ಸತಿಯರ್ಗೆ
ಸಲೆ ನಿನ್ನನುಗ್ರಹದೊಳಾಶ್ರಯವನಿತ್ತನಾಂ [ನೀಂ||
ಕಳವಳದೊಳೀಗೋರ್ವಮುನಿಯ ಮರೆವುಗುವುದೆಂತುರೆ ತೊಳಗುತಿರ್ಪಿನಂ

ವಸುಮತೀಶ್ವರ! ನನ್ನ ಕುಕ್ಷಿಯಲ್ಲಿರ್ಪ ನಿ ೩೩
ನ್ನಸಮವೀರ್ಯಂ ರಕ್ಷಣೀಯಮಿದು ನಾನೀಗ
ಳಸುಗಳಂ ತ್ವದ್ವಿಯೋಗದೆ ನಿಷ್ಫಲಂಗಳಂ ತೊರೆವುದಂ ತಡೆವುದಕ್ಕೆ!||
ಪ್ರಸವಿಸಿದ ಮೇಲೆ ಜನ್ಮಾಂತರದೊಳಂ ಮತ್ತೆ
ಮೊಸೆದು ಪತಿಯಾಗಿ ನೀನಗಲದಂತೆನ್ನನಾಂ
ಬಿಸುಗದಿರನಲ್ಲಿಟ್ಟು ದಿಟ್ಟಿಯಂ ಕಠಿಣತಪಮಂ ಮಾಡಲುಜ್ಜುಗಿಸುವೆಂ||

ಅರಸರ್ಗೆ ವರ್ಣಾಶ್ರಮಂಗಳ ಸುಪಾಲನಮೆ ೩೪
ವರಧರ್ಮಮೆಂದು ಮನುವೊರೆವನದರಿಂದೆ ನೀಂ [ತೆ!||
ತೊರೆದೊಡಂ ಕರುಣದಿಂ ಮುನಿಕುಲಮನೆಂತಂತೆ ನೋಡೆನ್ನುಮಂ ಮಹೀ
ಧರಣಿಸುತೆಯಿಂತುಸುರ್ದುದನಪ್ಪುಕೆಯ್ದು ಕ
ಣ್ಮರೆಯಾಗೆ ರಾಮಾನುಜಂ ದುಃಖಭರದೆ ಬಾ [ಯಂತೆ||
ಯ್ದೆರೆದು ಮಿಗೆ ರೋದಿಸಿದಳಾ ಕೋಮಲಾಂಗಿ ಭೀತಿಯನಾಂತ ಕುರರಿ

ಹರಿಣಿಗಳ ಬಾಯಿಂ ಕುಶಂಗಳುರೆ ಜಾರೆ ಮೇಣ್ ೩೫
ತರುಗಳಿಂದುದುರೆ ಕುಸುಮಂಗಳ್ ನವಿಲ್ಗಳುಂ
ತೊರೆಯೆ ನರ್ತನವ ತತ್ಸಮದುಃಖವಾಂತವನದೊಳಮುಳಲದನಿ ಪೆರ್ಚಿರೆ॥
ನಿರುಕಿಸಿ ನಿಷಾದಹತಖಗಮನಾವನ ಮುಖದೊ
ಳುರುಶೋಕರವಮೊಗೆದು ತಾಂ ಶ್ಲೋಕಮೂದುದಾ
ವರಕವಿ, ಸಮಿತ್ಕುಶಾಹರಣಾರ್ಥಿಯೈತಂದವನಲ್ಲಿಗಾ ಸ್ವನವ ಕೇಳ್ದು॥

ಜನಕಸುತೆ ರೋದನವ ನಿಲಿಸಿ ಸೆರಗಿಂದೆ ಕಂ ೩೬
ಬನಿಯೊರಸಿಕೊಂಡು ತದ್ವಾಲ್ಮೀಕಿಗೆರಗೆ ಬಸು
ರಿನ ಕುರುಪನರಿದ ಮುನಿಯಿತ್ತು ಸತ್ಪುತ್ರಾಶಿಷವನವಳ್ಗಿಂತೆಂದನು॥
ಪ್ರಣಿಧಾನದಿಂದರಿದೆನನ್ಯತಾಪವಾದಸಂ
ಜನಿತಭಯದಿಂ ವಲ್ಲಭಂ ನಿನ್ನನುಳಿದುದಂ
ಮನವಳಲನುಳಿ ತನುಜೆ! ವಿಷಯಾಂತರಸ್ಥಜನಕಾಲಯುವ ಸೇರ್ದಿಯೊಗ॥

ಭರತಾಗ್ರಜಂ ಸತ್ಯಸಂಧನಾತ್ಮಸ್ತೋತ್ರ ೩೭
ವಿರಹಿತನುಮುತ್ಖಾತವಿಶ್ವಕಂಟಕನುಮೆನಿ
ಸಿರೆಯುಮಾತಂಗೆ ಮುಳಿವೆಂ ಕಾರಣಮದಿಲ್ಲದೆಯೆ ನಿನ್ನನುಳಿದಕತದಿಂ॥
ಉರುಕೀರ್ತಿಯುತನಾದ ನಿನ್ನಮಾವಂ ನನಗೆ
ಪರಮಮಿತ್ರಂ, ತ್ವತ್ಪಿತಂ ಸಜ್ಜನಾಳಿಭವ
ಹರನಖಿಳಸಾಧ್ವಿಯರೊಳಗ್ರಗಣ್ಯಳ್ ನೀನುಮೆನ್ನೊಳ್ಮಿಗಪರ್ ಳಲ್ತೆ॥

ಖುಷಿಸಂಗದಿಂ ಶಾಂತಿಯಾಂತ ಜಂತುಗಳಿಂದೆ ೩೮
ಮಿಸುಗುವ ತಪೋವನದೊಳಳ್ಕದಿರು ನೀಂ ಸುಖ
ಪ್ರಸವಮೂದೊಡನೆ ಶುಭಕರಜಾತಕರ್ಮಾದಿವಿಧಿ ನಡೆವುದಲ್ಲ ಮತ್ತಂ॥
ಅಸಮಮುನಿಕುಲಕುಟೀರಸುಪೂರ್ಣತಟಯುಗದೊ
ಳೆಸೆವ ತಮಮಂ ಕಳೆವ ತಮಸೆಯೊಳ್ ಮಿಂದು ಸೀ ಕ್ಕಂ
ನೆಸಗೆ ತತ್ಪುಳಿನದೊಳ್ ದೇವತಾರ್ಚನೆಯ ನಿನ್ನಯ ಮನಕೆ ಮೋದವ

ಬಲಿಯೋಗ್ಯಮೆನಿಪುದಂ ಕಾಡ ತೃಣಧಾನ್ಯಸಂ ೩೯
ಕುಲಮಂ ಸ್ವಕಾಲಸಂಪ್ರಾಪ್ತಸತ್ಫಲಸುಮಾ [ಳಿಗುಂ॥
ವಳಿಯುಮಂ ಕುಡುವ ಮುನಿಕನ್ಯೆಯರ ಜಾಣ್ಮೆಯಿಂ ನಿನ್ನ ನವದುಃಖಮು

ಒಲವಿಂದೆ ನಿನ್ನ ಬಲಕನುಗುಣಮೆನಿಪ್ಪ ಜಲ
ಕಲಶದಿಂವಾಶ್ರಮಪೊಳೆಳಗಿಡುಗಳಂ ಬಿಡದೆ [ಯೆನುತುಂ॥
ಬೆಳಯಿಸುವ ನೀಂ ಸುತೋತ್ಪತ್ತಿಯಿಂ ಮೊದಲೆ ನಿಜಶಿಶುಸುಖವ ಪಡೆವೆ

ಕರುಣಾಳುವಾಲ್ಮೀಕಿ ತನ್ನ ದಯೆಯಿಂ ನುತಿಪ ೪೦
ಧರಣಿಜೆಯನೊಡಗೊಂಡು ಬಂದು ತಾಂ ಸಂಜೆಯೊಳ್
ವರವೇದಿಪಾರ್ಶ್ವಮಂ ಬಳಸಿರ್ಪ ಶಾಂತಮೃಗಕುಲದೊಳೆಸೆವಾಶ್ರಮಕ್ಕೆ॥
ಭರದೊಳಾ ದುಃಖದೀನೆಯನರ್ಪಿಸಿದ ನಾಕೆ
ಬರೆ ನಲಿದ ಮುನಿವನಿತೆಯರ್ಗೆ, ದರ್ಶಂ ಸುಧಾ
ಕರನ ಪಿತೃಭುಕ್ತಸಾರದ ಶೇಷಕಳೆಯನೋಷಧಿಗಳ್ಗೆ ಸಲಿಪತೆರದೆ॥

ಆತಪಸ್ವಿನಿಯರುರೆ ಸತ್ಕೃತಿಗಳಂ ಪಡೆದ ೪೧
ಸೀತೆಗಿಂಗುದಿಯ ತೈಲದ ದೀಪದಿಂದೆಯುಂ
ಪೂತಾಜಿನಸುತಲ್ಪದಿಂದೊಪ್ಪುವುಟಜವಿತ್ತರ್ ನಿಶೆಯ ವಾಸಕಾಗಿ॥
ಭೂತನುಜೆ ಮಿಂದು ನಾರುಡೆಯುಟ್ಟು ವಿಧಿಯಿಂದ
ಮಾತ್ಯಿಥಮಂ ಗೆಯ್ದು ಕಂದಮೂಲಾದಿಯಿಂ
ದಾತಪೋವನದಲ್ಲಿ ಪತಿಯ ಸಂತಾನವೃದ್ಧಿಗೆ ಪೊರೆಯುತಿರ್ದಳೊಡಲಂ॥

ಈಗಳಾದೊಡಮುಗ್ರಜನ ಮನಕ್ಕನುತಾಪ ೪೨
ಮಾಗುವುದೊ ತಿಳಿವೆನೆಂದವನೆಡೆಗೆ ಲಕ್ಷ್ಮಣಂ
ಪೋಗಿ, ತನ್ನಿಂದನುಷ್ಠಿತವ ಸೀತಾಪ್ರಲಾಪಾಂತಶಾಸನವ ಪೇಳೆ
ಆಗಳೆ, ತುಷಾರವೃಷ್ಟಿಯ ಪೌಷಶಶಿಗೆ ಸಮ
ನಾಗಿ ತೋರ್ದಂ ಸಬಾಷ್ಪಂ ರಾಮನಿನಿಯಳಂ
ತ್ಯಾಗಮಂ ಗೆಯ್ದುದಾತಂ ಮನದಿನಲ್ತು ಲೋಕಾಪವಾದದೊಳಲ್ಲವೇಂ?॥

ತಾನೆ ತನ್ನಳಲನಣಗಿಸಿಕೊಂಡು ವರ್ಣಾಶ್ರ ೪೩
ಮಾನುಸಂಧಾನಾಪ್ರಮತ್ತಂ ರಜೋಮುಕ್ತ
ಮಾನಸನುಮಾಗಿ ರಾಘವನನುಜಸಾಮಾನ್ಯಭೋಗರಾಜ್ಯವ ಪಾಲಿಸೆ॥
ತಾನೇಕಪತ್ನಿಯುಂ ಸಾಧ್ವಿಯುಮೆನಿಪ್ಪ ತ
ಜ್ಜಾನಕಿಯನಪವಾದಭಯದೆ ಸಂತ್ಯಜಿಸಿದಾ [ಳು॥
ಮಾನವಾಧಿಪನುರದೊಳುರೆ ಸುಖದೆ ರಮೆ ಸಪತ್ನೀರಹಿಳ್ತೋಲ್ ಮೆರೆದ

ಜನಕಸುತೆಯಂ ತ್ಯಜಿಸಿ ದಶಕಂಠರಿಪುವನ್ಯ ೪೪
ವನಿತೆಯಂ ಲಗ್ನವಾಗದೆ ವಾಸಿಸುತೆ ಮತ್ತೆ
ಕನಕದಿಂಗೆಯ್ದ ತತ್ಪ್ರತಿಮೆಯಿಂ ತಳ್ತು ಯಜ್ಞಂಗಳಂ ವಿರಚಿಸಿದನು॥
ಮುನಿಯಾಶ್ರಮದೊಳಿರ್ಪ ವೈದೇಹಿ ತನ್ನ ಕಾಂ
ತನ ವಾರ್ತೆಯದನೆಲ್ಲಮಂ ಕೇಳ್ದು ದುರ್ವಾರ
ಮೆನಿಪಾ ಪರಿತ್ಯಾಗದುಃಖಮಂ ಕಷ್ಟದಿಂ ಸಹಿಸಿ ತಾನಿರುತಿರ್ದಳು॥

---

# ಪಂಚದಶಸರ್ಗಂ.

ಸೂ:— ಸುತರನಾಂತಿರ್ಪ ಜಾನಕಿಯ ವಾಲ್ಮೀಕಿಯನು
ಮತಿಯಿಂ ಪರಿಗ್ರಹಿಪ ಸಮಯದಲ್ಲಾಕೆಯಂ
ಕ್ಷಿತಿಯು ಕೊಂಡೊಯ್ಯೆ ತನುಜರ್ಗಿತ್ತು ರಾಜ್ಯಮಂ ಸಗ್ಗಕೇರ್ದಂ ರಾಘವಂ

ಅವನಿಜೆಯ ಸಂತ್ಯಜಿಸಿ ಜನಪಾಲರಾಘವಂ ೧
ಪ್ರವಿಲಸದ್ರತ್ನಾಕರಸುಮೇಖಲೆಯನಿಳಾ [ಕ್ಕಂ॥
ಯುವತಿಯನದೋರ್ವಳನೆ ಸೇರ್ದು ತಾನವಳೊಡನೆ ಭೋಗವಡೆದಿರೆ ಬಳಿ
ಲವಣದನುಜನಿನಾತ್ಮಮುಖಕೆ ವಿಘ್ನಂ ಸಮು
ದ್ಭವಿಸೆ ಯಮುನಾತಟನಿವಾಸಿಗಳ್ ತಪಸಿಗಳ್
ಜವದೊಳೈತಂದು ಮರೆವೊಕ್ಕರಾಶ್ರಿತಸಹಾಯಕನೆನಿಸಿದಾ ರಾಮನಂ॥

ಅರಿದು ರಕ್ಷಕನೆಂದು ರಾಮಚಂದ್ರನನವರ್ ೨
ತೊರೆದರ್ ಸ್ವತೇಜದಿಂ ಲವಣನಿಗ್ರಹಕೃತಿಯ
ಪೊರೆವರಿಲ್ಲದಿರೆ ತಮ್ಮಯ ತಪೋವ್ಯಯವನೆಸಗುವರಲ್ತೆ ಶಾಪಶರರು॥
ಭರದೆ ತದ್ವಿಘ್ನಮಂ ಕಳೆವುದಕೆ ಕಾಕುತ್ಸ್ಥ
ನಿರದೆ ತಾಂ ಪ್ರತಿವಚನಮಿತ್ತನಾ ಮುನಿಗಳ್ಗೆ
ಧರೆಯೊಳಾ ಶಾರ್ಙ್ಗಿಯವತರಿಸಿರ್ಪುದೇ ಧರ್ಮಸಂರಕ್ಷಣಾರ್ಥ ಮಲ್ತೆಂ॥

ಮಿಸುಪ ಶೂಲವ ಪಿಡಿಯೆ ಲವಣನವನಂ ವಧಿಸ ೩
ಲಸದಳಮದಂ ತಳೆಯದಂದು ಗೆಲಲಕ್ಕುಮೆಂ
ದಸುರಹನನೋಪಾಯಮಂ ತನಗೆ ಪೇಳೆ ಮುನಿಗಳ್ ರಾಘವಂ ಬಳಿಕ್ಕಂ॥

ಬೆಸನವಿತ್ತಂ ಖುಷಿಕ್ಷೇಮಮಂ ಗೆಯ್ವುದ
ಕ್ಕಸಮಬಲನಾದ ಶತ್ರುಘ್ನಂಗೆ ತಾನವನ
ಪೆಸರನರಿನಿಗ್ರಹದೊಳನ್ವರ್ಥಕಮನಾಗಿಸಲ್ಕೆಳಪ ಮಾಳ್ಕೆಯಿಂದಂ॥

ಪರಿಕಿಸೆ ಪರಂತಪಂ ರಘುಗಳಲ್ಲೊರ್ರೋರ್ವ ೪
ಪುರಷನುಂ ಸಾಮಾನ್ಯಶಾಸ್ತ್ರವ ವಿಶೇಷವಿಧಿ
ಯಿರದೆ ಬಾಧಿಪ ಬಲ್ಪನಾಂತೊಲರಿನಿಗ್ರಹದ ಶಕ್ತಿಯಾಂತಿರ್ಪನದರಿಂ॥
ತ್ವರಿತದಿಂದಗ್ರಜನ ಪರಕೆಯಂ ಕೊಂಡು ತಾಂ
ತೊರೆದು ಭಯಮಂ ತೇರನೇರ್ದು ಶತ್ರುಘ್ನನುರು
ಪರಿಮಳವ ತಳೆದ ಪುಷ್ಪಿತವನಸ್ಥಲಿಗಳಂ ನೋಡುತ್ತೆ ಪೊರಮಟ್ಟಿಸು॥

ಗಣಿಸಲಧ್ಯಯನಾರ್ಥಧಾತುಗುಪಸರ್ಗಮಂ ೫
ದನಿಪಧಿಯತೆರಡೆ ಶತ್ರುಘ್ನಂಗೆ ರಾಮಪಾ
ಸನದೆ ತನ್ನಯ ಬೆನ್ನೊಳ್ಪೈತಂದ ಪಡೆಯರ್ಥಸಿದ್ಧಿಗನುಕೂಲವಾಗೆ॥
ಘನತೇಜನೆನಿಪಾ ನೃಪಾತ್ಮಜಂ ಮಾರ್ಗಮಂ
ತನಗರುಪುವ ಸ್ಯಂದನಾಗ್ರಗಾಮಿಗಳಿನಾ
ಮುನಿಗಳಿಂ ಬೆಳಗಿದಂ ವಾಲಖಿಲ್ಯರ್ಕಳಿಂ ತಳ್ತ ದಿನನಾಥನಂತೆ॥

ತೆರಳುತಂ ಶತ್ರುಘ್ನನಧ್ವದೊಳ್ ಸ್ಯಂದನ ೬
ಸ್ವರವನಾಲಿಸುತೆ ಮೊಗವೆತ್ತಿರ್ದ ಮಿಗಗಳಿಂ [ಗ೦॥
ಮೆರೆವ ವಾಲ್ಮೀಕಿಯ ತಪೋವನದೊಳೊಂದಿರುಳ ನಿಸತಿಯಂ ಮಾಡಲಾ
ಪರಮುನೀಂದ್ರಂ ಕ್ಲಾಂತವಾಹನನೆನಿಪ್ಪ ತ
ನ್ನರಪತಿಕುಮಾರನಂ ನಿಜತಪೋಮಹಿಮೆಯಿಂ
ಭರದೆ ಸಂಸಿದ್ಧಮಾದುತ್ಕೃಷ್ಟವಸ್ತುಸಂಚಯದಿಂದೆ ಸತ್ಕರಿಸಿದಂ॥

ಅಲಘುಬಲಶತ್ರುಘ್ನನಾ ಮುನಿಸ್ಥಾನದೊಳ್ ೭
ನೆಲಸಿದಿರುಳೊಳೆ ಪೂರ್ಣಕೋಶದಂಡದ್ವಯವ
ನಿಳೆ ಪಡೆವವೊಲ್ ಗರ್ಭವತಿ ನಿಜಾಗ್ರಜನಸತಿ ಸುತರೀರ್ವರಂಪ್ರಸವಿಸೆ॥
ನಲಿಯುತಂ ತಬ್ಭ್ರಾತೃಸಂತತಿಪ್ರವಣದಿಂ
ತಳೆದು ಖುಷಿಯಾಜ್ಞೆಯಂ ಮುಗಿದ ಕರಯುಗದೆ ತಾಂ
ತಳರ್ದಿನನುದಯದೊಳ್ ತತ್ತುಮಿತ್ರಾಸುತಂ ಸ್ಯಂದನಾರೂಢನಾಗಿ॥

ದಶರಥನ ಸೂನು ಕುಂಭೀನಸಿಯ ಸುತಲವಣ ೮
ನೊಸೆದು ವಾಸಿಪ ಮಧೂಪಘ್ನಪುರಿಗೈದನಾ
ಅಸುರನುಂ ವಿಪಿನದಿಂ ಬಲಿಯ ತರ್ಪಂತೆ ಸತ್ವಾಳಿಯಂ ಕೊಂಡುಬರುತಂ
ಎಸೆದಂ ಪಸಾಗಂಧಿಯುಂ ಧೂಮಧೂಮ್ರನುಂ
ಪಿಸಿತಾಶಿಗಣಪರೀವಾರನುಂ ಜ್ವಾಲಾವಿ
ಲಸಿತಪಿಂಗಳಶಿರೋರುಹನಾಗಿ ತಾಂ ಸಂಚರಿಪ ಚಿತಾಗ್ನಿಯ ಮಾಳ್ಕೆಯಿಂ॥

ಪಿಡಿಯದಿರೆ ಶೂಲಮಂ ಲವಣನದ ಕಂಡು ತಾಂ ೯
ತಡೆದನವನಂ ಲಕ್ಷ್ಮಣಾನುಜಂ ವಿಜಯಮಂ
ಪಡೆಯದಿರ್ಪರೆ ಮರ್ಮವರಿತು ರಿಪುಗಳ ಮೇಲೆ ಕವಿವರೀಪೊಡವಿಯಲ್ಲಿ॥
ಜಡಜಭವನಿಂದು ನನ್ನೊಡಲುಣಿಸು ನಸು ಕೊರತೆ
ಗೆಡೆಯಾಗೆ ತಾನದಂ ನೋಡಿ ಕಡುಭೀತಿಯಂ
ಪಡೆದು ನಿನ್ನಂ ತಡೆಯದೆನ್ನ ಬಳಿಗಟ್ಟಿದನೊ ದಿಟ್ಟಿಯಿಂ ಪೇಳ್ವನಸುರಂ॥

ಇಂತು ಸಂತರ್ಜಿಸುತಮಾ ರಕ್ಕಸಂ ದಾನ ೧೦
ಪಾಂತಕನ ಸೋದರನನಿರದೆ ಕೊಲಲೆಳಸುತಂ
ತಾಂ ತಳುವದೊಂದು ಮುಸ್ತೆಯಕಿಳ್ತತೆರದೆ ಪೆರ್ಮರವ ಕಿಳ್ತೆಗೆದನಾಗಂ॥
ಚಿಂತೆಗೆಡೆಗುಡದೆ ತಾಂ ಶತ್ರುಘ್ನನೈದೆ ಪಥ
ದಂತರದೊಳೇ ನಿಶಿತಬಾಣದಿಂ ಕಡಿಯೆ ತುಂ [ಳು॥
ಡಾಂತ ಕುಜಮದು ಬೀಳದೆಯೆ ತತ್ಸುಮವ ಧೂಳಿ ಬಿಳ್ವುದಾತನ ತನುವೊ

ತರುವಿನಾಶವ ಕಂಡ ದನುಜನಾಗಳೆ ದಂಡ ೧೧
ಧರನಕೈಯಿಂ ಬೇರೆಗೆಯ್ದಿಟ್ಟ ಮುಷ್ಟಿಯಂ [ಲೆ॥
ತಿರೆ ತೋರ್ಪುದಂ ಮಹೋಪಲಮೊಂದನೆತ್ತಿ ಬಿಸುಟಿಂ ದಾಶರಥಿಯ ಮೇ
ಭರದೊಳಾ ಶತ್ರುಘ್ನನೈಂದ್ರಾಸ್ತ್ರಮಂ ತನ್ನ
ಕರದೆ ಕೊಂಡದರಿಂದೆ ಪುಡಿಗೆಯ್ದು ಬಿಟ್ಟನಾ
ಪಿರಿದೆನಿಪಕಲ್ಲನದು ಮಣಲಿಂದೆ ಕಿರಿದೆನಿಪ ಪರಮಾಣುತೆಯ ನಾಂತುದು॥

ಬೆಳೆದೊಂದು ತಾಳಕುಜದಿಂ ಬೆಳಗುತುತ್ಪಾತ ೧೨
ವಲಘುಮಾರುತಸಿಂದೆ ಚಲಿಪ ಗಿರಿಯಂ ಪೋಲ್ತು
ಬಲಭುಜವನೆತ್ತಿದಾ ರಕ್ಕಸಂ ಲಕ್ಷ್ಮಣಾನುಜನ ಮೇಲ್ಪೈತಂದಪಂ॥

ಖಳನವಂ ಶತ್ರುಘ್ನವೈಷ್ಣವಾಸ್ತ್ರದೊಳಾಗ
ವಳಿತೋರುವಕ್ಷನಾಗುತೆ ಕೆಗಳೆ ಬೀಳೆ ತಾ
ನಿಳೆಯನಾಶ್ರಯಿಸಿತಾಶ್ರಮವಾಸಿಗಳೊಳಿರ್ದ ಕಂಪಮುನವರಂ ತ್ಯಜಿಸುತಂ||

ನೆಲಕುರುಳ್ದಳಿದ ದನುಜನ ತನುವಿನೊಳ್ ಪಕ್ಕಿ ೧೩
ಗಳ ವೃಂದಮುಂ ತನ್ನಿಶಾಚರವಿನಾಶಕನ
ತಲೆಯಲ್ಲಿ ದಿವ್ಯಸುಮವೃಷ್ಟಿಯುಂ ತಾನೇಕಕಾಲದೊಳೆ ಬಿಳ್ದುದಾಗಂ||
ತಿಳಿದನಾ ಲವಣಸಂ ಕೊಲ್ದಿಂತು ತನ್ನನುರು
ಕಲಿಯಾದ ಶತ್ರುಘ್ನನತುಳತರಶಕ್ತಿಸಂ
ಕಲಿತನೆನಿಸಿಂದ್ರಜಿದ್ವಧಶೋಭಿಯಾದಂಣನೊಡವುಟ್ಟಿದವನೆಂಬುದಂ||

ಚರಿತಾರ್ಥರಾದ ತಪಸಿಗಳೆಲ್ಲರುಂ ಸೇರ್ದು ೧೪
ಪರಮಾದರಂಬೆತ್ತು ನುತಿಸೆ ಶತ್ರುಘ್ನನಂ
ವರವಿಕ್ರಮೋದಗ್ರಮಾಗಿರ್ದೊಡಂ ಬಾಗಿದುದು ತಚ್ಛಿರಂ ಲಜ್ಜೆಯಿಂ||
ತರುವಾಯದೊಳ್ ವಿಷಯನಿಃಸ್ಪೃಹಂ ವೀರನುಂ
ಸುರುಚಿರಾಕಾರನೆನಿಸಾ ಲಕ್ಷ್ಮಣಾವರಜ [ಳು
ನುರುಮುದದೆ ಮಧುರಾಖ್ಯಪಟ್ಟಣವ ಕಟ್ಟಿಸಿದನ್ಯೆದೆ ಯಮುನಾತಟದೊ

ಸುರಲೋಕದೊಳ್ ಸ್ಥಲದ ಕೊರತೆಯಿರೆ ಬಂದ ನಿ ೧೫
ರ್ಜರರಿರ್ಪ ನೆಲೆಯೊ ಎಂಬೋಲ್ ಮಧುರೆ ಕಂಗೊಳಿಸು
ತಿರೆ ಸುಖಂಕರವಾದ ತನ್ನಾಳ್ಕೆಯಿನಖಿಳಜನಕೊದವಿದೈಸಿರಿಯೊಳು||
ಪರಿಸವಷೆದಿರ್ದನಾ ಶತ್ರುಘ್ನನಾ ಪುರದ
ವರಸೌಧದಲ್ಲಿರ್ದು ನೋಡುತಂ ಸ್ವರ್ಣದಾ [ಯಂ||
ಭರಣದಿಂ ತಳ್ತ ಭೂರಮೆಯಜಡೆಯಂತೆಸೆವ ಕೋಕಸಂಗತಯಮುನೆ

ದಶರಥಾಧಿಪಜನಕನೃಪರ ಸಖಸುಂ ಮಂತ್ರ ೧೬
ವಿಸರಕರ್ತೃವೆನಿಪ್ಪ ವಾಲ್ಮೀಕಿ ಮೈಥಿಲಿಯ
ಪಸುಳೆರೀರ್ವ್ವರ್ಗೆಸಗುತಂ ಜಾತಕರ್ಮಾದಿಗಳನೊಲ್ದು ಶಾಸ್ತ್ರವಿಧಿಯಿಂ||
ಕುಶಲವಂಗಳಿನವರ ಗರ್ಭದುಃಖಮುದಳಿದು
ಕುಶಲವೊವಗಿವಕತದಿನಾ ಆದಿಕವಿವರಂ
[illegible]||

ನಸುಪೋಗೆ ಶೈಶವಂ ಬಾಲಕರ್ಗೈದೆ ಮಾ ೧೭
ಡಿಸಿ ಸಾಂಗವೇದದಧ್ಯಯನಮಂ ಮತ್ತೆ ಪಾ
ಡಿಸಿದನವರಿಂ ಕವಿಪ್ರಥಮಪದ್ಧತಿಯ ನಿಜಕೃತಿಯನಾ ಮುನಿಮೌಳಿಯು॥
ರಸಭರಿತಮಾಗಿರ್ದ ರಾಮನ ಚರಿತ್ರವದ
ನೊಸೆದು ತಮ್ಮಯ ಜನನಿಯಗ್ರದೊಳ್ ಪಾಡುತಂ
ಕುಶಲವರ್ ತಾಮವಳ ಪತಿವಿರಹವೇದನವ ಕಿರಿದಾಗಿಸುತಮಿರ್ದರು॥

ಪರಿಲಸತ್ತ್ರೇತಾಗ್ನಿತೇಜರಿನಕುಲಭವರ್ ೧೮
ಭರತಾದಿಗಳ್ ಮೂವರುಂ ತಮ್ಮ ಕೈವಿಡಿದ
ನೆರೆ ಧನ್ಯರಾದ ಪತ್ನಿಯರಲ್ಲಿ ಪಡೆದರೀರೀರ್ವರಂ ಸುತರನಾಗಂ॥
ಪರಮಾಗ್ರಜನ ಕಾಣಿಕೆಳಸುತಂ ಶತ್ರುಘ್ನ
ನಿರದೆ ಮಧುರಾವಿದಿಶೆಗಳ ಪಾಲನಂಗಳಂ
ಪರಿವಿಡಿಯೊಳಿರಿಸಿದಂ ಶತ್ರುಘಾತಿಸುಬಾಹುವೆಂಬುಭಯನಿಜಸುತರೊಳು॥

ಮುನಿನಾಥವಾಲ್ಮೀಕಿಗೀಗಳೆನ್ನಿಂ ಮುಗುಳ್ಪು ೧೯
ಜನಿಸಬಾರದು ತಪೋಹಾನಿಯೆಂದಾ ಋಷಿಯ
ಜನಕಜಾಸುತಗೀತನಿಷ್ಟಲಿತಮೃಗವಿತತಿಯಾಶ್ರಮವ ಪುಗದೆ ಬಂದು॥
ದನುಜಲವಣನ ಕೊಂದ ತನ್ನನತಿಗೌರವದೆ
ಜನರೀಕ್ಷಿಸುತಿರೆ ಸಮಲಂಕೃತಾಧ್ವಸುಶೋಭಿ
ಯೆನಿಪಯೋಧ್ಯಾನಗರಿಯಂ ಪೊಕ್ಕನಾತ್ಮನಿಗ್ರಹದ ಶತ್ರುಘ್ನನೊಲಪಿಂ॥

ವರಸಭಾಮಧ್ಯದೊಳ್ ಸಭ್ಯಸೇವಿತನಾಗಿ ೨೦
ಮೆರೆಯುತಂ ಸೀತೆಯಂ ಬಿಟ್ಟಕತದಿಂದೆ ಭೂ
ತರುಣಿಗೊರ್ವಳಿಗೆ ಪತಿಯಾಗಿರ್ದ ರಾಮನಂ ಕಾಣುತಂ ಶತ್ರುಘ್ನನು॥
ಎರಗೆ ಲವಣಾಂತಕನನಾ ತಮ್ಮನಂ ಮೋದ
ಭರದೊಳಭಿನಂದಿಸಿದನಗ್ರಭವರಾಘವಂ
ಸುರನಾಥನಲ್ಕೆಯಿಂ ಕಾಲನೇಮಿಯ ಕೊಂದ ಹರಿಯ ನಭಿನಂದಿಪಂತೆ॥

ಧರಣಿಪಂ ಕೇಳೆ ಪೇಳ್ದುಂ ಸರ್ವಕುಶಲಮಂ ೨೧
ತೊರೆದನಾ ಕುಶಲವರ ವಿಷಯಮಂ ಶತ್ರುಘ್ನ ]ದಿಂ॥
ನರಿದು ಸಮಯವ ತತ್ಸುತರನೊಪ್ಪಿಸುವೆನೆಂದು ತನಗೆ ಮುನಿಯೊರೆದಕತ

ತರುವಾಯದಲ್ಲಿ ಜನಪದವಾಸಿಯೋರ್ವಭೂ
ಸುರನಾ ಮಹೀಶನ ದ್ವಾರಕೈತರುತಮೆಳ [ತೊಡಗಿದಂ||
ವರೆಯದೊಳ್ ಮಡಿದ ಶಿಶುವಂ ತೊಡೆಯೊಳಿರಿಸಿಕೊಂಡಿಂತು ರೋದಿಸ

ಹತಭಾಗ್ಯೆ ವಸುಧೆ! ನೀಂ ದಶರಥನರೇಂದ್ರನಿಂ ೨೨
ಚ್ಯುತಳಾದನಂತರಂ ರಾಮಕರಗತಳಾಗಿ
ಮಿತಿಮೀರ್ದ ಕಷ್ಟದಿಂ ಶೋಚನೀಯಸ್ಥಿತಿಯನಾಂತೆಯಾ! ಎಂದಳಲ್ದಂ||
ಕ್ಷಿತಿಪಾಲಕಂ ರಾಘವಂ ದ್ವಿಜಂಗೊದಗಿದು
ಸ್ಸುತದುಃಖಕಾರಣವನದ ಕೇಳ್ದು ನಾಡೆ ಲ
ಜ್ಜಿತನಾದನಿಕ್ಷ್ವಾಕುರಾಷ್ಟ್ರಮನಕಾಲಭವಮೃತ್ಯುವದು ಮುಟ್ಟಿದಲ್ತೆಂ||

ಅರೆಗಳಿಗೆ ನೀಂ ಕ್ಷಮಿಪುದೆಂದು ದುಃಖಿತಮಹೀ ೨೩
ಸುರನನುರೆ ಸಂತವಿಸಿ ಜವನನೇ ಜಯಿಸುವಾ
ತುರವಾಂತು ಕೌಬೇರಯಾನಮಂ ಸ್ಮರಣಮಾತ್ರದೆ ಬರಿಸುತಂ ರಾಘವಂ|
ಧರಿಸಿ ಶಸ್ತ್ರಂಗಳಂ ತದ್ವಿಮಾನವನೇರ್ದು
ಭರದಿಂದೆ ಗಮಿಪ ಸಮಯದೊಳೆ ಸರಸತಿಯು ಮೆ ]ಳು||
ಯ್ಗುರಿದು ತಾನೊರೆದಳೀತೆರದ ವಾಕ್ಯವನಾ ರಘೂತ್ತಮನ ಸಂಮುಖದೊ

ಧರಣೀಂದ್ರ ಕೇಳ್ ನಿನ್ನಯ ಪ್ರಜೆಗಳಲ್ಲೋರ್ವ ೨೪
ಪುರುಷನಪಚಾರಪರನಾಗಿರ್ಪನವನ ನೀ
ನರಸಿ ತದ್ವಿಲಯಮಂ ಮಾಡಿದೊಡೆ ಕೃತಕೃತ್ಯನಪ್ಪೆ ನೀನೆಂದಿಂತು ತಾಂ||
ಒರೆದಾಪ್ತವಾಕ್ಯವನದಂ ಕೇಳ್ದು ರಾಘವಂ
ತ್ವರಿತದಿಂ ತದ್ವರ್ಣವಿಕ್ರಿಯೆಯ ಕಳೆಯಲ್ಕೆ
ಚರಿಸಿದಂ ದಿಶೆಗಳೊಳ್ ವೇಗನಿಷ್ಕಂಪಕೇತುವೆನಿಪ್ಪ ಯಾನದಿಂದಂ||

ಬಳಿಕಮಿಕ್ಷ್ವಾಕುಕುಲಜಂ ಕಂಡು ತಾನೊಂದು ೨೫
ನೆಲೆಯಲ್ಲಿ ವೃಕ್ಷಶಾಖೆಯೊಳಧೋಮುಖನಾಗಿ
ನಲೆ ತಪವನಾಚರಿಸುತಿರ್ಪ ಧೂಮಾಭಿತಾಮ್ರಾಕ್ಷನಾದೊರ್ವ ನರನಂ||
ತಿಳಿಪು ನಾಮಾನ್ವಯಂಗಳನೆನೆ ತಮುರ್ವೀಶ
ತಿಳಕಂಗೆ ಪೆಸರಿಂದೆ ಶಂಬುಕಂ ಶೂದ್ರನಾ
ನಳಿಸಿ ಸುರಲೋಕಮಂ ತಪವನೆಸಗಲ್ಕೆ ತೊಡಗಿದೆನೆಂದು ಪೇಳ್ದನವನು||

ಸರನಿವಂ ತಪವನೆಸಗಲ್ಕನಧಿಕಾರಿಯಾ ೨೬
ಚರಿಸುತದನೆನ್ನ ಯುಪ್ರಜೆಗಳ್ಗೆ ದುಃಖವನುಂ
ವಿರಚಿಸಿದನಿವನ ತಲೆಯರಿವುದೇ ತಕ್ಕುದೆಂವಸ್ತ್ರನುಂ ಕೊಂಡು ರಾಮಂ॥
ಸರಳುರಿಯು ಕಿಡಿಗಳಿಂ ಮೊಸೆಗಳ್ ವಗ್ಗವಾ
ಗಿರೆ ಹಿಮುವಿನಷ್ಟುಕೇಸರದ ಸರಸೀಜವಂ
ತಿರೆ ತೋರ್ಪ ತನ್ಮುಖವನಾಕ್ಷಣಮೊಳೇ ಕಂಠನಾಳದಿಂದಂ ಕೆಡಪಿದಂ॥

ಜನಪಕರದಿಂದಮೋ ಶಿಕ್ಷೆಯನಾಂತುವರಿಂದ ೨೭
ಮನಘನೆನಿಸುತೆ ಶೂದ್ರನ್ಯೆದೆ ಪಡೆದಂ ಬಗೆಯೆ
ತನಗನರ್ಹಮೆನಿಪ್ಪ ದುಷ್ಕರತಪಸ್ಸಿನಿಂ ಸಾಧ್ಯವಾಗದ ಸುಗತಿಯಂ॥
ಮನುವಂಶಜಂ ರಾಮನುಂ ಪಥದೊಳಾಗ ಪ
ರ್ವನಪವಿತ್ತ್ರ ವಿಪುಳತೇಜದ ಕುಂಭಸಂಜಾತ
ಮುನಿಪನೊಡಗೂಡಿದಂ ತಾಂ ಶರತ್ಕಾಲದಿಂದುವಿನಿಂದೆ ತಳ್ತಿರವಿ॥

ಘನಮಹಿಮನಾ ಕುಂಭಯೋನಿ ತನ್ನಿಂ ಪೀತ ೨೮
ನೆನಿಸಿದಂಬುಧಿ ತನ್ನ ನೋಡಿದನದ ಬೆಲೆಯುನ
ರ್ಪಣವ ಮಾಡಿದೊಲ್ಮೆಯೆ ತನಗಿತ್ತ ದಿವ್ಯಭೂಷಣವ ರಾಮಂಗೆ ಕೊಟ್ಟಂ॥
ಜನಕಜೆಯ ಕೊರಳನಪ್ಪದ ತೋಳೊಳಾಂತು ತ
ಜ್ಜನಪನಾ ವಿಲಸದಾಭರಣಮಂ ಮರಳೆ ಪ
ತ್ತನಕೆ ತನ್ನಿಂ ಮುನ್ನಮೇ ಮರಳ್ದವಾಪಾರ್ಥನಾತ್ಮಜನ ಹರಣಂಗಳು॥

ಸುತಸಮನ್ವಿತನಾಗಿ ಪಾರ್ಥನಾ ಸಮಯದೊಳ್ ೨೯
ಕ್ಷಿತಿಯುಲ್ಲಿ ಮೃತ್ಯುಭಯದಿಂದೆಯುಂ ರಕ್ಷಿಪ್ಪ
ನ್ನತರಾಮನಂ ಪೂರ್ವದೊಳ್ ಪಳಿದುದಂ ನುತಿಗಳಿಂ ಕಳೆವನಾ ಬಳಿಕ್ಕಂ॥
ನುತಯಜ್ಞಕೃತಿಗಶ್ವಮುಂ ಬಿಟ್ಟ ತನ್ಮಹೀ
ಪತಿಗೆ ಮರ್ಕಟದನುಜಮಾನವಾಧೀಶ್ವರರ
ತತಿಯರ್ಪಿಸಿದುದು ಕಾಣಿಕೆಯನಂಬುದಕುಲಂ ಸಸಿಗೆ ಮಳೆಗರೆವತೆರವೆ॥

ತುರಗಮೇಧಾಧ್ವರಾಮಂತ್ರಣವ ಕಂಡೊಡನೆ ೩೦
ನರಮುನಿಗಳೆಲ್ಲರುಂ ಧರೆಯೊಳಿರ್ಪಾಶ್ರಮೋ
ತ್ಕರವನಲ್ಲದೆಯೆ ದಿವ್ಯಾತ್ರ್ಯಮಾಳಿಯುಮುಳಿದು ಸರ್ವದಿಶೆಯಿಂದೆ ಬಂದು॥

ಹರಿಸದಿಂ ಸುತ್ತುಗಟ್ಟಿರೆ ತಾಮಯೋಧ್ಯೆಯಂ
ಪುರಮದು ಚತುರ್ದ್ವಾರಮುಖದಿಂದೆ ತೋರ್ದುದಾ
ಸರಸಿಜಾಸನಮೂರ್ತಿ ತಾಂಕ್ಷಣದೆ ಪುಟ್ಟಿಸಿದ ಲೋಕದಿಂ ಬಳಸಿದಂತೆ॥

ಇತರಕಾಂತಾರಹಿತರಾಮನಧ್ವರಸದನ ೩೧
ಗತನಾಗೆ ಹೇಮಕೃತಸೀತೆಯೇ ಮತ್ತೆ ತ
ತ್ಪತಿಯಾದಕತದಿಂದವಾ ಜಾನಕೀತ್ಯಾಗಮುಂ ಶ್ಲಾಘ್ಯಮೆನಿಸೆ ಬಳಿಕಂ॥
ಶ್ರುತಿವಿಹಿತವಸ್ತುವಿಂ ಮಿಗಿಲಾದ ಸಂಭಾರ
ತತಿಯಿಂದೆ ಯಜ್ಞಮಾರಬ್ಧಮಾಯ್ತಲ್ಲಿ ತ
ತ್ಕ್ರತಿಗೆಡರನೊದಗಿಸುವ ರಕ್ಷಃಸಮೂಹಮೇ ರಕ್ಷಕಾವಳಿಯಾಗಿರೆ॥

ಬಳಿಕವಾತ್ಮೀಯಗುರುಚೋದಿತರೆನಿಪ್ಪ ಮೈ ೩೨
ಥಿಲಿಯ ತನುಜಾತರಾ ಪ್ರಾಚೇತಸಂ ಮೊದಲೆ
ಕಲಿಸಿರ್ದ ರಾಮಾಯಣದ ಗಾನಮಂ ಮಾಡುತಿರ್ದರಲ್ಲಲ್ಲಿ ಚರಿಸಿ॥
ತಿಳಿಯೆ ಚರಿತಮೊ ರಾಮವೃತ್ತಮದು ಕೃತಿಯೊ ಕವಿ
ತಿಲಕವಾಲ್ಮೀಕಿಕೃತಕಾವ್ಯಮದನಳ್ತಿಯಿಂ
ಸಲೆ ಪಾಡುತಿರ್ಪ ಕಿನ್ನರರವದ ಕುಶಲವರ್ ಸೆಳೆಯರೇಂ ಕೇಳ್ವರೆದೆಯಂ॥

ತದಭಿಜ್ಞರಿಂ ನಿವೇದಿತಮಾದ ಕುಶಲವರ ೩೩
ಸದಮಲಾಕಾರದೊಳ್ ಗಾನದೊಳಮಿರ್ಪಪೂ [ಳ್ತು॥
ರ್ವದ ಮಧುರತೆಯನೀಕ್ಷಿಸಿದನಾಲಿಸಿದನನುಜಯುತರಾಘವಂ ಕ್ರಮದೊ
ಪದೆದು ತದ್ಗೀತಮಂ ಕೇಳ್ದು ಮೈಮರೆದ ಸಭೆ
ಯದು ಹರ್ಷಬಾಷ್ಪಮುಖದಿಂದೆಸೆದುದಾಗಮಿನ [ತೆರದೆ॥
ನುದಯದೊಳ್ ಬಿಡದೆ ಹಿಮಮಂ ಸುರಿಪ ವಾತವಿರಹಿತವನಸ್ಥಲಿಯ

ಜನಸಮೂಹಂ ವಯೋವೇಷಮಾತ್ರವಿಭಿನ್ನ ೩೪
ಮೆನಿಸಿರ್ದ ರಾಘವಸುಸಾದೃಶ್ಯಮನೆ ಪೊಂದಿ
ಮಿನುಗುವಾ ಬಾಲಕರ್ಕಳನನಿಮಿಷಾಕ್ಷಿಯಿಂ ನೋಡುತ್ತೆ ನಿಂದುದಾಗಂ॥
ಜನಪನವರೀರ್ವರ್ಗೆ ಕೂರ್ಮೆಯಿಂದಿತ್ತಖಿಳ
ಘನವಸ್ತುಗಳ ಮುಟ್ಟದವರ ನಿಃಸ್ಪೃಹತೆಯಿಂ
ಜನಿಸಿದಚ್ಚರಿಯಂತೆ ತನ್ನಿಪುಣತೆಯಿನೊಗಿದುದಿಲ್ಲ ಲೋಕಕೆ ವಿಸ್ಮಯಂ॥

ನಿಮಗೆ ಗಾನವ ಕಲಿಸಿದವರಾರು? ಮತ್ತಮೀ ೩೫
ರಮಣೀಯಕಾವ್ಯಮಂ ಗೈದರಾರೆಂದು ಭೂ
ರಮಣನೊಲವಿಂ ಕೇಳೆ ವಾಲ್ಮೀಕಿಯೆಂದುತ್ತರವನಿತ್ತರಾ ತರುಳರು॥
ಸಮನಂತರಂ ಸೋದರರ್ವೆರಸಿ ತದ್ರಘೂ
ತ್ತಮನಳ್ತಿಯಿಂದಮಾ ಪ್ರಾಚೇತಸನ ಸೇರ್ದು
ವಿಮಳನಾದವನಡಿಗೆ ತನ್ನೊಡಲನುಳಿದಖಿಳರಾಜ್ಯವ ಸಮರ್ಪಿಸಿದನು॥

ಖ್ಯಾತರಘುವಂಶದವನೀಶ್ವರನೆ! ನಿನ್ನ ತನು ೩೬
ಜಾತರೀ ವೈಥಿಲೀಯರ್ಕಳೆಂದರುಪಿ ಮೇಣ್
ಸೀತೆಯಂ ನೀಂ ಪರಿಗ್ರಹಿಸೆಂದು ಬೇಡಿದಂ ಕರುಣಾಳುವಾಪ ಕವಿಯು॥
ತಾತ! ನಿನ್ನಯ ಸೊಸೆಯುವಳ್ ವಹ್ನಿಯಲ್ಲಿ ಪರಿ
ಪೂತಳಾಗಿರ್ಪಳೆನ್ನಿದಿರೊಳಂತಾದೊಡಂ
ಪಾತಕದಪಾಸ್ಯದೌರಾತ್ಮ್ಯದಿಂ ಪ್ರಜೆಗಳವಳೊಳ್ ಶ್ರದ್ಧೆಯಿಪಡಿರ್ಪರು॥

ಜನಕನಂದಿನಿ ತನ್ನ ಚಾರಿತ್ರದೊಳ್ ಸರ್ವ ೩೭
ಜನಕೆ ವಿಶ್ವಾಸಮೊಗೆವಂತೆ ತಾನೆಸಗಿದೊಡೆ
ತನುಭವಸಮೇತಳಾದವಳಂ ತ್ವದಾಜ್ಞೆಯಿಂದಂ ಪರಿಗ್ರಹಿಪೆನೆಂದು॥
ಜನಪಂ ಪ್ರತಿಜ್ಞೆಯಂ ಮಾಡೆ ತಾಂ ವಾಲ್ಮೀಕಿ
ಮುನಿಯಾಶ್ರಮದೊಳಿರ್ಪ ವೈದೇಹಿಯಂ ಛಾತ್ರ
ಗಣದಿಂದೆ ಕರೆಯಿಸಿದನಾತ್ಮಸಿದ್ಧಿಯ ಬರಿಸುವವೊಲಾತಪೋವ್ರಂವದಾ॥

ತರುವಾಯುದೊಳ್ ಮರುವಗಲ್ ಪ್ರಕೃತಕಾರ್ಯಮಂ ೩೮
ಜರುಗಿಸಲ್ಕೆಂದು ಕೂಡಿಸಿ ಪೌರರೆಲ್ಲರಂ
ಕರೆಯಿಸಿದನಾದಿಕವಿಯಾದ ವಾಲ್ಮೀಕಿಯಂ ಮೋದದಿಂ ಕಾಕುತ್‌ಸ್ಥನು॥
ಸ್ವರಶಬ್ದಶುದ್ಧಿಯುತಶ್ರುತಿಮಂತ್ರದಿಂದೆ ಭಾ
ಸ್ಕರನನೆಂತಂತೆ ತತ್ತೇಜೋಭಿರಾಮಭೂ
ವರನ ಸೇರ್ದಂ ಸುತದ್ವಯಸಮನ್ವಿತಸೀತೆಯಿಂದೆ ತನ್ಮುನಿನಾಥನು॥

ಉಟ್ಟಿರ್ದ ಕಾಷಾಯವಸ್ತ್ರದಿಂ ಮೇಣಡಿಯೊ ೩೯
ಳಿಟ್ಟಿರ್ದ ದಿಟ್ಟಿಯಿಂದೊಪ್ಪುತಂ ಶಾಂತಿಗೆಡೆ
ಗೊಟ್ಟ ತನುವಿಂದಮೇ ಸೀತೆ ಪರಿಪೂತೆಯೆಂಬೂಹೆ ಸಂಭವಿಸಲಾಗಂ॥

ಪಟ್ಟಣದ ಸರ್ವಜನರುಂ ಸಾಧ್ವಿಯಂ ನೋಳ್ಪ
ಬಟ್ಟೆಯಿಂ ಮರಳಿಸುತೆ ನೋಟಗಳ ಕದಲುವುದ
ಬಿಟ್ಟು ತಾಮುವನತಾನನರಾಗಿ ಫಲಿತಶಾಲಿಗಳಂತೆ ನಿಂದಿರ್ದರು॥

ತನುಜೆ! ನಿನ್ನಯ ಚರಿತವಿಷಯದಲ್ಲೀ ಜನರ ೪೦
ಮನಕಿರ್ಪ ಸಂಶಯವ ಕಳೆ ಪತಿಯ ಮುಂದೆಂದು
ಜನಕಜೆಗೆ ಬೆಸಸಿದಂ ಶಿಷ್ಯರಸಮುಪವಿಷ್ಟವಾಲ್ಮೀಕಿಯಾ ಬಳಿಕ್ಕಂ॥
ಮುನಿಶಿಷ್ಯಸಿತ್ತ ನಿರ್ಮಲವಾರಿಯಿಂದಾಚ
ಮನವ ತಾನೆಸಗಿ ಸೀತಾದೇವಿ ಸಟಿಯೆಂಬು
ವಣಮಾದೊಡಂ ಸೋಂಕದಿರ್ಪಮಲತರವಾಕ್ಯಮುಂ ಪೇಳ್ದಳೀತೆರದೊಳು

ಪತಿವಿಷಯದೊಳ್ ವಾಙ್ಮನಃಕಾಯದಿಂದೆ ದು ೪೧
ಷ್ಕೃತಿಯನಾನೆಸಗದುದು ಸತ್ಯಮಾಗಿರ್ದೊಡೀ
ಸುತೆಯನೆಲೆ ತಾಯೆ ವಿಶ್ವಂಭರೆಯೆ! ನಿನ್ನ ಗರ್ಭದೊಳಿರಿಸಿಕೊಳ್ವುದೆಂದು॥
ಪತಿಭಕ್ತಿಶೀಲಳಾದಾ ಸೀತೆ ಪೇಳೆ ತಾಂ
ಕ್ಷಿತಿ ಬಿರಿದು ತನ್ಮಧ್ಯದಿಂದಮಾಕ್ಷಣದೊಳ
ದ್ಭುತವೈದ್ಯುತಜ್ಯೋತಿಯಂತಿರುದ್ಭವಿಸಿತುದ್ಯತ್ಪ್ರಭಾಮಂಡಲಮದು॥

ಸ್ಫುರದುತ್ಪ್ರಭಾಮಂಡಲದೊಳದರೊಳುರಗಭಾ ೪೨
ಸುರಫಣೋತ್ಕ್ಷಿಪ್ತಹರಿಸೀಠಮುಂ ತಾನಲಂ
ಕರಿಸಿರ್ಪ ಶರಧಿರಶನೆಯೆನಿಪ್ಪ ಸಾಕ್ಷಾದ್ವಸುಂಧರೆಯೆ ಮೈದೋರುತಂ॥
ಪರಕಾಂತವಕ್ತ್ರದೃಷ್ಟಿಯ ಸೀತೆಯಂ ತೊಡೆಯೊ
ಳಿರಿಸಿಕೊಂಡಾ ಧರಾದೇವಿ ಪಾತಾಳಕ್ಕೆ
ಭರದಿಂದೆ ತೆರಳ್ದಳಾ ರಾಘವಂ ಬೇಡಬೇಡೆಂದು ತಾಂ ಪೇಳುತಿರೆಯುಂ॥

ಸತಿಯುಂ ಮರಳ್ದು ತೆರಲೆಳಸಿ ಬಿಲ್ಗೊಂಡ ರಘು ೪೩
ಪತಿಗೆ ಭೂವಿಷಯದಲ್ಲೊಗೆದಿರ್ದಕೋಪಮುಂ
ಸುತಗುರೂತ್ತಮನೈದೆ ಶಾಂತಿಗೊಳಿಸಿದನರಿದು ತಾಂ ದೈವವಧಿಕಬಲಮುಂ
ಕ್ಷಿತಿಪನಾ ರಾಮಚಂದ್ರಮನಾಗಳಾ ಮಖದ
ಕೃತಿಯ ಪೂರೈಸಿ ಪೂಜಿತಮುನಿಪಸನ್ಮಿತ್ರ
ಪ್ರತತಿಯ ಬೀಳ್ಕೊಟ್ಟು ಸೀತಾಗತಸ್ನೇಹಮುಂ ತದಪತ್ಯರಲ್ಲಿಟ್ಟನು॥

ಭರತಂಗೆ ಮೊದಲಿತ್ತ ಸಿರಿಯದಲ್ಲದೆ ಮತ್ತ ೪೪
ಮರಿದಾ ಯುಧಾಜಿನ್ಮಹೀಶಸಂದೇಶಮುಂ
ಹರಿಸದಿಂದಂ ಸಿಂಧುದೇಶಮುಂ ಕೊಟ್ಟನಾಶ್ರಿತಪಾಲಕಂ ರಾಘವಂ||
ಘುರವಲ್ಲಿ ಗಂಧರ್ವರಂ ಗೆಲ್ದು ಮೇಣವರ್
ಕರದೊಳಾಯುಧವ ಪಿಡಿಯದೆ ವೀಣೆಯೊಂದನೇ
ಧರಿಸಿ ನೆಲಸಿರ್ಪಂತೆ ಮಾಡಿದಂ ಕೈಕೇಯಿಯಣುಗಸಾ ರಾಷ್ಟ್ರದಲ್ಲಿ||

ತನುಜರುಭಯುರ್ ತಕ್ಷಪುಷ್ಕಲರ್ ರಾಜ್ಯಾರ್ಹ ೪೫
ರೆನಿಸೆ ತನ್ನಾಮಕದ ರಾಜಧಾನಿಗಳಲ್ಲಿ
ಜನಪಪಟ್ಟವ ಕಟ್ಟಿ ಭರತನವರೀರ್ವರ್ಗೆ ಮತ್ತಮಗ್ರಜನ ಸೇರ್ವಂ||
ವಿನುತರಘುನಾಯಕನ ಬೆಸನದಿಂದಂ ಲಕ್ಷ್ಮ
ಣನು ಸ್ವಾತ್ಮಭವರನಂಗದಚಂದ್ರಕೇತುಗಳ
ನನುಪಮಾನಂದದಿಂ ಕಾರಾಪಥಾಖ್ಯದೇಶಾಧೀಶರಂ ಮಾಡಿದಂ||

ತನುಭವರ್ಗಿಂತು ರಾಜ್ಯಂಗಳೊಪ್ಪಿಸಿದ ತ ೪೬
ಜ್ಜನಪರೆಲ್ಲರ್ ಭರ್ತೃಲೋಕಗತರಾದ ನಿಜ
ಜನನಿಯರ ಶ್ರಾದ್ಧಾದಿಕಾರ್ಯಂಗಳಂ ಕ್ರಮದೆ ವಿರಚಿಸಿದರಾ ಬಳಿಕ್ಕಂ||
ಮುನಿವೇಷದಿಂದಂತಕಂ ರಾಮನಂ ಸೇರ್ದು
ಮನುವಂಶದರಸ! ಕೇಳೇಕಾಂತದಲ್ಲಿ ಭಾ
ಷಣವ ಮಾಳ್ಪೆವಿಮ್ಮೀರ್ವರಂ ನೋಡಿದವನ ನೀಂ ತ್ಯಜಿಸವೇಳ್ಕೆಂದೊರೆದನು||

ಭೂರಮಣನಂತಾಗಲೆಂದೊಪ್ಪೆ ತನ್ನಯಾ ೪೭
ಕಾರಮಂ ತೋರ್ದು ಕಾಲಂ ರಾಜಚಂದ್ರಮನೆ!
ವಾರಿಜಾಸನನಾಜ್ಞೆಯಿಂದೆ ನೀಂ ಸ್ವರ್ಗಕ್ಕೆ ಬರ್ಪುದೆಂದುಸುರುತಿರೆ ತಾಂ||
ದ್ವಾರಸ್ಥಲಕ್ಷ್ಮಣಂ ತತ್ಪ್ರತಿಜ್ಞೆಯನರಿದು
ಮೂರಘುಜಯಮರ ಸಂವಾದಮಂ ಕೆಡಿಸಿದಂ
ಶ್ರೀರಾಮದರ್ಶನಕ್ಕೈತಂದ ದೂರ್ವಾಸಮುನಿಯ ಶಾಪದ ಭೀತಿಯಿಂ||

ಯೋಗಮಂ ತಿಳಿದ ಸೌಮಿತ್ರಿ ಸರಯೂತಟಕೆ ೪೮
ಪೋಗಿ ತಾನಾನೆಲೆಯೊಳಾತ್ಮೀಯದೇಹಮಂ
ತ್ಯಾಗಮಂ ಮಾಡಿ ತನ್ನಗ್ರಭವನ ಪ್ರತಿಜ್ಞೆಯ ಸತ್ಯಮಂ ಪೊರೆದನು|

ಆಗಳಾ ರಾಘವಂ ಸ್ವಾತ್ಮದೊಳ್ ನಾಲ್ಕನೆಯ
ಭಾಗಮೆನಿಸಿದ ಲಕ್ಷ್ಮಣಂ ಮೊದಲೆ ಸಗ್ಗಕ್ಕೆ
ಸಾಗೆ ಮೂರಡಿಯುಳ್ಳ ಧರ್ಮದೋಲ್ ನಿಂದನಿಳೆಯಲ್ಲಿ ತಾಂ ಶಿಥಿಲನಾಗಿ

ಅರಿಗಜಾಂಕುಶನಾದ ಕುಶನಂ ಕುಶಾವತಿಯೊ ೪೯
ಳಿರಿಸಿ ಮತ್ತಂ ಶರಾವತಿಯಲ್ಲಿ ಸುವಚನೋ
ತ್ಕರದಿಂದೆ ಸುಜನಾಶ್ರುಲವವನೊದಗಿಸುವ ಲವನಂ ನಿಲಿಸಿ ರಾಮಚಂದ್ರಂ
ಸ್ಥಿರಬುದ್ಧಿಯುತನಾಗಿ ಸೋದರರ್ವೆರಸಿ ತಾಂ
ತೆರಳ್ದನುತ್ತರದಿಶೆಗೆ ಮುಂದಗ್ನಿ ತೊಳಗುತಿರೆ
ಪುರಜನಂ ಭರ್ತೃವಾತ್ಸಲ್ಯದಿಂ ತೊರೆದು ವಸತಿಗಳ ಪಿಂದೈತರುತಿರೆ||

ಮನುವಂಶಕೇತುವಿನ ಚಿತ್ತವರಿದಿರ್ದ ಕಪಿ ೫೦
ದನುಜಸಂದೋಹಂ ಕದಂಬಮುಕುಳಸ್ಥೂಲ
ಮೆನಿಪ ಜನತಾಶ್ರುಕಣವೃಂದದಿಂ ನಾಂದ ತತ್ಪಥದೊಳನುಗಮಿಸಲಾಗಂ||
ತನಗೆ ಸಂಸಿದ್ಧಮಾಗಿರೆ ಪುಷ್ಪಕಂ ಭಕ್ತ
ಗಣವತ್ಸಲಂ ತದ್ರಘೂತ್ತಮಂ ಬಿಡದೆ ತ
ನ್ನನುಯಾಯಿಗಳ್ಗೆ ಸಗ್ಗವನೇರ್ವ ನಿಶ್ರೇಣಿಯಂ ಮಾಡಿದಂ ಸರಯುವಂ||

ಪರಕಿಸಲ್ಕಾ ಸರಯುವೊಳ್ ಮಜ್ಜನವನೆಸಗು ೫೧
ವರಸುಸಂಮರ್ದಮದು ತುರುಗಳೀಸಾಡುವಂ [ಯ್ತು|
ತಿರೆ ಕಂಡಕತದೆ ಗೋಪ್ರತರಾಖ್ಯತೀರ್ಥಮೆಂದದು ತಾಂ ಪ್ರಸಿದ್ಧಮಾ
ತರುವಾಯದೊಳ್ ನಿರ್ಜರಾಂಶರೆನಿಪೆಲ್ಲರಾಂ
ತಿರೆ ನೈಜರೂಪಮಂ ದೇವಲೋಕಕ್ಕೆ ತಾ
ಮಿರದೆ ನಡೆತಂದ ಪೌರರ್ಗೆ ರಾಮಂ ನವಸ್ವರ್ಗಮಂ ಕಲ್ಪಿಸಿದನು||

ಸರಸಿಜಾಂಬಕನಿಂತು ನಿರ್ಜರರ ರಾವಣಾ ೫೨
ಸುರಶಿರಶ್ಛೇದಕಾರ್ಯದ ತೀರ್ದಿ ದಕ್ಷಿಣೋ
ತ್ತರದಿಶೆಗಳೊಳ್ ಮೆರೆವ ಚಿತ್ರಕೂಟಾದ್ರಿಹಿಮಶೈಲಂಗಳೆರಡರಲ್ಲಿ||
ಪರಿವಿಡಿಯೊಳಾ ವಿಭೀಷಣಪವನತನಯರಂ
ವರಯಶಃಸ್ತಂಭಯುಗಳಮನದೆಂತಂತೆ ಸು
ಸ್ಥಿರತೆಯಿಂ ನಿಲಿಸಿ ಪೊಕ್ಕಂ ಸರ್ವಲೋಕಾಶ್ರಯವ ನಿಜಕಳೇಬರದೊಳು|

# ಷೋಡಶಸರ್ಗಂ.

---

ಸೂ:— ಕುಶನೃಪಂ ಕುಲರಾಜಧಾನಿಯಧಿದೇವಿಯಾ
ಶಿಸಿದಂತೆ ಸಾಕೇತನಗರಿಗೈತಂದು ತಾ [ವಿಂ||
ನೊಸೆದಲ್ಲಿ ರಾಜ್ಯಭಾರವನೆಸಗುತಂ ಕುಮುದ್ವತಿಯ ಕೈವಿಡಿವನೊಲ

ತ ಗವಾಯುದೊಳ್ ಜನ್ಮದೊಳ್ ಗುಣದೊಳಂ ಜೇಷ್ಠ ೧
ನಿರುವ ಕುಶನಂ ಶ್ರೇಷ್ಠವಸ್ತುಭಾಗಿಯನೆಸಗಿ
ಮೆರೆದರಿತರರ್ ಸಪ್ತವೀರರವರನ್ವಯಮೆ ಸೌಭಾತ್ರನಿಲಯಮಲ್ತೆ?||
ವರಸೇತುಬಂಧಕೃಷಿಕರಿಶಿಕ್ಷಣಾದಿಗಳೊ
ಳುರೆ ಪೆಸರ್ವಡೆದೊಡಂ ತಾಮವರ್ ತಂತಮ್ಮ
ಗಿರುವ ನಾಡುಗಳ ಮೇರೆಯ ಮೀರ್ದುದಿಲ್ಲುದಧಿಗಳ್ ಮೇರೆವಪ್ಪುದ.ತೆ||

ಇಳೆಯಲ್ಲವಿಚ್ಛಿನ್ನದಾನಪ್ರವೃತ್ತಿಯಿಂ ೨
ಪೊಳೆವ ತನ್ನೃಪರ ಗರುಡಧ್ವಜಾಂಶಪ್ರಭವ
ಕುಲಮುಪೇಂದ್ರನಾಗಿ ದಿಗ್ಗಜಂಗಳ ಸಾಮುಭವವಂಶದೋಲ್ ಪರ್ಬಿತು||
ಬಳಿಕಂ ನಿಶೀಥದೊಳ್ ಸ್ತಿಮಿತದೀಪದ ಶಯನ
ನಿಲಯದಲ್ಲೆಚ್ಚರವನಾಂತಿರ್ದ ಕುಶನೃಪಂ
ಮಲಗಿರೆ ಜನಂ ಪ್ರವಾಸಸ್ಥಕಾಂತಾವೇಷದಭಿನವಾಂಗನೆಯ ಕಂಡಂ||

ಅರಿವಿಜಯದಿಂ ಬಂಧುನಿಚಯದಿಂ ಸಜ್ಜನರ್ ೩
ಹರಿಸದಿಂದನುಭವಿಪ ರಾಜ್ಯರಮೆಯಿಂದೆಯುಂ
ಮೆರೆವಿಂದ್ರಭಾಸಕುಶನಿದಿರೊಳಾವನಿತೆ ಜಯವೆನುತೆ ಕೈಮುಗಿಯೆ ನಿಂದು||
ವರತಲ್ಪದಿಂದೆ ಪೂರ್ವಾರ್ಧತನುವೆತ್ತುತ
ಚ್ಚರಿಯೊಳಾ ರಾಮತನಯಂ ದರ್ಪಣಸ್ಥಲವ
ನೆರಳದೆಂತಂತರ್ಗಳವ ತೆಗೆಯದಾಲಯವ ಪೊಕ್ಕವಳ್ಗಿಂತೆಂದನು||

ಸಲೆ ಮುಚ್ಚಿದೀ ಗೇಹದೊಳಪೊಕ್ಕುದೆಂತು ನೀಂ ೪
ನಳಿನಿ ಹಿಮಬಾಧೆಯಾಂತಂತೆ ದುಃಖಾಕೃತಿಯ
ತಳೆದಿರ್ಪ ಕತದೆ ನೀಂ ನಿನ್ನಲ್ಲಿ ಯೋಗಪ್ರಭಾವಮುಂ ತೋರ್ಪುದಿಲ್ಲಂ||

ಎಲೆ ಭದ್ರೆ! ನೀನಾರದಾವನರ್ಧಾಂಗಿಯೊ
ನೆಲೆಗೆ ಬಂದುದದೇಕೆ? ಜಿತಕರಣರಾದ ರಘು
ಗಳ ಮನಂ ಪರಕಾಮಿನೀವಿಮುಖಮೆಂಬುದಂ ಬಗೆದು ನೀನೆನ್ನೊಳುಸಿರು।

ಎನೆ ಪೇಳ್ದಳೆಲೆ ರಾಜ! ಕೇಳಾವ ಪೂತಪ ೫
ಟ್ಟಣದ ಜನಮುಂ ತ್ವತ್ಪಿತಂ ನಿಜಸ್ಥಾನಕೊ
ಯ್ವನೊ ಆ ಅಯೋಧ್ಯೆಯಧಿದೇವಿಯೊಗಂ ನಾಂ ಸನಾಥಳಾಗಲ್ಲಿರ್ಪೆನು॥
ಅನುಪಮಿತರಾಜವೈಭವದ ನಿತ್ಯೋತ್ಸವದ
ಘನತೆಯಿಂದಲಕೆಯಂ ಮಿಗೆ ತಿರಸ್ಕರಿಸಿದಾ
ನಿನಿತು ದೀನತೆಯಾಂತೆನಧಿಕಬಲನಾಗಿ ರವಿವಂಶಜಂ ನೀನಿರ್ದೊಡಂ॥

ಕುಸಿದುರುಳಿ ಕೋಂಟೆಗಳ್ ಬಿರಿದು ಬಿಳ್ದಿರೆ ಸೌಧ ೬
ನಿಸರಮೂರ್ಣ್ಮಸ ತೋರಿದ ನನ್ನ ನೆಲೆ ತೋರ್ಪುದಮು
ಬಿಸುಗದಿರನಸ್ತಮಿಸೆ ಘೋರಮಾರುತಭಿನ್ನಮೇಘಯುತಸಂಧ್ಯೆಯಂತೆ
ಲಸಿತಕಲನೂಪುರದ ರಸಿಕಾಭಿಸಾರಿಕೆಯ
ರೊಸೆದು ಸಂಚರಿಪ ನೃಪವೀಥಿ, ಕೂಗುತೆ ಮೊಗದೊ
ಳೆಸೆವುಲ್ಕದಿಂದಡಗನರಸಿ ಚರಿಸುವ ನರಿಗಳೆಡೆಯಾಯ್ತು ನಿಶೆಯೊಳೀಗಂ॥

ಜಲಕೇಳಿಯೊಳ್ ಪ್ರಮದೆಯರ ಹಸ್ತತಾಡನದೆ ೭
ಸಲೆ ಮೃದಂಗಧ್ವನಿಯನೊದವಿಸುವ ದೀರ್ಘಿಕಾ
ಸಲಿಲಮದು ತಳೆದುದೀಗಂ ವನ್ಯಮಹಿಷಶೃಂಗಾಹತಾಕ್ರೋಶರವಮಂ॥
ನೆಲಸಿ ಮರದೊಳ್ ಯಷ್ಟಿವಾಸಭಂಗದೆ, ಕುಣಿವು
ದಳಿದು ಮುರಜಸ್ವನಾಭಾವದೆ, ದವೋಲ್ಕದಿಂ
ವಳಿಮುಳಿವಗರಿಗಳುಳ್ಳಾಟವ ಮಯೂರಂಗಳವಸೋಗೆಗಳಾವವು॥

ರಮಣಿಯರ ಲಾಕ್ಷಾರ್ದ್ರಚರಣವಿನ್ಯಾಸದಿಂ ೮
ರಮಣೀಯಮಾದ ಸೋಪಾನಪಂಕ್ತಿಯನೀಗ
ಳಮಮ! ಹತಹರಿಣಶಾರ್ದೂಲಂಗಳ್ ಮೆಟ್ಟುಗುಂ ರಕ್ತಲಿಪ್ತಾಂಘ್ರಿಯಿಂದಂ॥
ಕಮಳವನದೊಳ್ ಪಿಡಿಗಳಿತ್ತಬ್ಜನಾಳಕಬ
ಳಮನಾಂತ ತೆರವೆ ಚಿತ್ರಿಸಿದಿಭಗಳಂಕುಶೋ
ಪಮನಖವಿಭಿನ್ನಕುಂಭಂಗಳಾಗುತೆ ಕುಪಿತಹರಿಘಾತಕೆಡೆಯಾದವು

ಪೊಳೆವ ಬಂಣಂ ಕೆಟ್ಟು ಮಾಸಿದ ಸ್ತಂಭಗತ ೯
ಲಲನಾಕೃತಿಪ್ರತಿಮೆಗಳನಂಟೆ ಸರ್ಪಂಗ
ಳುಳಿದ ನಿರ್ಮೋಕಂಗಳವೆ ತತ್ಕುಚೋತ್ತರೀಯಂಗಳಾಗಿರ್ಪುವತ್ತೆ॥
ನಿಲಯಂಗಳೊಳ್ ಕಾಲವಶದೆ ಸುಣ್ಣಂ ಕರ್ಪ
ತಳೆಯೆ ಮೇಣ್ ಪುಳ್ಪೆಳೆಯೆ ವಿಶದಮುಕ್ತಾಗುಚ್ಛೋ
ಜ್ವಲಚಂದ್ರರಶ್ಮಿಗಳ್ ಮೊದಲಂತೆ ರಾತ್ರಿಯೊಳ್ ಪ್ರತಿಫಲಿಸವಪ್ಪುಗಳಲ್ಲಿ!

ಕರುಣದಿಂ ನಸು ಬಾಗಿಸುತೆ ಶಾಖೆಗಳನಾವ ೧೦
ಪುರವರೋದ್ಯಾನವಲ್ಲಿಗಳಂ ವಿಲಾಸಿನಿಯ
ರುರೆ ಪೂಗಳಾಂತರೋ ಕಪಿಗಳವುಗಳನಕಟ! ಪೀಡಿಕುಂ ಶಬರರಂತೆ॥
ಇರುಳೊಳ್ ಪ್ರದೀಪಕಾಂತಿಯು ಪಗಲೊಳಂ ಕಾಂತೆ
ಯರ ಮುಖಪ್ರಭೆಯು ಮೇಣಗರುಧೂಮವ ಪೊಂದ
ದಿರುತಿರ್ಪ ಗೃಹಗವಾಕ್ಷಂಗಳಂ ಮುಚ್ಚಿದವು ಕೃಮಿತಂತುಜಾಲಂಗಳು॥

ಜನಶೂನ್ಯತೀರವಾನೀರಗೃಹಚಯದಿನ ೧೧
ರ್ಚನಸತ್ಕ್ರಿಯಾದೂರಪುಳಿನಕುಲದಿಂ ಸುಮ [ನಾಂ॥
ಜ್ಜನಗಂಧರಹಿತಜಲದಿಂದೆಯುಂ ತಳ್ತ ಸರಯುವ ನೋಡಿ ದುಃಖಿಸುವೆ
ಜನಪ! ಈನೆಲೆಯುಳಿದು ಕುಲರಾಜಧಾನಿಯೆಂ
ದೆನಿಪೆನ್ನ ವಸತಿಯಂ ನೀಂ ಸೇರ್ವುದುಚಿತಮಾ [ತೆರದೆ]
ಮನುಜತನುವಂ ತೊರೆದು ಪರಮಾತ್ಮಮೂರ್ತಿಯಂ ನಿನ್ನ ಪಿತನಾಂತ

ನಲಿದು ತದ್ವಾಂಛೆಗಂತಾಗಲೆಂದೊಪ್ಪೆ ರಘು ೧೨
ಗಳೊಳುತ್ತಮಂ ಕುಶಂ ನಗರಾಧಿದೇವಿಯುಂ
ಸಲೆ ವಿಕಾಸವನಾಂತ ಮುಖಕಮಲದಿಂದೆ ಪ್ಪೊಗರೆಯೆ ಬಳಿಕಂ ತನ್ನೃಪಂ
ಜಲಜಾಪ್ತನುದಯದೊಳ್ ಸಭೆಯಲ್ಲಿ ವಿಪ್ರರ್ಗೆ
ತಿಳಿಪೆ ತಾನದ್ಭುತನಿಶಾವೃತ್ತವದ ಕೇಳ್ದು
ಕುಲರಾಜಧಾನಿ ತಾನೇ ಬಂದು ವರಿಸಿದುದಕಪನನಭಿನಂದಿಸಿದರು॥

ಕುಶನಾ ಕುಶಾವತಿಯ ಶ್ರುತಿವಿದರ್ಗಿತ್ತ ಭೃ ೧೩
ವಿಸರಾನುಗತಪವನಸಂ ತನುದ್ಭುತಬಲದೊ [ತಾಂ॥
ಳೆಸೆಯುತವರೋಧಜನದೊಡನೆ ಶುಭದಿನದಲ್ಲಯೋಧ್ಯಾಭಿಮುಖನಾಗೆ

ಅಸಮುಕೇತುಗಳುಪವನಂಗ ಳಾನೆಗಳೆ ಮೇಣೊ
ಸೆದು ಕ್ರೀಡಿಪ ವಿಹಾರಾದ್ರಿಗಳ್ ತೀರ್ಗಳೀ
ಲಸಿತಸೌಧಂಗಳಾಗಿರೆ ಪಯಣದಲ್ಲವನ ಪಡೆ ಚರಿಪ ಪುರಿಯೊಲಾಯ್ತು॥

ಆತಪತ್ರಸುವಿಮಲಮಂಡಲಂ ರಾಮುತನು ೧೪
ಜಾತನಾ ಸಾಕೇತದೆಡೆಗೊಯ್ಯ ನಿಜಚಮೂ [ದು॥
ವ್ರಾತಮುದಿತಂ ಶಶಾಂಕಂ ತಟಕೆ ಕೊಂಡೊಯ್ವ ವಾರಾಶಿಯಂತೆಸೆದು
ಆತನ ವರೂಥಿನೀನಿವಹದುರುಪೀಡೆಯಂ
ಭೂತರುಣಿ ಸಹಿಸಲಸಮರ್ಥೆಯಾದುದರಿಂದ
ಮಾತುರದೆ ರೇಣುಮಿಷದಿಂದೆರಡನೆಯ ವಿಷ್ಣುಪದಕೇರ್ವಳೆನೆ ತೋರ್ದಳು॥

ಪುರದಿಂದೆ ತೆರಳಲನುವಾಗಿರ್ದ ಸಮಯದೊಳ್ ೧೫
ತೆರಳ್ದು ಮುಂದಿರುತಿರ್ಪ ಕಾಲದೊಳ್ ಮಾರ್ಗದ [ದು॥
ಲ್ಲುರೆ ಗಮಿಪ ವೇಳೆಯೊಳವಿೂಕ್ಷಿಸಿದೊಡಂ ಪೂರ್ಣಮಾಗಿ ಪಡೆಯದು ಕಂ
ಸರಣಿಯೊಳ್ ತನ್ನೃಪನ ಕರಿಗಳ ಮದೋದಕಂ
ಸುರಿಯೆ ಮೇಣ್ ಕುದುರೆಗಳ ಖುರಘಾತಮೊದಗೆ ತಾಂ ]ಗಂ॥
ಪರಿವಿಡಿಯೊಳಲ್ಲಿ ಧೂಳಿಯುವು ಕೆಸರಾಯ್ತು ಕೆಸರುಂ ಧೂಳಿಯಾಮುದಾ

ಪರಿಲಸದ್ವಿಂಧ್ಯಾದ್ರಿಕಟಕಾಂತರಂಗಳೊಳ್ ೧೬
ಸರಣಿಯುರಸಲ್ಕಖಿಳಶಾಖಿಯಾಂತುರುಬಲವ [ಮಂ॥
ಪಿರಿವಪ್ಪ ಶಬ್ದಮೊದಗಿಸೆ ನರ್ಮದೆಯ ತೆರದೆ ಗವಿಗಳೊಳ್ ಪ್ರತಿನಿನದ
ಗಿರಿಧಾತುರಕ್ತರಥನೇಮಿಯುಂ ಗಮನರವ
ಪರಿಕಲಿತತೂರ್ಯಸುಮೆನಿಪ್ಪ ಕುಶನಳ್ತಿಯಿಂ
ಪರಿಕಿಸುತೆ ಶಬರರರ್ಪಿಸುವ ಕಾಣಿಕೆಗಳಂ ದಾಂಟಿದಂ ತನ್ನಗವನು॥

ಬಗೆಯೆ ತದ್ಗಿರಿತೀರ್ಥಗಜಸೇತುವಿಂ ಪ್ರತೀ ೧೭
ಪಗೆಯಾದ ಗಂಗೆಯಂ ದಾಂಟುತಿರ್ಪರಸಂಗೆ
ಗಗನಲಂಘನಲೋಲಪಕ್ಷವಂಚೆಗಳಯತ್ನದೆ ಚಾಮರಂಗಳೆನಿಸೆ॥
ಮಿಗೆ ನಮಸ್ಕರಿಸಿದಂ ತನ್ನೃಪಂ ಕಪಿಲಮುನಿ
ಗೊಗೆದ ಕೋಪದೆ ದಗ್ಧವಾದ ನಿಜಪೂರ್ವಜಾ
ಳಿಗೆ ಸಗ್ಗವಿತ್ತ ಘೈತೃಕ್ಷುಭಿತನುಪ್ಪ ತವಾಘಗೀರಥೀವಾರಿಗೆ।

ಕಳೆದಿಂತು ಕೆಲದಿನಸದಧ್ವಮಂ ಸರಯುವಿನ ೧೮
ಎಲಸಿತಸುತೀರವಾಂತಲ್ಲಿ ಕೃತಮುಖರ ರಘು
ಗಳ ವೇದಿಶೋಭಿತಾಸಂಖ್ಯಾಕಯೂಪಂಗಳಂ ನೋಡುತಿರೆ ಕುಶನೃಪಂ॥
ಕುಲರಾಜಧಾನಿಯುದ್ಯಾನಪವನಂ ಕುಸುಮ
ಕಲಿತತರುಶಾಖಿಗಳನಲುಗಿಸುತಮಾ ನದಿಯ [ನಂ॥
ಕುಳಿರ್ವಲೆಗಳೊಳ್ ಸುಳಿದು ಬಂದಿದಿರ್ಗೊಂಡನಾ ಭೂಪನಂ ಕ್ಲಾಂತಬಲ

ಬಳಿಕಮರಿಹೃದಯಶಲ್ಯಂ ಪ್ರಜಾಸಖನಮಿತ ೧೯
ಬಲನನ್ವಯಧ್ವಜನುಮಪ್ಪ ಕುಶಭೂವರಂ
ಚಲಕೇತುವಾದ ನಿಜಬಲವನಿರಿಸಿದನಯೋಧ್ಯೆಯ ನಿಕಟಭುವಿಯೊಳಾಗಂ
ಜಲಧರಂಗಳ್ ಗ್ರೀಷ್ಮಸಂತಪ್ತಭೂಮಿಯಂ
ಸಲಿಲಸೇಚನದೊಳಂತಂತೆ ಬರಿದಾಗಿರ್ದ
ಪೊಳಲನದನಭಿನವಂಗೆಯ್ದರ್ ಸುಸಾಧನದೆ ಶಿಲ್ಪಿವರರವನಾಜ್ಞೆಯಿಂ॥

ತರುವಾಯದೊಳ್ ಶ್ರೇಷ್ಠದೇವತಾಯತನಭಾ ೨೦
ಸುರಮೆನಿಪ ತತ್ಪುರದ ಪಶುಸಮರ್ಪಣಪುರಃ
ಸರಸಪರ್ಯೆಯನುಪೋಷಿತರಾದ ವಾಸ್ತುವಿದರಿಂದೆ ಮಾಡಿಸಿ ಕುಶನೃಪಂ
ಹರಿಸದಿಂ ಕಾಮಿ ಕಾಂತಾಹೃದಯಮಂ ಪುಗುವ
ತೆರದೆ ತದ್ರಾಜಭವನವ ಪೊಕ್ಕು ಸಚಿವಾದಿ
ಪುರುಷರ್ಗೆ ತತ್ತದುಚಿತಾಲಯಂಗಳನಿತ್ತು ಸನ್ಮಾನಿಸಿದನವರನು॥

ಮಂದುರಾಸಂಶ್ರಯಹಯಂಗಳಿಂ ಕಂಬಗಳ ೨೧
ನೊಂದಿರ್ದ ಕರಿಗಳಿಂ ವಿಪಣಿಸ್ಥಪಣ್ಯಚಯ ]ತ್ತಂ॥
ದಿಂದೆಯುಂ ಸರ್ವಾಂಗಭೂಷಿತಾಭರಣದಂಗನೆಯ ತಾಂ ಪೋಲ್ತು ಮ
ಪೊಂದುತಂ ರಘುಮಹೀಶರ ಪೂರ್ವಸಂಸ್ಥಿತಾ
ಮಂದವೈಭವವ ಮೆರೆವಾ ಪೊಳಲೊಳವನಿಜಾ
ನಂದನಂ ನೆಲಸಿ ಸುರನಾಥಹರಸಖರ ಪದವಿಗಳುಮಂ ಗಣಿಸಲಿಲ್ಲಂ॥

ಬಳಿಕಂ ಸುರತ್ನಖಚಿತಾಂಬರದೆ ನಿಶ್ವಾಸ ೨೨
ಚಲದಂಶುಕದೆ ಪಾಂಡುಕುಚಲಂಬಿಸರದೊಳಂ
ಪೊಳೆವ ಕಾಂತಾವೇಷಮಂ ಕುಶಂಗುಪದೇಶಿಸಲ್ಕೆನೆ ಬಸಂತಸ್ತ್ರೈಪಂ॥

ಉಳಿದಗಸ್ತ್ಯಾಂಕಾಯನವ ಭಾಸ್ಕರಂ ತನ್ನ
ಬಳಿಗೆ ಬರೆ ಹರ್ಷದಿಂದುತ್ತರದಿಶಾವನಿತೆ
ಸಲೆ ಸುರಿಸುತಿರ್ಪ ಶೀತಾಶ್ರುವೆನೆ ತುಹಿನಾದ್ರಿಹಿಮಜಲಂ ಪ್ರವಹಿಸಿದುದು

ಘನತಾಪಕೆಡೆಯಾದ ಪಗಲುಮತಿಶಯಮೆನಿಪ ೨೩
ತನುತೆಯಂ ತಳೆದಿರುಳ್ ತೋರ್ದುವಾಗ್ರೀಷ್ಮದೊಳ್
ಪ್ರಣಯಕಲಹದೆ ಭಿನ್ನರಾಗಿ ಮಿಗಿಲಾದಳಲನಾಂತ ದಂಪತಿಗಳಂತೆ॥
ದಿನದಿನಕೆ ಗೃಹದೀರ್ಘಿಕೆಗಳ ಶೈವಾಲಯುತ
ಮೆನಿಪ ಸೋಪಾನಾಳಿ ಹೊರಬೀಳೆ ವಾರಿಯುಂ
ವನಿತಾನಿತಂಬಪ್ರಮಾಣಮಾಯ್ತಬ್ಜನಾಳಂಗಳುಂ ಕಂಡವಾಗಂ॥

ಸಂದನಸ್ಥಲದಲ್ಲಿ ಸಂಜೆಯೊಳರಲ್ದು ಮಿಗೆ ೨೪
ಪೊಂದಿ ಸದ್ಗಂಧಮಂ ಪೊಳೆವ ಮಲ್ಲಿಗೆನನೆಗ [ತಾಂ॥
ಳೊಂದೊಂದರಲ್ಲಡಿಯಿಡುತ್ತೆ ಮೊರೆವಳಿ ತೋರ್ದುವೆಣಿಸುವಂತವುಗಳಂ
ಇಂದುಮುಖಿಯರ ಬೆಮರ್ದ ನವನಖಕ್ಷತಿಗಳಂ
ಪೊಂದಿದ ಕದಂಪುಗಳನಂಟೆ ಕಿಂಜಲ್ಕಂಗ
ಳಂದವರ ಕಿವಿಯಿಂ ಶಿರೀಷಕುಸುಮಂ ಜಾರ್ದೊಡಂ ಜವವೆ ಬಿಳ್ದುದಿಲ್ಲಂ॥

ಧಾರಾಗೃಹಂಗಳೊಳ್ ಯಂತ್ರಶೀತಲಪಯಃ ೨೫
ಪೂರದಿಂವ್ಯಾಪ್ತಂಗಳಾಗಿರ್ದ ಚಂದನಸು
ಪಾರಿಸಂಕ್ಷಾಲಿತೋನ್ಮಣಿಶಿಲೆಗಳಲ್ಲೊರಗಿ ಬಿಸಿಲ ಕಳೆದರ್ ಧನಿಕರು॥
ನಾರಿಯರ್ ಮಿಂದು ಬಿರ್ಚಿದ ತಮ್ಮ ಕುರುಳ್ಗಳೊಳ್
ಸಾರಧೂಪವನಿತ್ತು ಸಂಜೆಮಲ್ಲಿಗೆಮುಡಿಯೆ
ಮಾರನ ವಸಂತಾತ್ಯಯದೆ ಪೋದ ಶಕ್ತಿ ವರ್ಧಿಸಿತು ತತ್ಕೇಶಂಗಳಿಂ॥

ಜಿನೆದ ಸುಮರೇಣುವಿಂದರುಣತೆಯನಾಂತು ತಾಂ ೨೬
ಮೆರೆದುದರ್ಜುನಕುಜೋದಾರಮಂಜರಿ ನೋಡೆ
ಗಿರಿಶನಂಗಜನೊಡಲ ಸುಟ್ಟು ನುಳಿಸಿಂದೆ ಹರಿದೊಗೆವ ತನ್ಮೌರ್ವಿಯಂತೆ॥
ಸುರುಚಿರದ ಮಾಂದಳಿರೊಳಂ ಪಳೆಯ ಸುರೆಯೊಳಂ
ಸ್ಫುರಿಪ ಪೊಸಪಾದರಿಯಪೂವೊಳಂ ಬಗೆಗೊಳ್ವ
ಪರಿಮಳವನಿತ್ತು ಕಾಮಿಗಳ ತಾಪಾದಿದೋಷವ ಕಳೆದನಾ ಬಸಂತಂ॥

ಉರಿಯುಗುಳ್ವಾ ಬೇಸಗೆಯೊಳೀರ್ವರೇ ಜನಕೆ ೨೭
ಪರಮಪ್ರಿಯರ್ಕಳಾದರ್ ಸ್ವಪಾದಸುಸೇವೆ [ಸಖನುಂ
ಯುರೆ ಮಾಳ್ಪವರ ತಾಪಮಂ ಹರಿಸ ಲುದಯಿಸಿದ ಕುಶನೃಪಂ ಕುಮುದ॥
ತರುವಾಯದಲ್ಲೂರ್ಮಿಲೋಲಮದಹಂಸಕುಲ
ಭರಿತಮುಂ ತಟಲತಾಸುಮಯುತಂ ಗ್ರೀಷ್ಮಸುಖ [ಪಂ॥
ಕರಮೆನಿಪ ಸರಯುವೊಳ್ ಕ್ರೀಡಿಸಲ್ಕೆಳಸಿದಂ ಸತಿಯರೊಡನಾ ಭೂಮಿ

ತಡಿಯೊಳೊಪ್ಪಿರೆ ಪಟಗೃಹಂಗಳುರೆ ಜಾಲಿಕರ್ ೨೮
ಮಡುವಿಂದೆ ಹೊರದೆಗೆಯೆ ಮೊಸಳೆಗಳ ವಿಹರಿಸಲ್
ತೊಡಗಿದಾ ಸರಯುವೊಳ್ ವಿಷ್ಣುತೇಜಂ ಕುಶಂ ನಿಜವೈಭವಾನುಗುಣದಿಂ
ಬಿಡಪ ತತ್ತೀರಸೋಪಾನದಿಂದಿಳಿವ ಪೆ
ಣ್ಗಡಣದನ್ಯೋನ್ಯಕೇಯೂರಘರ್ಷಣದೆ ಕಾ
ಲ್ತೊಡವಿಂದೆಯುಂ ಜನಿಪ ರವಮಾ ನದೀಹಂಸಚಯಕೆ ಭೀತಿಯನೆಸಗಿತು॥

ತರುಣಿಯರ್ ತಾಂ ಪರಸ್ಪರಸೇಚನಾಸಕ್ತ ೨೯
ಪರರಾಗಿ ನೀರಾಟವಾಡುವುದನಳ್ತಿಯಿಂ
ತರಣಿಸ್ಥ ಕುಶನೀಕ್ಷಿಸುತೆ ಕೆಲದ ಚಾಮರಗ್ರಾಹಿಣಿಗೆ ಪೇಳ್ದನಿಂತು॥
ಸರಯೂಪ್ರವಾಹಮಿದು ತಾಂ ಕ್ರೀಡಿಪೆನ್ನಂತ
ಪುರದಂಗನಾಕುಲದ ಗಲಿತಾಂಗರಾಗದಿಂ [ಕಿಸು॥
ಬೆರೆದು ಮೇಘೋಪೇತಸಂಧ್ಯೋದಯದೊಲಖಿಳವರ್ಣವಾಂತುದು ಪರಿ

ತರಣಿಸಂಕ್ಷುಭಿತೋದಕಂಗಳವರೋಧಸುಂ ೩೦
ದರಿಯರಂಜನವ ಕೊಂಡದಕೆತಾಂ ಮೂರಿತ್ತ
ಏರದೆ ತದ್ವನಿತೆಯರ ಲೋಚನಂಗಳ್ಗೆ ಮದರಾಗಶೋಭೆಯನೀಕ್ಷಿಸು॥
ಗುರುನಿತಂಬಸ್ತನದ ತನುವ ಪೊರಲಾರದೀ
ತರುಣಿಯರ್ ಕೇಯೂರಲಸಿತಬಾಹುಗಳಿನೀ
ಸರಯುವೊಳ್ಬಿಡದೀಸುತಿರ್ಪರೆನಿತೋ ಕಷ್ಟಮಾದೊಡಂ ರಾಗವಶದಿಂ ॥

ನೀರಾಟವಾಡುವೀ ನಾರಿಯರ ಕಿವಿಗಳಿಂ ೩೧
ಜಾರಿದ ಶಿರೀಷಸುಮಭೂಷಣಂಗಳ್ ನದಿಯ [ವು॥
ಪೂರದೊಳ್ ತೇಲ್ದು ಹಾವಸೆಯನೆಳಸುವ ಮೀಂಗಳಂ ಮೋಸಗೊಳಿಸುವ

ಪೀರಿದಳ್ತಿಯೊಳುದಕಮಂ ಚಿಮ್ಮುತಿರ್ಪಾವರ
ತೋರಮೊಲೆಗಳ ಮೇಲೆ ಬೀಳ್ವ ಮುಕ್ತಾಸದೃಶ
ವಾರಿಬಿಂದುಗಳಲ್ಲಿ ಪರಿದುರುಳ್ದ ಹಾರಮನೆ ನೋಡರೀ ಕಾಮಿನಿಯರು ॥

ಬಳಿಯೊಳೀ ಸಂಪ್ರಾಪ್ತಮಾದವೀ ಪೆಣ್ಗಳ್ಗೆ ೩೨
ಸುಲಲಿತಾವಯವೋಪಮಾನಂಗಳುರೆ ನೋಡು ಲ್ತವು॥
ಸುಳಿಯಂ ಸುನಾಭಿ ವಳಿಯಂ ಪುರ್ವುಮೆಣೆವಕ್ಕಿಗಳ ಮೊಲೆಗಳುಂ ಪೋ
ಲಲನೆಯರ ಗೀತದಿಂ ತಳ್ತೊಗೆದ ಜಲಮುರಜ
ಕಲರವಂ ತೀರದ ಕೆದರ್ವಗರಿಗಳ ನವಿ [ಗುವುದು॥
ಲ್ಗಳ ಮಧುರಕೇಕೆಗಳಿ ನಭಿನಂದ್ಯಮಾನ ಮೆನಿಸುತೆ ಕಿವಿಯನಿದು ಪು

ಅಳಿಕುಂತಳೆಯರಂಬರಾತ್ಲಿಷ್ಟಸುಶ್ರೋಣಿ ೩೩
ಗಳ ಮೇಲೆ ಚಂದ್ರಿಕಾ ವೃತತಾರೆಗಳೊಲಿರ್ಪ
ಜಲಪೂರ್ಣಸೂತ್ರಪಥದೀ ಮೇಖಲಾಭೂಷಣಂಗಳಾಂತವು ಮೌನಮಂ॥
ಕೆಳದಿಯರ ಮೇಲೆ ಕೈಯೆತ್ತಿ ಗರ್ವದೆ ಸೂಸೆ
ಸಲಿಲವನವರುಂ ಮರಳ್ಚು ಚಿಮ್ಮೆ ಸಿಜಮುಖದೊಳೀ [ರು॥
ಲಲನೆಯರ್ ಚೂರ್ಣಾರುಣಾಂಬುಬಿಂದುಗಳ ಸರಳಾಲಕಾಗ್ರದಿನುಗುಳ್ವ

ಗಲಿತಪತ್ರಸುರಚನದಿಂ ಕೆವರ್ದ ಕೇಶದಿಂ ೩೪
ಸಲೆ ಜೋಲ್ದ ಮುತ್ತುಗಳ ತಾಟಂಕದೊಳವಿಂತು [ನುತಂ॥
ಜಲವಿಹಾರಾಕುಲಿತಮಾದೊಡಂ ಸೊಗಯಿಸುವುದಿವರ ಮುಖವೇಷಮೆ
ಇಳಿದು ಪಡಗಿಂದೆ ಚಲಹಾರಕುಶ ನವನೊಡನೆ
ಸಲಿಲದೊಳ್ ಕ್ರೀಡಿಸಿದನ್ನೈದೆ ವನವಾರಣಂ [ವಂತೆ॥
ನಳಿನಿಯಂ ಕಿಳ್ತು ತಾಂ ಸ್ಕಂಧದೊಳ್ ತಳೆದು ಕರಿಣಿಗಳೊಡನೆ ರಮಿಸು

ಘನತೇಜನಾದ ನೃಪನಿಂ ಕೂಡೆ ಬಳಿಕಮಾ ೩೫
ವನಿತೆಯರ್ ಮಿಗೆ ರಂಜಿಸಿದರರಿಯೆ ಮೊದಲೆ ಕ [ನ್ನೆಂ?॥
ಣ್ಗನಿತೊ ಸೊಗಸೀವ ಮುತ್ತುಗಳುನ್ಮಯೂಖನೀಲವೆ ತಳ್ತೊಡೊರೆವುದಿ
ಪ್ರಣಯದಿಂದಾ ಯುವತಿಯರ್ ಕುಶನ ಮೇಲೆ ಕಾಂ
ಚನದ ಜೀರ್ಕೊಳವಿಗಳಿನೊತ್ತೆ ಬಣ್ಣದ ಜಲವ
ಜನಪನವನುರೆ ತೊಳಗಿದಂ ಧಾತುನಿಷ್ಯಂದಯುತನಗೇಂದ್ರನ ಪಾಂಗಿನಿಂ।

ಸರಯೂತರಂಗಿಣಿಯೊಳವರೋಧತರುಣಿಯ ೩೬
ರ್ಕೈವರಸಿ ಬಿನದಿಪ ಕುಶಂ ಬಾಂದೊರೆಯೊಳಚ್ಚರಸಿ
ಯರ ಕೂಡಿ ವಿಹರಿಸಮರಾಧಿಪನ ಲೀಲೆಯಂ ಪೋಲ್ತನಾ ಸಮಯದಲ್ಲಿ।
ವರಕಲಶಭವನಿಂದೆ ಪಡೆದು ರಾಮಂ ನಾಡ
ಒಲಿದೊಡನೆ ತನಗಿತ್ತ ಜೈತ್ರಭೂಷಣವ ತಾಂ [ರಿಯದಂತೆ॥
ಧರಿಸಿ ರಮಿಸಾ ನೃಪತಿಯಿಂದಮದು ಜಗುಳ್ದು ಜಲದೊಳ್ ಮುಳುಗಿತ

ಎಳಸಿದೋಲ್ ಮಿಂದು ಕಾಂತೆಯರೊಡನೆ ತೀರಪಟ ೩೭
ನಿಲಯಕ್ಕೆ ಬಂದೊಡನೆ ತಾನಂಬರಾದಿಗಳ
ತಳೆವುದಕೆ ಮುನ್ನಮೇ ದಿವ್ಯವಲಯವಿಶೂನ್ಯಭುಜನ ಕುಶನೀಕ್ಷಿಸಿದನು॥
ಗೆಲವೀವುದುಂ ಮೊದಲ್ ತಂದೆ ಧರಿಸಿರ್ದುದಾ
ವಿಲಸಿತಾಭರಣಮದರಿಂದದರ ನಾಶದಿಂ
ವಳಲ್ದನಾತಂ ಲೋಭದಿಂದಲ್ತು ಭೂಷಣಂ ಸುಮುಸಮುಂ ತದ್ವಿಧಂಗೆ॥

ಧರದೊಳವ ನರಸಲ್ಕೆ ಜಾಣ್ಮೆಯಿಂದೀಸುವುದ ೩೮
ಪರಿದಿರ್ದ ಜಾಲಿಕರ್ಗರೆ ಬೆಸಸಿದರಸಂಗೆ
ಸರಯುವೊಳ್ ಮುಳುಗಿ ನಿಷ್ಫಲರಾಗಿ ಬಾಡದಾನನದೊಳವರಿಂತೆಂದರು॥
ನರಪತಿಯೆ! ಜಲಮುಗ್ನಮಾದ ನಿನ್ನುತ್ತಮಾ
ಭರಣಮದು ಯತ್ನಿಸಿದೊಡಂ ದೊರೆಯದಾ ಮಡುವೊ [ಯಂ॥
ಳಿರುತಿರ್ದ ಕುಮುದಾಖ್ಯನಾಗನದನಾಶೆಯಿಂ ಕೊಂಡಿರ್ದನಿದು ನಿಚ್ಚ

ಒರೆಯುಲವರಿಂತು ಕೋಪಾರುಣಾಂಬಕನಾಗಿ ೩೯
ಬರುತೆ ತತ್ತೀರಕೆದೆಯೇರಿಸುತೆ ಬಿಲ್ಗೆ ತಾ
ನುರಗನಾಶಕೆ ಗಾರುಡಾಸ್ತ್ರಮಂ ಕೈಕೊಂಡು ತದ್ಧನುರ್ಧರಕುಶನೃಪಂ॥
ಬರದೊಳಾ ಅಸ್ತ್ರಮಂ ಪೂಡೆ ಕದಡೆದ್ದು ಮಿಗೆ
ತೆರೆಗೆಯ್ಗಳಿಂದೆ ತಡಿಗೆಡವುತಂ ಮಡುವಾಗ
ಪರುಷರವಮುಂ ಗೆಯ್ದುದವಪಾತದೊಳ್ ಬಿಳ್ದ ಪಸ್ಸ್ವಾರಣದಪಾಂಗಿಂ॥

ಕದೆದ ಕಡಲಿಂದೆ ಕಲ್ಪಾವನೀಜಂ ರಮೆಯು ೪೦
ನೊಡಗೊಂಡು ಮೇಲಕೇಳ್ವಂದದಿಂ ಕೊಡಗೂಸ
ನೊಡಗೂಡಿ ಭುಜಗರಾಜಂ ಕ್ಷುಭಿತನಕ್ರನೆ [illegible]

ತಡೆಯದರ್ಪಿಸಲಾ ವಿಭೂಷಣವ ಕೈಯಲ್ಲಿ
ಪಿಡಿದೈದುಪಂ ಕಂಡು ಕುಶನೃಪಂ ತತ್‌ಕ್ಷಣದೆ
ಬಿಡದೆ ಮರಳಿಸಿದನಸ್ತ್ರವ ಸಂತರಾನತರೊಳನಿಯತಾಕ್ರೋಶರಲ್ತೆ ॥

ವೈನತೇಯಾಸ್ತ್ರಮಹಿಮೆಯನರಿದ ಭುಜಗಪಂ ೪೧
ಮಾನೋನ್ನತಿಯ ಮಸ್ತಕಮನೆಸಲಿ ಬಾಗಿಸುತೆ
ತಾನುಸುರ್ದಂ ಜಗತ್ಪತಿಸುತನು ಪರಿಕುಲಾಂಕುಶನು ಮೆನಿಪಾ ಕುಶಂಗೆ॥
ನೀನಮರಕಾರ್ಯಕ್ಕೆ ನರನಾಗಿ ಪುಟ್ಟಿದಾ ।
ಶ್ರೀನಿವಾಸನ ಸುತಾಪ್ತ್ವಯದನ್ಯಮೂರ್ತಿಯೆಂ
ದಾನರಿಪು ಮಾರಾಧ್ಯನಾದ ನಿನ್ನಳ್ತಿಗೆ ವಿಘಾತವೆಸಗುವೆನೆ? ಜನಪಾ! ॥

ಕರಘಾತದಿಂ ಮೂರ್ಧ್ವಗತಮಾದ ಕಂದುಕವ ೪೨
ಪರಿಕಿಪೀ ಬಾಲೆ ನಭದಿಂದೆ ತಾರಗೆ ಬೀಳ್ವ
ತೆರದೆ ಮಡುವಿಂ ಬೀಳ್ವನಿನ್ನಭೂಷಣವ ಕೊಂಡಳ್ ಕೌತುಕದೆ ಕಂಡವಂ।
ಪರತಿಂಜನೀಘಾತರೇಖಾಂಕದಿಂ ತಳ್ತು
ಘರಿಯ ರಕ್ಷಾಪರಿಘಮೆನಿಸುತುರುಶಕ್ತಿಯಿಂ
ಮೆರೆವ ನಿನ್ನಾಜಾನುಲಂಬಿಭುಜಮಂ ಮತ್ತೆ ಪೊಂದುಗೀ ದಿವ್ಯವಲಯಂ॥

ನಿರುತಂ ತ್ವದಂಘ್ರಿಸೇವೆಯೊಳಿರ್ದು ನಿನಗೆ ತಾಂ ೪೩
ವಿರಚಿಸಿದ ತಪ್ಪ ಪರಿಹರಿಸಿಕೊಳಲೆನ್ನಯಾ
ಕಿರಿಯಸೋದರಿ ಕುಮುದ್ವತಿ ವಾಂಛಿಸಿದಳಿವಳ ನೀಂ ಪರಿಗ್ರಹಿಪುದೆಂದು॥
ಒರೆದು ವಲಯವನರ್ಪಿಸಿದ ಕುಮುದನಂ ಶ್ಲಾಘ್ಯ
ತರಬಂಧುವೆನಗೆ ನೀನೆಂದ ಕುಶನೃಪತಿಗಾ
ಉರಗನಿತ್ತಂ ನೆಂಟರೊಡಗೂಡಿ ವಿಧಿಯಿಂದೆ ಕುಲಭೂಷಣೆಯ ಕನ್ಯೆಯಂ॥

ಪರಮಮಂಗಳಘೋರ್ಣದಿಂ ಗೆಯ್ದು ವಲಯದಿಂ ೪೪
ಮೆರೆವಾ ಕುಮುದ್ವತೀಹಸ್ತಮಂ ಕುಶನೃಪತಿ [ದಂ॥
ಯುರಿವಗ್ನಿಯುಗ್ರಮೊಳ್ ಸಾಹಚರ್ಯಕ್ಕಾಗಿ ಪಿಡಿಯೆ ತಾಂ ಪಪ್ಪ ಪಿಂ
ಭರದಿಂ ದಿಗಂತಂಗಳೆಲ್ಲಮಂ ವ್ಯಾಪಿಸುವ
ಸುರತೂರ್ಯಸುಸ್ವನಂ ಪೊಣ್ಮಿದುದು ಬಳಿಕಮುರೆ
ಸುರಿಸಿದವು ವರಗಂಧಯುತಮಾದ ಪುಷ್ಪವೃಷ್ಟಿಯ ಸದ್ಯ ತಾಘ್ರಂಗಳ್॥

ತನಗೆ ಲೋಕತ್ರಯದ ಗುರುವಾದ ರಾಘವನ ೪೫
ತನಯನೊಳ್ ಬಂಧುತ್ವಮಾಗೆ ಕುಮುದಂ ತನ್ನ [೪ರ್ದ೯೦||
ಜನಕನಂ ಕೊಂದು ಪಗೆಯೂವ ಗರುಡನ ಶಂಕೆಯಂ ತೊರೆದು ಸುಖದೊ
ಜನಪಕುಶನುಂ ತನಗೆ ತಕ್ಷಕಂಗ್ಯೆವನೆಯು
ತನುಜನಾದಾ ಭುಜಗಪಂ ಬಂಧುವಾದ ಕಾ
ರಣದಿಂದೆ ಸರ್ಪಭಯರಹಿತಧರೆಯಂ ಪ್ರಜಾಪ್ರಿಯನಾಗಿ ಪಾಲಿಸಿದನು||

---

# ಸಪ್ತದಶಸರ್ಗಂ.

ಸೂ;—ಕುಶನ ಸಮನಂತರಂ ತತ್ತನುಜನತಿಥಿ ತಾಂ
ವಸುಮತೀಶ್ವರನಾಗಿ ಪ್ರಜೆಗಳಂ ಪಾಲಿಸು [೪೨||
ತ್ತ ಸಮುಕೀರ್ತಿಯು ಪಡೆದು ರಂಜಿಸುತ್ತಿರ್ದನತಿಸುಖದಿಂದೆ ಭೂತಲದೊ

ಸತಿಶಿರೋಮಣಿ ಕುಮುದ್ವತಿ ಕುಶಮಹೀಶನಿಂ ೧
ದತಿಥಿನಾಮಕಪುತ್ರನಂ ಪೆತ್ತಳೊಲವಿಂದೆ [೧೩೦||
ಮತಿ ಕಡೆಯ ಯಾಮಿನೀಯಾಮದಿಂದಂ ಪ್ರಸನ್ನತೆಯ ಪಡೆಯುವಪಾಂ
ಅತಿತೇಜದಿಂ ಮೆರೆವ ಪಿತೃಮಂತನಾದ ತ
ತ್ಸುತನ್ಯೆದೆ ತನ್ನ ತಾಯ್ತಂದೆಗಳ ಕುಲಕೆ ಏಸು
ಳತೆಯನಿತ್ತಂ ದಕ್ಷಿಣೋತ್ತರಾಬ್ಧ ಪವಿತ್ರಂಗೆಯ್ವ ದಿನಪನಂತೆ||

ಕುಲವಿದ್ಯೆಗಳ ಸದರ್ಥಗ್ರಹಣಮಂ ಮೊದಲ್ ೨
ಬಳಿಕಮವನಿಪಕನ್ಯೆಯರ ಕರಗ್ರಹಣಮಂ
ಒಲವಿಂದೆ ಮಾಡಿಸಿದ ನಾತ್ಮಜಂ ಗರ್ಥಜ್ಞತಿಲಸಾಗಿರ್ದ ಪಿತನು||
ಸಲೆ ಕುಲೀನತೆಯೊಳಂ ಶೌರ್ಯದೊಳ ಮಿಂದ್ರಿಯಂ
ಗಳ ಸುನಿಗ್ರಹದೊಳಂ ತನಗೆ ಸಮನೆನಿಸುತಂ
ತೊಳಪ ತತ್ಪುತ್ರನಂ ತನ್ನಪರರೂಪನೆಂದೇ ಭಾವಿಸಿದನಾತನು||

ಅಮರನಾಥಂಗೆ ನಿಜವಂಶಸಮುಚಿತಸಹಾ ೩
ಯಮನೆಸಗಲ್ಕೆಂದು ಪೋಗಿ ಕುಶಭೂಪರಂ [ನನಸಿಂ||
ಸಮರದೊಳ್ ದುರ್ಜಯಾಸುರನ ಕೊಲ್ವಾಸಮಯದೊಳ್ ತಾನುಮಳಿದ

ಸಮನಂತರಂ ಭುಜಂಗಮರಾಜನಾದ ತ
ತ್ಕುಮುದನವರಜೆ ಕುಮುದ್ವತಿಯಾತ್ಮಪತಿಯನನು [ತೆ॥
ಗಮಿಸಿದಳ್ ಬಿಡದೆ ಕುಮುಹಾನಂದಸಂ ಶಶಿಯನನುಗಮಿಪ ಜೊನ್ನದಂ

ಸುರಪತಿಯ ಸಿಂಹಾಸನಾರ್ಧಭಾಗಕ್ಕೆ ತಾ ೪
ನರುಹನಾದಂ ಕುಶಂ ಮತ್ತಂ ಕುಮುದ ತಿಯು
ವರಪಾರಿಜಾತಾಂಶಭಾಗಿನಿಯೆನಿಪ್ಪ ಸಖಿಯಾದಳಾ ಇಂದ್ರಾಣಿಗೆ॥
ತರುವಾಯುದೊಳ್ ಧುರಕೆ ಪೋಪ ಸನ್ಞಯದೊಳೆ ತ
ವ್ಮೈರಿಯನೊರೆದಿರ್ದಂತಿವಾಜ್ಞೆಯಂ ನೆನೆದವನ
ವರಪುತ್ರನೊಳ್ ರಾಜ್ಯವಿರಿಸಲುಜ್ಜುಗಿಸಿದರ್ ವೃದ್ಧಸಚಿವರ್ಕಳೊಲವಿಂ॥

ಅತಿಮುದಂಬೆತ್ತು ಪಟ್ಟಾಭಿಷೇಕಕ್ಕವರ್ ೫
ಚತುರಶಿಲ್ಪಿಗಳಿಂದೆ ಮಾಡಿಸಿದರಭಿನವೋ
ನ್ನತವೇದಿಕೆಯೊಳೆಸೆವ ನಾಲ್ಕುಕಂಬಂಗಳ ಮನೋಜ್ಞಮಂಡಪವನಲ್ಲಿ॥
ನುತಭವ್ಯಪೀಠದೊಳ್ ಮಂಡಿಸುವಿನಂ ಕುಶನ
ಸುತನವನ ಬಳಿಯಲ್ಲಿ ವಿಮಲತೀರ್ಥಾಂಬುಪೂ
ರಿತಹೇಮಕಲಶಂಗಳೊಡನೆ ತಾವೆಲ್ಲರುಂ ನೆರೆದರತಿಸಂಭ್ರಮದೊಳು॥

ಮುಂದೆ ವಿಚ್ಛೇದಮಿಲ್ಲದ ನಿತ್ಯಕಲ್ಯಾಣ ೬
ದಿಂದಿರ್ಪನೀ ಅತಿಥಿಯೆಂಬುದಂ ಪ್ರಜೆಗಳ
ಲ್ಲಿಂದು ವರತೂರ್ಯನಿವಹಜನಿತಗಂಭೀರಮಧುರಸ್ವನಂ ಪುಟ್ಟಿಸುತಿರೆ॥
ಬಂದು ಪರಮಾನಂದದಿಂ ಜ್ಞಾತಿವೃದ್ಧಜನ
ವ್ರಂದಮರ್ಪಿಸಿದ ದೂರ್ವಾಯವಾಂಕುರತತಿಯ
ನೊಂದಿರ್ಪ ಕಿಸಲಾದಿಯೊಳೆಸೆವ ನೀರಾಜನವನಾಂತನಾ ನೃಪಸುತಂ॥

ಬಳಿಕಂ ಪುರೋಹಿತಪ್ರಮುಖಭೂಸುರರ್ಕೈದೆ ೭
ಗೆಲುವ ತಂದೀವಥರ್ವಾಮ್ನಾಯಮಂತ್ರಸಂ
ಕುಲದಿನಭಿಷೇಕಮನುಪಕ್ರಮಿಸಿದರ್ ಜಿಷ್ಣುವಾದತಿಥಿಭೂಮಿಪಂಗೆ॥
ಸಲೆ ತನ್ನ ಪೀಠಮಸ್ತಕವಲ್ಲಿ ಬೀಳ್ವರವ
ಕಲಿತಮಜ್ಜನವಾರಿಪೂರಮದು ನೋಡೆ ತಾಂ
ತೊಳಗಿಮದು ಪುರವೈರಿಶಿರದಲ್ಲಿ ಬೀಳ್ವ ಗಂಗಾಪ್ರವಾಹದ ವಾಳ್ಕೆಯಿಂ॥

ಇರದೆ ತತ್ಸಮಯದೊಳ್ ವಂದಿನಿಕರಂ ಪೊಗಳೆ ೮
ಪರಿವರ್ಧಿತಾನಂದನಾಗಿ ತಾಂ ಜಾತಕೋ
ತ್ಕರದಿನಭಿನಂದಿತಮೆನಿಪ್ಪ ಮೇಖಾವ ಪಾಂಗಿನಿಂ ತೋರ್ಬನತಿಥಿರಾಜಂ॥
ವರಮಂತ್ರಪೂತಜಲಮಜ್ಜನದೆ ತನ್ಮಹೀ
ಶ್ವರಚಂದ್ರಮನ ಕಾಂತಿಯುದು ನಾಪೆ ಪೆರ್ಚಿದುದು
ಪರಿಕಿಪೊಡೆ ವೃಷ್ಟಿಸೇಚನದಿಂದೆ ವೈದ್ಯುತಾಗ್ನಿಯ ದೀಪ್ತಿ ಬಳೆವತೆರದಿಂ॥

ಸ್ನಾತಕರ್ಗವರೊಡರ್ಚುವ ಪೂರ್ಣದಕ್ಷಿಣೋ ೯
ಪೇತಯಜ್ಞಕ್ಕೆ ಸಾಲ್ವನಿತು ಸಿರಿಯೀಯೆ ಸಂ
ಜಾತನುಃದನಾವತಿಥಿಭೂಮಿಶ್ವರಂ ತನ್ನಯಭಿಷೇಕದಂತದಲ್ಲಿ॥
ಪ್ರೀತನಾಗಿತ್ತವರ ಪರಕೆಗಳನ್ನೈದೆ ವಿ
ಖ್ಯಾತನಾದಾ ನೃಪನ ಪೂರ್ವಭವಕೃತಕರ್ಮ
ಜಾತಫಲಸಂಚಯಂ ಮುಂದೆ ಬಹುಕಾಲಕ್ಕೆ ಫಲಿಸುವಂತೆಸಗಿತಾಗಂ॥

ಸೆರೆವನೆಯೊಳಿರ್ದವರ ಸೆರೆಗಳಂ ವಧ್ಯರಾ ೧೦
ಗಿರುತಿರ್ಪವರ ವಧೆಗಳಂ ಪಶುಧುರಂಗಳಂ
ತುರುವಿಂಡುಗಳ ದೋಹನಂಗಳುಮನತಿಥಿಭೂವರಪುಂಗವಂ ಬಿಡಿಸಿದಂ॥
ವರಪಂಜರಸ್ಥಶುಕಮುಖ್ಯಂಗಳಾ ಮಹೀ
ಶ್ವರನ ಕ್ರೀಡಾಪಕ್ಷಿಗಳುಮಾತನಾಜ್ಞೆಯಿಂ [ಗಂ॥
ನೆರೆ ಬಂಧಮೋಚನವನಾಂತು ತಾಂ ಸ್ವೇಚ್ಛೆಯಿಂ ಪಾರಾಡುತಿರ್ದವಾ

ಬಳಿಕಮುರುಹರ್ಮ್ಯಾಂಗಣದೊಳಮೂಲ್ಯಾಸ್ತರಣ ೧೧
ಕಲಿತನಾಗಿರ್ದ ಪರಿಶುಭ್ರವಾರಣದಂತ
ವಿಲಸಿತಸುಪೀಠದೊಳ್ ನೇಪಥ್ಯಸಂಗ್ರಹಣಕಾಗಿ ಮಂಡಿಸಿದನರಸಂ॥
ಜಲದಿಂದಮುರೆ ಕೈಗಳಂ ತೊಳೆದುಕೊಂಡು ತಾಂ
ತೊಳಪುಖಿಳವಸ್ತುಗಳನಾಂತಲಂಕರ್ತೃಗಳ್
ಬಳಿಗೈದಿ ಸಿಂಗರಿಸತೊಡಗಿದರ್ ತಮಗ್ಧೂಪಶೋಷಿತಸುಕೇಶಾಗ್ರನಂ॥

ಪರಿಮಳಿತಸುಮಮಾಲೆಯಿಂ ತಳ್ತ ಮೌಕ್ತಿಕವ ೧೨
ಸರದಿಂದೆ ಕಟ್ಟಿವಾ ನೃಪತಿಧಮ್ಮಿಲ್ಲದ
ಲ್ಲಿರಿಸಿದರ್ ತಾಮವರ್ ಸುಪ್ರಭಾಮಂಡಲದ ಮಾಣಿಕ್ಯಭೂಷಣವನು॥

ಹರಿಸದಿಂದಂ ಮತ್ತೆ ಕಸ್ತೂರಿಕಾಮೋದ
ಭರಿತಚಂದನದಂಗರಾಗಮುಂ ಪೂರ್ಸಿ
ವಿರಚಿಸಿದರಮಳಗೋರೋಚನದ ಚಿತ್ರಪತ್ರವನಾ ಮಹೀಶ್ವರಂಗೆ॥

ಧರಿಸಿರ್ದ ಮಣಿಭೂಷಣಾಳಿಯಿಂ ಸುಮಸರೋ ೧೩
ತ್ಕರದಿಂದೆಯುಂ ಹಂಸಚಿತ್ರದ ದುಕೂಲದಿಂ
ಪರರಾಜ್ಯಲಕ್ಷ್ಮೀವಧೂವರಂ ರಂಜಿಸಿದನತಿದರ್ಶನೀಯನಾಗಿ॥
ನೆರೆ ಪೊನ್ನ ಕನ್ನಡಿಯೊಳಾತ್ಮವೇಷವನಿರದೆ
ಪರಿಕಿಪಾ ಭೂಮಿಪನ ಛಾಯೆಯದು ಶೋಭಿಸಿತು [ನಂತೆ।
ಖರಕಿರಣನುದಯಿಸಿರೆ ಮೇರುವೊಳ್ ತೋರ್ಪ ಸುರಕುಜದ ಪಡಿನೆಳಲಿ

ಪಾಣಿಗಳೊಳಾಂತು ನೃಪಚಿಹ್ನಂಗಳಂ ಜಯ ೧೪
ಧ್ಯಾನಮಂ ಮಾಡುತಿರೆ ಪಾರ್ಶ್ವವರ್ತಿಗಳ್ಬಿದೆ
ತಾನಮರಸಭೆಗೆಣೆಯೆನಿಪ್ಪೋಲಗಕೆ ಬಂದು ತನ್ನ ಹೀರಮಣಸಾಗಂ॥
ಕ್ಷೋಣಿಪರ ಮೌಳಿಮಣಿಗಣದ ಘರ್ಷಣದೊಳ
ನ್ಯೂನಶೋಭೆಯನಾಂತ ಪಾದಪೀಠದೊಳಂ ವಿ
ತಾನದೊಳಮೆಸೆವ ಪೈತೃಕಸುಸಿಂಹಾಸನವನೇರ್ದನತಿಹರ್ಷದಿಂದಂ॥

ಶ್ರೀವತ್ಸನಾಮದಿಂದೊಪ್ಪ ವುನ್ನತಮಂಗ ೧೫
ಳಾವಸಥ ದೋಲಗಮುದತಿಥಿನೃಪನಿಂ ತಳ್ತು
ಶ್ರೀವತ್ಸಲಕ್ಷಣಂ ಹರಿವಕ್ಷ ವುರುಕೌಸ್ತುಭದೆ ರಂಜಿಪಂತೆಸೆದುದು॥
ಆವನುಮತೀಂದ್ರನುಂ ಶೈಶವಾನಂತರಮೆ
ಭೂವಲಯವದಿರಾಜ್ಯಮುಂ ಪಡೆದು ಬೆಳಗಿವಂ
ಭಾವಿಪೊಡೆ ಜವದೆ ರೇಖಾಭಾವದಿಂ ಪೂರ್ಣತೆಯನೆ ತಳೆದಿಂದುವಂತೆ॥

ನೊಗದೊಳಾವಗಮುಕ್ಕುತಿರೆ ಕಾಂತಿ ಬಿಡದೆ ಕಿರು ೧೬
ನಗೆಯೊಳೇ ಸಂಭಾಷಣವ ಮಾಡುತಿರೆ ನೃಪಂ
ಬಗೆದರನುಜೀವಿಗಳ್ ವಿಶ್ವಾಸಮೇ ಮೂರ್ತಿವೆತ್ತಿರ್ಪುದೆಂದಾತನಂ॥
ನಗರಿಪುಶ್ರೀಯುತಂ ತನ್ನ ಹೀಶಂ ಮತ್ತೆ
ಸೊಗಸಿನಿಂ ಸುರದಂತಿಬಲವ ಗಜವೇರ್ದು ತಾಂ
ಮಿಗೆ ಚರಿಸಿ ಕಲ್ಪತರುಸಮುಪತಾಕೆಯ ಪುರಮೊಳದನೆಸಗಿದಂ ಸಗ್ಗಮಂ॥

ಶಮಹೀಕಾಂತನೋರ್ವನ ಶಿರದ ಮೇಲಿರ್ಪ ೧೭
ಾಮಣೀಯಕಮೊದ ಛತ್ರದಮಳಪ್ರಭೆಯೆ
ಶಾವಿಶಾಕುಶವಿಯೋಗಜಮೆನಿಪ ಲೋಕಸಂತಾಪಮಂ ಕಳೆದಿರ್ಪುದು॥
ಶಾಮುಸಮನಂತರಂ ವಹ್ನಿಯಿಂ ಶಿಖೆಗಳುಂ
ಹ್ಯೇಮಮಣಿಯುದಯಿಸಿದ ಮೇಲೆ ರಶ್ಮಿಗಳೊಗೆವ [ರ್ದು॥
ಾಮುಪಿತನೃಪನಖಿಳಗುಣದೊಡನೆ ಪುಟ್ಟಿವಂ ತತ್ಸ್ವಭಾವಮನೆ ಮಾ

ೌರಸಾರಿಯುರಳ್ತಿಯಿಂದಲರ್ಬ ಕಣ್ಗಳಿಂ ೧೮
ಾರಘೂದ್ವಪನ ಜೆಂಬಿಡದೆ ಪೋದರ್ ಜ್ವಲಿಪ
ಾರಕೆಗಳಿಂ ಶರತ್ಕಾಲನಿಶೆಗಳ್ ಧ್ರುವನನನುಗಮಿಪ ತೆರದೊಳಾಗಂ॥
ಾರುಸಾಕೇತಪುರದೇವಾಲಯಂಗಳೊಳ್
ಾರತರಪೂಜೆಗಳಸಾಂತ ದೇವತೆಗಳುರೆ
ೀರುತಂ ನಿಜವಿಗ್ರಹಂಗಳೊಳ್ ನಲಿದನುಗ್ರಹಿಸಿದರ್ ತನ್ನೃಪತಿಯಂ॥

ನಘಾಭಿಷೇಕಜಲದಿಂ ಸಾಂದ ವೇದಿ ತಾ ೧೯
ಣಗುವನಿತರೊಳೆ ಸಹಿಸಲ್ಕೆ ದುಸ್ಸಾಧ್ಯಮೆಂ
ನಿಪ ತದ್ರಾಜತಿಲಕಪ್ರತಾಪಂ ಪಸರಿಸಿತು ಬಿಡದೆ ವೇಲಾಂತಮಂ
ನಮಹಿಮನಾದ ಗುರುವರವಸಿಷ್ಠನ ಮಸುಗ
ಸುಪಮುಧನುರ್ಧರನೆನಿಪ್ಪ ತದ್ಭೂವರನ
ಸೆಗಳುಂ ಕೂಡೆ ತಾಮವುಗಳ್ಗೆ ಲೋಕವಲ್ಲಾಪುವಸದಳಮಿರ್ದ್ದುವು॥

ಾದಿತತ್ವ್ರತಿವಾದಿಗಳ ಸಂಶಯಚ್ಛೇದ್ಯ ೨೦
ಾದಂಗಳಂ ಧರ್ಮಪರಸಭ್ಯರೊಡಗೂಡಿ
ೀದಿನೀಪತಿಯತಿಥಿ ತಾನೆ ಪರಿಹರಿಪನಾವಗಮುಪ್ರಮತ್ತನಾಗಿ॥
ಾದಸಮನಂತರಂ ತನ್ಮಹೀಶಂ ವ್ಯಕ್ತ
ಾದಾತ್ಮಸೌಮನಸ್ಯದೆ ಸೂಚಿಸಿದ ಸತ್ಫ
ೋದಯಕ್ಕಾಶ್ರಯಂಗಳಸಾಗಿಸುವಸ್ಸೈದೆ ಸೇಪಕರ ಕೋರಿಕೆಗಳಂ॥

ದಿಗಳ್ ನಭೋಮಾಸದಿಂ ಪೆರ್ಚೆ ತಾಂ ಭಾದ್ರ ೨೧
ವದೊಳಂ ಮಿಗೆ ವರ್ಧಿಪಂತೆ ಕುಶನಿಂದಮ [ರು॥
ಸ್ಯದಯವಾಂತ ಪ್ರಜೆಗಳತಿಥಿನೃಪಕಾಲದೊಳಮಧಿಕವೃದ್ಧಿಯು ಪಡೆದ

ಮೊದಲಿತ್ತುದಂ ಮರಳ್ದು ಕೊಳ್ಳನಾಡಿದ ಮಾತಿ
ಗೊದಗಿಸಂ ಪುಸಿಯನಾ ಭೂಪನರಿಗಳ ರಾಜ್ಯ
ಪ-ವಿಯಂ ಕೊಂಡು ಮತ್ತದನವರ್ಗಿತ್ತುದೇ ವ್ರತಭಂಗವಾಯ್ತಾತಗೆ ||

ಧನವಯೋರೂಪಂಗಳಲ್ಲಿ ತಾನೊಂದೊಂದೆ ೨೨
ಘನಗರ್ವಮಂ ಪುಟ್ಟಿಸುಗುಮವುಗಳೆಲ್ಲಮುಂ
ಜನಪಾಲನಾದತಿಥಿಯಲ್ಲಿರ್ದುಮಾತನ ಮನಕ್ಕೆ ಮದಮುಂಟಲಿಲ್ಲಂ ||
ಅನುದಿನದೊಳಿಂತಿಪಂ ತನ್ನಿಂದೆ ಪ್ರಜೆಗಳೊಳ್
ಜನಿಸಿದನುರಾಗಮದು ಪೆರ್ಚೆ ವೃಥಮೂಲಮೆಂ
ದೆಸಿಸಿದಂ ಕುಜಮೊಲಕ್ಷೋಭ್ಯನಾದಂ ತನ್ನೃಪಂ ಪೊಸಬನಾಗಿರ್ದೊಡಂ||

ಪೊರಗಿರ್ಪ ಶತ್ರುಗಳನಿತ್ತರುಂ ದೂರದ ೨೩
ಳ್ಳಿರುತಿರ್ಪರಾವಕತದಿಂದೊಳಗೆ ನಿತ್ಯರಾ
ಗಿರುವ ಷಡ್ರಿಪುಗಳಂ ಮೊದಲ್ ಗೆಲ್ದಂ ಸುಮತಿಯಾದತಿಥಿರಾಜತಿಲಕಂ||
ಸಿರಿ ಸಾಜದಿಂ ಚಪಲೆಯಾದೊಡಂ ಸ್ಥಿರತೆಯಿಂ
ದಿರುತಿರ್ಪಳಾ ಸುಪ್ರಸಾದಾಭಿಮುಖನಾದ [ದೆ||
ನರಪನೊಳ್ ಹೇಮರೇಖೆಯುಮ ತಾನೊರೆಗಲ್ಲೊಳಚಲತೆಯೊಳಿರ್ಪಂತಿರ

ಧೀರತ್ವದೊಡಗೂಡದಿರ್ಪ ನೀತಿಯುಮ ತಾಂ ೨೪
ಭೀರುತ್ವಮಲ್ತೆ ನಯರಹಿತವಿಕ್ರಮಮುಮಂ
ಕ್ರೂರತ್ವಮದರಿಂ ತದುಭಯಗುಣಮೇಳನವೆ ನೃಪನರಸಿದಂ ಸಿದ್ಧಿಯಂ||
ಚಾರರಿಂಬುರುದೀಪ್ತಿಗನೆಲ್ಲಕಡೆಯೊಳ್ ಪ್ರ
ಸಾರಮಂ ಗೆಯ್ದು ತದಸ್ಖಪಂಗೆ ನಿರ್ಮೇಘ
ಸೂರಂಗಪೆಂತಂತೆ ನಾಡೊಳಣಮಾದೊಡಂ ಕಾಣಮದೆ ಇಲ್ಲಮಲ್ತೆ||

ಪಗಲಿರುಳ್ಗಳ ವಿಭಾಗಂಗಳೊಳ್ ನೃಪನಯದ ೨೫
ಬಗೆಬಗೆಯ ವಿಹಿತಕೃತಿಗಳನಾ ಮಹೀನರಂ
ಬಗೆಯಿಂದೆ ಮಗುಡಮುಂ ಕಿಳ್ತೊಗೆಮ ನಿಶ್ಚಯುವೆ ತಾನನುಷ್ಠಿಪನಾವಗಂ||
ಮಿಗಿಲಾದಮಾತ್ಯರೊಡನಾತನನುದಿನದೊಳಂ
ಬಗೆದ ಮಂತ್ರಂ ಗುಪ್ತಪಥನಾದ ಕತದಿಂದೆ [ತಾಂ||
ಬಗೆವಡದು ಸಂಸೇವ್ಯಮಾನಮಾಗಿರ್ದೊಡಂ ಹೊರಬೀಳದೊಮ್ಮೆಯುಂ

ಪರಿಕಿಪೊಡೆ ತನ್ನೊಳ್ಕೊರ್ವನನೊರ್ವನರಿಯುದಂ ೨೬
ತಿರುತಿಪ ಗೂಢಚರರಂ ಸ್ವಪರಜನರಲ್ಲಿ
ಚರಿಪುವಕ್ಕಿಟ್ಟು ತನ್ನೃಪನುಕ್ತಕಾಲದೊಳ್ ಮಲಗಿಯುಂ ಜಾಗರೂಕಂ[ತ]
ಅರಿನಿರೋಧಕನಾದೊಡಂ ತನ್ನಹೀಂಧನಂ
ಪರಚಪರಾಷ್ಟ್ರವ್ಯಮಾರ್ಗಂಗಳಿಂ ತಳ್ತಿಪಂ
ಕರಿಗಳಂ ಸೀಳ್ದು ಹರಿ ಗಹಿಗಳಲ್ಲಿರಗುವುದು ಭೀತಿಯಿಂದಲ್ಲಮಲ್ತು॥

ಆಸರೆಂದರ್ವ್ಯೋತ್ತಮನ ಸುವಿಚಾರದಯುಕ್ತ ಕ ೨೭
ಲ್ಪ್ಯಾನಕಾರಕಕಾರ್ಯಜಾತಮದು ವಿಘ್ನಕ್ಕೆ [ತ]
ತಾಣವಾಗದೆ ಗೂಢವಾಗಿ ಫಲಿಸಿತು ಗರ್ಭದೊಳ್ ಪಣ್ತು ಕಳವೆಯಂ
ತಾನಧಿಕನ್ನಪ್ರಿಯುಂ ತಳೆದೊಡಂ ಸೋಡೆ ತ
ನ್ನಾಸನಾಗ್ರಜೆ ನಡೆವುದಿಲ್ಲಂ ಕುನಾರ್ಗದೊಳ್ ದಲ್ತು॥
ನಾಸಿರುಮುಷ್ಟಿಯೊಳ್ ಪೆರ್ಚದೊಡಮದು ನದೀಮುಖದೊಳೇ ಪೋಪು

ಜನಿಸೆ ತನ್ನ ಪ್ರಚಾರದಮದೊಳಪ್ರೀತಿ ತತ್ ೨೮
ಕ್ಷಣದೊಳವನನಗಿಸುವ ಶಕ್ತಿಯಾಂತಿರ್ದೊಡಂ
ಜನಪನಾ ಪ್ರಕೃತಿಸರ್ಗದೊಳೆಂದುಮೂ ವಿರಾಗಮನೆ ಪುಟ್ಟಿಸನು ಮತ್ತಂ
ತನಗಧಿಕಬಲವುರ್ದೊಡಂ ಶಕ್ಯವಾದ ರಿಪು
ಗಣದ ಮೇಲಿಯು ದಂಡಯಾತ್ರೆಯುಂ ಕೈಕೊಂಬ
ನನಿಲನ ಸಹಾಯವಾಂತಿರ್ದೊಡಂ ಕಾಳ್ಗಿಚ್ಚು ಜಲದಹನಕಾಶಿಸುವುದೇಂ॥

ನರಪನೊಳ್ ಧರ್ಮವಿಂದರ್ಥಕಾಮಂಗಳುಂ ೨೯
ಪರಿಕಿಸಲ್ಕಾ ಒರಡರಿಂ ಧರ್ಮಮುಂ ಪರ [ಯಿಂ]
ಸ್ವರಸಾರ್ಥಕಾಮಂಗಳುಂ ಬಾಧೆವಡೆಯುವಾ ಮೂರುಮಿರ್ಕುಂ ಸಮತೆ
ಖಿರಿದಿಸಿಪ ಒಂಸಪತೆಯಾಂತೊಡಂ ನೆರವಾಗ
ರುರುವೃದ್ಧಿಯಾಂತೊಡಂ ವೈರಭಾವವ ತಳೆವ
ವರದೆ ಸಬರೆಂದವನರನಿರಿಸಿದಂ ಮಧ್ಯಮಸ್ಥಿತಿಯೊಳಾ ಭೂಮಿಶ್ವರಂ॥

ಸಲೆ ವೊವಲ್ ಸ್ವಪರರಕ್ತ್ಯಾದಿಗಳೊಳಿಹ ಬಲಾ ೩೦
ಬಲವ ನಿರ್ಧರಿಸುತಂ ಶತ್ರುವಿಂ ತಾನಧಿಕ
ಬಲನಾಗೆ ಕವನಕ್ಕೆ ಗಮಿಪನಂತಾಗದಿರೆ ತೊರೆವನವನಾ ಕ್ಷಿತೀಶಂ॥

ಪರಿಕಿಪೊಡೆ ಪಂಚಮಂ ಲೋಕಪಾಲಂ ಷಷ್ಠ
ನುರುಭೂತ ನಷ್ಟಮುಂ ಕುಲಶೈಲನೆಂದು ತ
ನ್ನರಪನಂ ಬಣ್ಣಿಸುಗುಮಲ್ತೆ ತತ್ಸಾಧರ್ಮ್ಯಯೋಗದಿಂ ಲೋಕಮನಿಶಂ||

ಅತಿಥಿಭೂಪನ ಪತ್ರಗತಮೆನಿಪ ಬೆಸನಮಂ ೪೦
ಕ್ಷಿತಿಪಾಲರೆಲ್ಲರುಂ ಧರಿಸಿದರ್ ದೂರಪರಿ
ಹೃತಲಸಚ್ಛತ್ರಮೌಳಿಗಳಿಂದಮಿಂದ್ರನಾಜ್ಞೆಯ ತಳೆದ ಸುರರ ತೆರದೆ||
ನುತತುರಗಮೇಧದೊಳ್ ಮಿಗೆ ದಕ್ಷಿಣೆಗಳನ
ರ್ಚಿತಯಾಜಕರ್ಗಿತ್ತ ಕತದಿಂದೆ ತದ್ಧರಾ
ಪತಿಗೆ ಮತ್ತಂ ಕುಬೇರಂಗೆ ಧನದಾಭಿಧಾನಮುದೇಕವಾಗೆಸೆದುದು||

ಸುರನಾಯಕಂ ಕಾಲಕಾಲಕೆ ಸುವೃಷ್ಟಿಯಂ ೪೧
ಸುರಿಸುವಂ ಸೂರ್ಯತನಯಂ ರೋಗಚಯವ ಪರಿ
ಹರಿಸುವಂ ವರುಣನುದಕಾಧ್ವಂಗಳಂ ನಾವಿಕರ್ಗೆ ಸರಿಗೊಳಿಸುವಂ ತಾಂ||
ಹರಸಖಂ ರಘುಮುಖ್ಯಪೂರ್ವನೃಪಮಹಿಮೆಗಳ
ನರಿಯುತಂ ಕೋಶವೃದ್ಧಿಯನ್ನೈದೆ ಮಾಳ್ಪನೀ
ತೆರದೆ ಶರಣಾಗತರ ವೃತ್ತಿಯಾಂತರ್ ಲೋಕಪಾಲರಾ ಅತಿಥಿಯಲ್ಲಿ||

---

## ಅಷ್ಟಾದಶಸರ್ಗಂ.

ಸೂ:— ಅತಿಥಿಭೂಮಿಶಸಮನಂತರಂ ನಿಷಧಭೂ
ಪತಿಮುಖ್ಯರಾದೇಕವಿಂಶತಿಮಹೀಶ್ವರರ್
ನುತಿವೆತ್ತ ರಘುವಂಶದಲ್ಲನುಕ್ರಮದಿಂದೆ ಪುಟ್ಟಿ ರಾಜ್ಯವನಾಳ್ದರು||

ಜಿತಶತ್ರುವಾದತಿಥಿರಾಜಪುಂಗವ ನರ್ಧ ೧
ಪತಿಯೆಂಬ ನೈಷಧನ ಸುತೆಯಲ್ಲಿ ನಿಷಧಪ
ರ್ವತಸದೃಶಬಲನಾದ ನಿಷಧಾಖ್ಯತನುಜಾತನಂ ಪಡೆದನಾ ಬಳಿಕ್ಕಂ||
ಪಿತನುರುಪರಾಕ್ರಮದೆ ರಾಜ್ಯರಕ್ಷಣದ ಯೋ
ಗ್ಯತೆಯೊಂತ ತದ್ಯುವಕಸುತನಿಂದೆ ನಲಿದನುಪ
ಗತವೃಷ್ಟಿಯಿಂದಂ ಫಲಾಭಿಮುಖಮಾದ ಸಸ್ಯದೆ ನಲಿವ ಲೋಕದಂತೆ||

ಚಿರಕಾಲಮನುಭವಿಸಿ ಶಬ್ದಾದಿಸುಖವ ತಾ ೨
ನಿರಿಸಿ ನಿಜಪುತ್ರನೊಳ್ ರಾಜ್ಯವ ಕುಮುದ್ವತೀ
ವರಸುತಂ ಪೋಗೆ ಕುಮುದಾವದಾತಸುಕರ್ಮಲಬ್ಧ ನಿರ್ಜರಲೋಕಕೆ
ಸರಸಿಜಾಕ್ಷಂ ಶರಧಿಗಂಭೀರಚಿತ್ತನುಂ
ಸ್ಫುರದರ್ಗಳಾದೀರ್ಘಭುಜನೇಕವೀರನಾ
ಗಿರುವ ತತ್ಕುಶಪೌತ್ರನಾಳ್ದನಬ್ಧ್ಯಂತವಸುಧೇಕಾತಪತ್ರಧರೆಯಂ॥

ನಳಿನಾಸ್ಯನನಲತೇಜಂ ನಿಷಧತನುಭವಂ ೩
ನಳನಾಮಕಂ ಪಿತನ ಸಮನಂತರಂ ತಳೆದು
ಕುಲರಮೆಯನರಿಬಲವ ಮರ್ದಿಸಿದನಿಭವರಂ ನಡ್ವಲವ ಮರ್ದಿಪಂತೆ॥
ಬಳಿಕಂ ನಭಶ್ಚರಸ್ತುತಯಶಂ ತದ್ರಾಜ
ತಿಲಕನುರೆ ಪಡೆದಂ ನಭೋಮಾಸದೊಳ್ ಪ್ರಜಾ
ವಳಿಗೆ ಪ್ರಿಯನಾಗಿರ್ದ ನಭನೆಂಬ ಸೂನುವಂ ವರನಭಶ್ಯಾಮತನುವಂ॥

ಚಂಡವಿಕ್ರಮಸೂನುಗಿತ್ತಯೋಧ್ಯೆಯ ಧರಾ ೪
ಮಂಡಲಪತಿತ್ವಮಂ ತನ್ನ ಜರೆಯೊರೆಯೆ ಮಿಗ
ವಿಂಡುಗಳ ನೇಹಮಂ ಕೈಕೊಂಡನಾ ಧರ್ಮಪರನಲಂ ಮುಕ್ತಿಗೆಳಸಿ॥
ಪುಂಡರೀಕಾಖ್ಯನವನಿಪವಾರಣಾಜಯ್ಯ
ಪುಂಡರೀಕಂ ನಭನಿನುದಿಸೆ ತದನಂತರಂ
ಪುಂಡರೀಕಾಂಬಕನನೆಂತಂತೆ ಧೃತಪುಂಡರೀಕೆ ರಮೆ ಸೇರ್ದಳವನಂ॥

ಕ್ಷಮೆಯಿಂದೆ ತಳ್ತು ಪ್ರಜಾಕ್ಷೇಮವೆಸಗಲು ೫
ತ್ತಮನಾದ ಪುತ್ರನಂ ಕ್ಷೇಮಧನ್ವನ ನಿರಿಸಿ
ಕ್ಷಮೆಯ ರಕ್ಷಣದೊಳಾಚರಿಸಿದಂ ತಪವ ವನದೊಳ್ ಕ್ಷಾಂತಪುಂಡರೀಕಂ॥
ಸಮರದೊಳನೀಕಿನಿಗಳಗ್ರೇಸರಂ ದೇವ
ಸಮನುಮಪ್ಪಾತ್ಮಜಂ ಕ್ಷೇಮಧನ್ವಂಗೊಗೆಯು
ಲಮರಲೋಕದೊಳವೊಸುತನ ದೇವಾನೀಕನಾಮಂ ಪ್ರಸಿದ್ಧಮಾಯ್ತು॥

ಅತಿಭಕ್ತಿಯಿಂ ಸೇವಿಪಾ ತನುಜನಿಂದೆ ತ ೬
ತ್ಪಿತನೆಂತು ಪುತ್ರಿಯಾದನೊ ಬಗೆವಡಂತೆ ತ
ತ್ಸುತನುಮಾತ್ಮಜವತ್ಸಲತೆಯಾಂತ ಜನಕನಿಂ ಪಿತೃಮಂತನಾಗೆಸೆದನು॥

ಸುತಯಜ್ವನುಂ ಸುಗುಣನಿಧಿಯುಮಾತಂದೆ ಚಿರ
ಧೃತಮಾದ ವರ್ಣರಕ್ಷಣಧುರಮನಾತ್ಮ ಸಮ
ಚತುರದೇವಾನೀಕನಲ್ಲಿಟ್ಟು ಯಜಮಾನಲೋಕಕ್ಕೆ ತಾಂ ಪೋದನು॥

ಆನೃಪಸ ವಿಜತೇಂದ್ರಿಯಂ ಸುತಂ ನಿಜಮಧುರ ೭
ವಾಣಿಯಿಂ ತನ್ನವರ್ಗಂ ಪರರ್ಗಂ ಪ್ರಿಯಂ
ತಾನಾದನೊರ್ಮೆ ಬೆದರಿದ ಮಿಗಗಳುಂ ನುಡಿಯ ಸವಿಗೆ ವಶಮಪ್ಪವಲ್ತೆ॥
ಹೀನಸಂಗತ್ಯಾಗದಿಂದನರ್ಥವ್ಯಸನ
ಹೀನನಾಗಿರ್ದಾ ಅಹೀನಗುಸುನಾಮಕಮ
ಹೀನಭುಜವಿಕ್ರಮನೊಳಖಿಳಭೂಮಂಡಲವನಾಳತೊಡಗಿದನಳ್ತಿಯಿಂ॥

ಪುರುಷಹೃದಯಜ್ಞನಾದಾ ಅಹೀನಗುನೃಪಂ ೮
ಧರೆಗೈದ ಪರಿಯಂತೆ ಚತುರಾಶೆಗಳ್ಗೆ ತಾ
ನೆರೆಯನಾದಂ ಭಂಗನಡೆಯದಿಹ ಚತುರುಪಾಯದೆ ಪಿತನ ಸಮನಂತರಂ॥
ಪರಲೋಕಯಾತ್ರೆಗಾ ಅರಿಹರಂ ಭೂವರಂ
ತೆರಳೆ ತತ್ತನಯನಂ ನಿಜಮಸ್ತಕೋನ್ನತಿಯಿ
ನುರೆ ಪಾರಿಯಾತ್ರಗಿರಿಯನೆ ಗೆಲ್ವ ಪಾರಿಯಾತ್ರನನೈದೆ ಸಿರಿ ಸೇರ್ದಳು॥

ಗೆಲುತಿರ್ದೊಡಂ ರಿಪುವ ನಿಜಶಿಲೀಮುಖದಿಂದೆ ೯
ಸಲೆ ನುತಿಸೆ ನಾಣ್ಬಡೆವ ಶಿಲೆಗೆಣೆಯ ಪೇರೆದೆಯ
ಶಿಲನೆಂಬ ಮಗನುದಯಿಸಿದನುದಾರಿಯೆನಿಪ್ಪ ಪಾರಿಯಾತ್ರಂಗೆ ಬಳಿಕಂ॥
ವಳಿಪೊರ್ದದಾ ನೃಪಂ ಬುದ್ಧಿಯುತ ತತ್ಸುತನ
ನೊಲಿದು ಯುವರಾಜನಂಗೆಯ್ದು ಸುಖಭೋಗಮಂ
ತಳೆವನರಸರ ವೃತ್ತಿ ಬಂದಿಗಳ ವೃತ್ತಿಯೊಲ್ ಸೌಖ್ಯೋಪರೋಧಿಯಲ್ತೆ॥

ರಾಗವರ್ಧಕಭೋಗದಿಂ ತಣಿಯದಿನ್ನುಮನು ೧೦
ರಾಗದಂಗನೆಯರ್ಗೆ ಸೌಂದರ್ಯದಿಂದೆ ತಾಂ [ದು॥
ಭೋಗಾರ್ಹನಾದಾತನಂ ಭೋಗಿಸದೆ ಬರಿದೆ ಮುಚ್ಚರಿಪ ಜರೆಯೊಯ್ದು
ಆಗಮೂಶಿಲನೃಪಂಗುನ್ನಾಭನೆಂಬ ಸುತ
ನಾಗಿ ನಾಮಕೆ ತಕ್ಕೊಲುನ್ನತಸುನಾಭಿಯುತ
ನಾಗಿ ಪಂಕಜನಾಭನಂ ಪೋಲ್ತು ನೃಪತಿಮಂಡಲನಾಭಿಯೆನಿಸಿ ಮೆರೆದಂ॥

ಬಳಿಕಮುರುವಜ್ರಾಕರಾಭರಣೆಯೂದ ಭೂ ೧೧
ಲಲನೆಗುರೆ ಪತಿಯೆನಿಸಿದಂ ವಜ್ರಿತೇಜಮಂ
ತಳೆದು ಧುರದೊಳ್ ವಜ್ರನಿಭರವವನೆಸಗುವುನ್ನಾಭಜಂ ವಜ್ರಣಾಭಂ॥
ತಳರೆ ಧರ್ಮಾರ್ಜಿತದ ಸಗ್ಗಕಾಭೂಪ ನರಿ
ಕುಲನಾಶನೆನಿಪ ತತ್ಸುತ ಶಂಖಣಾಖ್ಯನಂ
ಜಲಧಿವೇಷ್ಟಿತೆ ಧರಾವನಿತೆ ಸೇವಿಸಿದಳರ್ಪಿಸಿ ಖನಿಜರತ್ನಚಯುವುಂ॥

ಹರಿದಶ್ವತೇಜನಶ್ವಿಸುರೂಪ ತತ್ಸುತಂ ೧೨
ಪೊರೆದನುರೆ ಜನಕನಂತದೊಳವನ ರಾಜ್ಯಮಂ
ಶರಧಿತಟದೊಳಮಶ್ವಬಲವಿರಿಸೆ ವ್ಯುಷಿತಾಶ್ವನೆಂಬ ಪೆಸರಾಯ್ತುವಂಗೆ
ಧರೆಯಾಣ್ಮನಾತನರ್ಚಿಸಿ ವಿಶ್ವನಾಥನಂ
ಹರಿಸದಿಂ ವಿಶ್ವರಕ್ಷಣಶಕ್ತನಂ ನಿಜಾ
ಪರರೂಪನಂ ವಿಶ್ವಸಖನುಮಂ ವಿಶ್ವಸಹನೆಂಬ ಮಗನಂ ಪೆತ್ತನು॥

ತನಯಂ ಹಿರಣ್ಯನಾಭಂ ಹಿರಣ್ಯಾಕ್ಷರಿಪು ೧೩
ವಿನ ಸದಂಶಂ ಜನಿಸೆ ನಯುವಿದಂ ವಿಶ್ವಸಹ
ನನಿಲಯುತವಹ್ನಿ ತರುಗಳ್ಗದೆಂತಂತೆ ಪಗೆಗಳ್ಗತ್ವಸಹ್ಯಸಾವಂ॥
ತನಗೆ ಪಿತೃಗಳ ಋಣಂ ತೀರೆ ಕೃತಿಯಾದ ತ
ಜ್ಜನಕನವಸಾನದಲ್ಲಾಜಾನುಬಾಹುವೆಂ
ದೆನಿಪ ಮಗನಂ ರಾಜನಂಗೆಯ್ದು ನಿತ್ಯಸುಖಕೆಳಸಿ ಸಾರುಪೆಯುಟ್ಟನು॥

ತರಣಿಕುಲಮಣಿಯೆನಿಸಿ ಸೋಮಮುಖಮಂ ಗೆಯ್ದು ೧೪
ನೆರೆ ನೆಗಳ್ತೆಯನಾಂತ ತನ್ನೃಪಂಗುದಯಿಸಿದ [ಸಂ॥
ನೆರಡನೆಯ ಸೋಮನೊಲ್ ನೇತ್ರೋತ್ಸವವನೀವ ಕೌಸಲ್ಯನೆಂಬೌರ
ಇರಿಸಿ ತನ್ನಧಿಕಾರದೊಳ್ ಬ್ರಹ್ಮವಿದನಾಗಿ
ಮೆರೆವಾತ್ಮತನುಜನಂ ಬ್ರಹ್ಮಿಷ್ಠನಂ ಬ್ರಹ್ಮ
ವರಸಭಾಂತಶ್ರಾಂತಕೀರ್ತಿ ತತ್ಕೌಸಲ್ಯನೈದಿದಂಬ್ರಹ್ಮಗತಿಯಂ॥

ಕುಲಭೂಷನಾಗಿ ಸತ್ಸಂತತಿಯ ಪಡೆದೆಡ ೧೫
ರ್ಗಳೆ ಸೋಂಕದಂತೆ ಶಾಸನಚಿಹ್ನಭೂಮಿಯಂ
ಸಲಹೆ ತನ್ನೃಪತಿ ಹರ್ಷಾಶ್ರುಕಲಿತಾಂಬಕರ್ ಪ್ರಜೆಗಳತಿಸುಖವಾಂತಿರೆ॥

ಸಲುಪಿ ಗುರುಸೇವೆಯಂ ಗರುಡಧ್ವಜಾಕೃತಿಯ
ತಳೆದ ಕಮಲಾಂಬಕಂ ಪುತ್ರಾಖ್ಯಪುತ್ರನಾ
ನೆಲದೆರೆಯನಂ ಪುತ್ರವಂತರಲ್ಲಗ್ರಗಣ್ಯನನಾಗಿಸುತೆ ಮೆರೆದನು||

ಕುಲಪಾಲಕಂ ಸುತನ ಶುಭಸುಪ್ರತಿಷ್ಠೆಯಂ ೧೬
ಗಳಿಪನೆಂದರಿದು ಬ್ರಹ್ಮಿಷ್ಠನಿಹದಾಶೆಯಂ
ಕಳೆದಿಂದ್ರಸಖ್ಯವೆಳಸಿ ತ್ರಿಪುಷ್ಕರದಲ್ಲಿ ಮಿಂದು ದೇವತ್ವವಾಂತಂ||
ಸಲೆ ಪುತ್ರನೃಪನರಸಿ ಪುಷ್ಪರಾಗದ ತೆರದೆ
ತೊಳಪ ಪುಷ್ಯಾಖ್ಯನಂ ಪುಷ್ಯಪೂರ್ಣಿಮೆಯಲ್ಲಿ
ನಲವಿಂದೆ ಪೆತ್ತಳಿತ್ತುದು ಜನಕೆ ಪುಷ್ಟಿಯಂ ಪುಷ್ಯನಿಭನವನ ಜನನಂ||

ತನಯಂಗೆ ಮಹಿಯಿತ್ತು ಜನಿಭೀರುವಾದ ತ ೧೭
ಜ್ಜನಪತಿಮಹಾಶಯಂ ಬ್ರಹ್ಮಜ್ಞನಾದ ಜೈ
ಮಿನಿಯನಾಶ್ರಯಿಸಿ ತನ್ಮುನಿಲಬ್ಧಯೋಗದಿ ನಜನ್ಮಪದವಿಯನಾಂತನು||
ಜನಕಪುಷ್ಯಾನಂತರಂ ಧ್ರುವಪ್ರತಿಮ ತ
ತ್ತನುಭವಂ ಧ್ರುವಸಂಧಿ ಯಿಳೆಯಾಣ್ಮನೆನಿಸಿದಂ
ವಿನಮಿತಾರಿಗಳ ಸಂಧಿ ಧ್ರುವಮುದಾಯ್ತು ತಾನಾ ಸತ್ಯಸಂಧನಲ್ಲಿ||

ಪ್ರತಿಪದಿಂದುವ ಪೋಲ್ತವನ ಸುದರ್ಶನನೆಂಬ ೧೮
ಸುತನ ಶೈಶವದೊಳೇ ಪುರುಷಸಿಂಹಂ ಮೃಗಾ
ಯತನಯನನುಂ ತನ್ಮಹೀಶನಳಿದಂ ಸಿಂಹದಿಂ ಬೇಂಟೆಯಾಟದಲ್ಲಿ||
ಮೃತನಾದ ತನ್ನೃಪನ ಮಂತ್ರಿಗಳನಾಥರಾ
ಗುತೆ ದುಃಖಿಸುವ ಪ್ರಜೆಗಳಂ ನೋಡಿ ಸಾಕೇತ
ಪತಿಯನೆಸಗಿದರೊಂದುಗೂಡಿ ವಂಶೈಕತಂತವೆನಿಪ್ಪ ತದ್ಬಾಲನಂ||

ಎಳವೆರೆಯ ತಳೆದಿರ್ದ ನಭದಂತೆ ಹರಿಶಿಶುವ ೧೯
ನೊಳಕೊಂಡ ವನವಂತೆ ಕಮಲಕುಟ್ಮಲಕಲಿತ
ಜಲದಂತೆ ರಘುಕುಲಂ ಬಾಲನಾದಾ ನೃಪತಿಯಿಂ ತಳ್ತು ರಾಜಿಸಿದುದು|
ಇಳೆಯ ಜನರುಜ್ವಲಕಿರೀಟಮಂ ಧರಿಸಿದಾ
ಎಳೆಯನಂ ತಂದೆಯಂ ಪೋಲ್ತಿರ್ಪನೆಂದರುರಿ [ಕಾಣದೇಂ|
ಕಲಭನಿಭನೇಘಮುಂ ಮುಂಗಾಳಿಯಾಂತು ದಿಶೆಗಳ ಮುಸುಕುವೊಲ್

ಚಾರುವೇಷವ ಧರಿಸಿ ಗಜವೇರ್ದ್ದ ತನ್ನನಾ ೨೦
ಧೋರಣಂ ಪಿಡಿದಿರೆ ನೃಪಾಧ್ವದಲ್ಲೈದಿದಾ
ಆರುವರ್ಷದ ರಾಜನನೆ ಜನಕಗೌರವದೆ ಪೌರರೀಕ್ಷಿಸುತಿರ್ದರು॥
ರಾರಾಜಿಸುವ ಪಿತೃಸುಸಿಂಹಾಸನದ ತುಂಬ
ಮಾರಘುಸುತಂ ಕುಳಿತುಕೊಳ್ಳದಿರ್ದೊಡವನವನ
ಭೂರಿತೇಜಂ ಹೇಮಕಾಂತಿಯೊಳ್ ಪೆರ್ಚಿ ತತ್ಪೀಠಮಂ ವ್ಯಾಪಿಸಿದುದು॥

ಹರಿಪೀಠದಿಂ ಕೆಳಗೆ ನಸು ಜಾರ್ದ್ದ ಕನಕಮಯ ೨೧
ಚರಣಪೀಠವ ಸೋಂಕದಿರ್ದ ಲಾಕ್ಷಾರಸ
ಸ್ಫುರಿತತದ್ಬಾಲನೃಪಪಾದಯುಗಕೆರಗಿದರ್ ದೊರೆಗಳುನ್ನತಮೌಳಿಯಿಂ
ಕಿರಿದಾದೊಡಂ ಪಿರಿದೆನಿಪ್ಪ ತೇಜವನಾಂತ
ವರನೀಲದೊಳ್ ಮಹಾಮಣಿಯೆಂಬ ನಾಮಮೊ [ದು॥
ಪ್ಪಿರುವೊಲಾ ಶಿಶುವೊಳಂ ಮಹಿತಂ ಮಹಾರಾಜಶಬ್ದಮುರೆ ಶೋಭಿಸಿದು

ಎರಡುಕಡೆಯೊಳ್ ಚಾಮರವ ಬೀಸೆ ಚಲಿಪ ಭಾ ೨೨
ಸುರಕಾಕಪಕ್ಷದಿಂ ತಳ್ತ ಕದಪುಗಳಿಂದೆ [ಳಂ॥
ಮೆರೆವ ಮುಖದಿಂದಾತನೊರೆದ ಶಬ್ದಂ ಸ್ಖಲಿತಮಾಗದಂಬುಧಿತಟದೊ
ಧರಿಸಿರ್ದ ಹೇಮಮುಕುಟದೆ ಶೋಭಿಸುವ ಪಣೆಯೊ
ಳುರೆ ತಿಲಕವಾಂತ ನಗೆಮೊಗದ ತದ್ಭೂಮಿಾಶ
ನರಿಸುಂದರಿಯರ ವದನಂಗಳಂ ತಿಲಕಶೂನ್ಯಂಗಳಂ ಮಾಡಿದಂತಾಂ॥

ಸಿರಸದಲರಿಂದಧಿಕಮೃದುವಾದ ತನುವಾಂತು ೨೩
ಧರಿಪೊಡೆವೆಯಿಂಪಮುಂ ಖೇದಮುಂ ಪೊಂದುವಾ
ಅರಸು ಗುರುತರಮೆನಿಪ ಭೂಭಾರಮಂ ಪೊತ್ತನಾತ್ಮಾನುಭಾವದಿಂದಂ॥
ಬರೆದು ಕೊಟ್ಟೈಖಿಳಾಕ್ಷರಂಗಳಂ ತನ್ಮಹೀ|
ವರನೈದೆ ಕಲಿವನಿತರೊಳೆ ದಂಡನೀತಿಯಿಂ
ದೊರೆದಮಿತಫಲವನನುಭವಿಸಿದಂ ತಾಂ ಜ್ಞಾನವೃದ್ಧಜನಸಂಗದಿಂದಂ॥

ಬಗೆಯೆ ತನ್ನೃಪನೆದೆಯೊಳಿರಲಿನ್ನುಮವಕಾಶ ೨೪
ಮೊಗೆಯದಿರೆ ಪ್ರೌಢನಪ್ಪುದನೆ ತಾಂ ನೋಳ್ಪ ರಮೆ
ಮಿಗೆ ನಾಣ್ಚಿ ಸಾಕ್ಷಾದಾಲಿಂಗನಕೆ ಕೊಡೆನೆಳಲನೆವದಿನಪ್ಪಿದಳಾತನಂ॥

ಯುಗಸಮಾನತೆಯ ತಳೆಯದೆ ಗುಣಕಿಣಾಂಕದಿಂ
ಸೊಗಯಿಸದೆ ಮೇಣ್ ಖಡ್ಗಮುಷ್ಟಿಯಂ ಸೋಂಕದೀ
ಬಗೆಯೊಳಿರ್ಪಾ ಬಾಲರಾಜಭುಜದಿಂದಮೇ ಧರೆ ಸುರಕ್ಷಿತಮೆನಿಸಿತು॥

ಗತಿಸೆ ಕಾಲಮುದಂಗದವಯವಂಗಳೆ ಅಲ್ಲ ೨೫
ದತಿಸೂಕ್ಷ್ಮದಿಂದಿರ್ದ ಜನಮನಃಪ್ರಿಯಮಪ್ಪ [ನಾ॥
ನುತವಂಶಸುಗುಣಂಗಳುಂ ವೃದ್ಧಿಯಂ ಪೊಂದಿದವು ಸುದರ್ಶನಭೂಪ
ಕ್ಷಿತಿಪನವನ್ಯದೆ ನೆನೆವನೊ ಪೂರ್ವಭವಶಾಸ್ತ್ರ
ತತಿಯನೆನೆ ಗುರುಗಳಂ ದಣಿಸದೆ ತ್ರಿವರ್ಗದು
ನ್ನತಿಗೆ ಸಾಧನದ ವಿದ್ಯಾತ್ರಯವ ಕಲಿತು ಕೈವಶದೊಳಿಟ್ಟಂ ಪ್ರಜೆಗಳಂ॥

ನೆಲದೆರೆಯ ನಸ್ತ್ರವಿದ್ಯೆಯ ಕಲಿವ ಸಮಯದೊಳ್ ೨೬
ನಲವಿಂದೆ ಪೂರ್ವತನುವಂ ವಿಸ್ತರಿಸುತಣಂ
ತಲೆಗುರುಳ್ಗಳನೆತ್ತಿ ಕಟ್ಟುತೆಡದೊಡೆಯನಾಕುಂಚಿಸುತೆ ರಂಜಿಸಿದನು॥
ಬಳಿಕಮಬಲಾನೇತ್ರಪೇಯಮಧುವಂ ರಾಗ
ಲಲಿತಪಲ್ಲವಕಲಿತಮದನತರುಪುಷ್ಪವಂ
ಸಲೆ ಸಹಜಭೂಷಣವ ನಾದ್ಯವಿಲಸಿತಪದವ ಯೌವನವನಾಂತನಾತಂ॥

ದೂತಿಯರ್ ತೋರಿಸಿದ ಚಿತ್ರಪಟಗತಮಪ್ಪ ೨೭
ಸಾತಿಶಯರೂಪದಿಂದಧಿಕಸೌಂದರ್ಯದಿಂ
ಖ್ಯಾತರಾದವನಿಪಾತ್ಮಜೆಯರಂ ಶುದ್ಧಸಂತಾನಕಾಮರ್ ಸಚಿವರು॥
ಪ್ರೀತಿಯಿಂ ತರೆ ತನ್ನರೇಂದ್ರಕನ್ಯಾಮಣಿಗ
ಳಾತರುಣಜನಪನಂ ಮೊದಲೆ ಕೈವಿಡಿದು ಸಂ [ವಿಂ॥
ಜಾತಮುದರಾಗಿರ್ದ ಭೂರಮೆಯರಂ ಸವತಿಯರನೆಸಗಿಕೊಂಡರೊಲ

# ಏಕೋನವಿಂಶಸರ್ಗಂ

---

ಸೂ:— ಕಾಮವಶನಾದಗ್ನಿವರ್ಣನನಿಶಂ ಗೆಯ್ದು
ಕಾಮಿನೀಭೋಗದಿಂ ಕ್ಷಯರೋಗಿಯಾಗಿ ಸು
ತ್ರಾಮಲೋಕಕೆ ಪೋಗೆ ಗರ್ಭವತಿಯಾದ ತತ್ಸತ್ನಿ ರಾಜ್ಯವನಾಳ್ವಳು॥

ಅರಿದವರೊಳಾದ್ಯಂ ಸುದರ್ಶನಂ ವಹ್ನಿಯೊಳ್ ೧
ಮೆರೆವಗ್ನಿವರ್ಣನೆಂಬಾತ್ಮಜಂಗಾತ್ಮವಿ [ಸ್ತೇರ್ದು॥
ಷ್ಟರದೊಳಭಿಷೇಕಮಂ ಗೆಯ್ದು ಮುಪ್ಪಿನೊಳಾಶೆದೊರೆದು ನೈಮಿಷವ
ವರತೀರ್ಥಜಲದೆ ದೀರ್ಘಿಕೆಯ ಮೇಣ್ ನೆಲದಲ್ಲಿ
ಪರೆಪಿದ ಕುಶಂಗಳಿಂ ತಲ್ಪಮಂ ಪರ್ಣಮಂ
ದಿರದೆ ಸೌಧಾವಾಸಮಂ ಮರೆದು ತಪವನೆಸಗಿದನಲ್ಲಿ ನಿಷ್ಕಾಮದಿಂ॥

ಪಡೆದಿರ್ಪ ರಾಜ್ಯವಾಳ್ವದರೊಳೆನಿತುಂ ಶ್ರಮವ ೨
ಪಡೆದುದಿಲ್ಲಗ್ನಿವರ್ಣಂ ಪಿತನೆ ಪಗೆವೆಸರ
ನಡಗಿಸುತೆ ತನಗಾವ ತೊಡಕಿಲ್ಲದವನಿಯಂ ಭೋಗಿಸಲ್ಕಿತ್ತ ಕತದಿಂ॥
ಜಡಜಾಸ್ತ್ರವಶನಾ ನೃಪಂ ಕುಲೋಚಿತಮೆನಿ
ಪ್ಪೊಡೆತನವ ಕೆಲವತ್ಸರಂ ಪೊಂದಿ ತಾನದಂ
ಬಿಡದಿತ್ತು ಸಚಿವರ್ಗೆ ಬಳಿಕಬಲೆಯರ್ಗೆ ನಿಜನವಯೌವನವನಿತ್ತನು॥

ಬಿಸಜಾಕ್ಷಿಸಹಚರಂಗಾಕಾಮುಕಂಗೆ ಸಮ ೩
ನಿಸಿದುತ್ಸವದ ಪರಂಪರೆಯುಖಿಳಸಾಧನದೊ [ಳಲ್ಲಿ॥
ಳೆಸೆಯುತಮದುತ್ತರೋತ್ತರಮಧಿಕಮಾಯ್ತು ಮುರಜಧ್ವನಿಯು ಮನೆಗ
ವಿಷಯಸುಖರಹಿತಮಾದೇಕಕ್ಷಣವ ಸಹಿಸ
ಲಸಮರ್ಥನಾಗಿ ಪಗಲಿರುಳುಮಂತಃಪುರದೊ
ಳೊಸೆದು ವಿಹರಿಸಿದನಾತಂ ದರ್ಶನಕ್ಕೆಳಸ ಪ್ರಜೆಗಳಂ ಸ್ಮರಿಸದಂತೆ॥

ಸಲೆ ಮಂತ್ರಿವಚನಾನುರೋಧದಿಂ ನೃಪನೊರ್ಮೆ ೪
ಸಲಿಪ ಪ್ರಜಾಕಾಂಕ್ಷಿತಮದಾತ್ಮದರ್ಶನಂ
ತಿಳಿವಡೆ ಗವಾಕ್ಷವಿವರದೊಳೆ ತೋರಿಸುವ ಕೇವಲಚರಣಮಾಗಿರ್ದುದು॥

ಎಳವಿಸಿಲನೊಳಕೊಂಡ ತಾವರೆಯ ಪೋಲ್ತು ಕೋ
ಮಳನಖಾರುಣಕಾಂತಿಕಲಿತವಾದಾ ಪಾದ
ತಳಮನೇ ಸೇವಿಸುತ್ತಿರ್ದರನುಜೀವಿಗಳ್ ಕೃತನಮಸ್ಕಾರರಾಗಿ॥

ಲಲನೆಯರ ಯೌವನೋನ್ನತಕುಚಾಘಾತದಿಂ ೫
ಚಲಿಪಂಬುಜಂಗಳಿಂ ಮತ್ತಮೊಳಗಿರ್ಪ ರತಿ
ನಿಲಯಂಗಳಿಂ ತಳ್ತ ದೀರ್ಘಿಕೆಗಳಲ್ಲಿ ವಿಹರಿಸಿದನಾ ಪೌರ್ರಢಮದನಂ॥
ಜಲಸೇಚನದೆ ಕಣ್ಣ ಕಜ್ಜಲಂ ಕರಗೆ ತುಟಿ
ಗಳ ಬಣ್ಣಮದು ತೊಳೆದೊಲಾಗೆ ನೈಜಪ್ರಭೆಯ
ನೊಳಕೊಂಡ ವನಿತಾನನಂಗಳತಿಮೋಹವೊದಗಿಸಿದವಾ ನೃಪತಿಗಲ್ಲಿ॥

ಘ್ರಾಣತರ್ಪಣವ ಮಧುಗಂಧದಿಂ ಬಗೆಗೊಳ್ವ ೬
ಪಾನಭೂಮಿಗಳಿಗೈತಂದನಬಲಾಸಖಂ
ಕ್ಷೋಣಿಪಂ ಕರಿಣೀಯುತಂ ದ್ವಿಪಂ ಪುಷ್ಪಿತಾಬ್ಜಿನಿಗಳೆಡೆಗೈದತೆರದೆ॥
ಮಾನಿನಿಯರೇಕಾಂತದಲ್ಲಿ ಮಿಗೆ ಮದವೀವ
ಮಾನವೇಂದ್ರಾನನಾಸವವನೀಂಟಿದರರಸು
ತಾನುಮವರಾಸ್ಯಮದ್ಯವ ಪೀರ್ದನೊಲವಿಂದೆ ಬಕುಲನಿಭಕಾಂಕ್ಷಿಯಾಗಿ॥

ತೊಡೆಯೆಡೆಯ ಬಿನದಕರುಹಂಗಳೆನಿಪೆರಡೆ ನೆಲ ೭
ದೊಡೆಯನಾತನ ತೊಡೆಗಳಂ ನಿಮಿಷಮಾದೊಡಂ
ಬಿಡವು ಹೃದಯಂಗಮಧ್ವನಿವೀಣೆಯುಂ ಮಧುರವಚನದಬಲಾರತ್ನಮುಂ॥
ನಡುಗೆ ಕಂಕಣಮಾಲೆಗಳ್ ನೃಪಂ ವಾದ್ಯಮಂ
ಕಡುಜಾಣ್ಮೆಯಿಂ ಬಾಜಿಸುತೆ ನರ್ತಕಿಯರ ಬಗೆ
ವಿಡಿದೆಳೆಯೆ ನಾಣ್ಗೊಂಡರವರಭಿನಯವ ತಪ್ಪಿ ನಾಟ್ಯಬೋಧಕರಿದಿರೊಳೇ॥

ಅವನಿಪಂ ನೃತ್ಯಾಂತದೊಳ್ ಶ್ರಮದಿನೊಗೆದಿರ್ದ ೮
ಬೆವರಂ ಜಗುಳ್ದ ತಿಲಕದ ನರ್ತಕೀಸ್ಯವದ [ನು॥
ನವನಳ್ತಿಯಿಂ ಬಾಯೊಳೂದಿ ಚುಂಬಿಸುತೆ ಧನದೇಂದ್ರಭೋಗವ ಮೀರ್ದ
ನವನವೇಂದ್ರಿಯಸುಖಕ್ಕೆಳಸಿ ಬೇರೆಡೆಗೆ ಪೋ
ಗುವ ತನ್ಮಹೀಶನ ಸ್ವಪರಸಾಧನಸಮು
ಚ್ಛವಸಂಗಮಂ ಪ್ರೇಯಸಿಯರರ್ಧಭುಕ್ತವಿಷಯಮನಾಗಿಸುತ್ತಿರ್ದರು॥

ಪ್ರಣಯಿನಿಯರಂ ವಂಚಿಪಗ್ನಿವರ್ಣಾವನಿಪ ೯
ನೆನಿತೊ ವೇಳೆಯೊಳವರ ಪಲ್ಲವಾಂಗುಲಿಯ ತ [ತಿರ್ದಂ॥
ರ್ಜನವ ಮೇಣ್ ಭ್ರುಕುಟಿಯುತವೀಕ್ಷಣವ ಮೇಖಲಾಬಂಧನವ ಪೊಂದು
ಜನಪತಿಯವಂ ಸುರತರಾತ್ರಿಗಳೊಳೈತಂದು
ಬಿನದದಿಂ ದೂತಿಯರ್ ತಿಳಿವಂತೆ ಪ್ರೇಯಸೀ
ಜನದ ಪಿಂತಿರ್ದವರ್ ವಿರಹಶಂಕಿನಿಯರಾಗೊರೆವ ನುಡಿಗಳನಾಲಿಪಂ॥

ಅರಸಿಯರ ಸಂಗದಲ್ಲಿರ್ದು ದುರ್ಲಭವಾರ ೧೦
ತರುಣಿಯರ ನೆನೆದುತ್ಸುಕತೆಯೊಳವರಾಕೃತಿಯ
ಬೆರಳ ಬೆಮರಿಂ ಜಾರ್ವ ಕಡ್ಡಿಯಿಂ ಬರೆಯುತೆಂತೋ ನೃಪಂ ವೇಳೆಗಳೆವಂ॥
ಅರಸು ಮೆಚ್ಚುರೆ ಬಿಂಕವಾಂತಬಲೆಯರ್ಗೆ ಮ
ಚ್ಚರಿಸಿಯುಂ ಪೆರ್ಚಿದಂಗಜನಿಂದಮುಂ ಮುಳಿಸ
ತೊರೆದುತ್ಸವದ ನೆವದೊಳಾತನಂ ಕರೆದು ದೇವಿಯರಾಂತರಿಷ್ಟಫಲವಂ॥

ಇನನುದಯದಲ್ಲೈದ ತನ್ನ ರತಿಚಿಹ್ನದ ೧೧
ರ್ಶನದೆ ಮುಳಿದರಸಿಯರ ತಿಳಿಪಲ್ಕೆ ಕೈಮುಗಿದು [ಸಂ॥
ಮನಿತರೊಳೆ ಗಣಿಕೆಯರ ಮೋಹದಿಂದಲಸನಾಗುತೆ ಮತ್ತಮಳಲ್ವನರ
ಕನಸಿನೊಳ್ ಸವತಿಯರ ಪೆಸರನುಚ್ಚರಿಪ ತ
ಜ್ಜನಪನಂ ನುಡಿಸದೆ ತಿರಸ್ಕರಿಪರಬಲೆಯರ್ [ಮೊಗದಿರುವುತಂ॥
ಮುನಿಸಿಂದೆ ಪರಿಯೆ ವಲಯಂ ಸುರಿಯೆ ಬಾಷ್ಪಮದು ತಲ್ಪದೊಳ್

ಮನುಜನಾಥಂ ದೂತಿಯರ್ ಪೇಳ್ದ ಪಥದೆ ನೂ ೧೨
ತನಪುಷ್ಪತಲ್ಪದ ಲತಾಗೃಹಂಗಳ ಸೇರ್ದು
ಜನಿಸೆ ಮಿಗೆ ಕಂಪಮುವರೋಧಭಯದಿಂದಲ್ಲಿ ದಾಸಿಯರ ಸಂಗವಾಂತಂ
ಮನದನ್ನೆಯರ ನಾಮದಿಂದೆನ್ನ ಕರೆವೆ ನೀ
ನೆನಗವರ ಭಾಗ್ಯಮುಂ ಬರ್ಕೆ ಕೋರುವುದೆನ್ನ
ಮನಮದನೆ ಎಂದೊರೆದರಬಲೆಯರ್ ಪರರ ಪೆಸರಿತ್ತಿ ಕರೆವಾ ನೃಪಂಗೆ॥

ಪರಿದ ಪೂಸರವ ಸಂಭಿನ್ನಮೇಖಲವ ಮೇಣ್ ೧೩
ಚರಣಲಾಕ್ಷಾರಸವ ಚೂರ್ಣವರ್ಣವನಾಂತ
ವರತಲ್ಪದಿಂದೆಳ್ದ ನೃಪನ ರತಿಕೇಳಿಗಳ ಸೂಚಿಸಿತುದಾ ಶಯನಮೇ॥

ತರುಣಿಯರ ಪದತಲವ ತಾನೆ ಲಕ್ಕದೊಳಲಂ
ಕರಿಸೆ ಸರಿಯೊದುದಿಲ್ಲದು ಜಾರೆ ಸೀರೆ ಭಾ
ಸುರರಶನೆಯಿಂದೊಪ್ಪುವವರ ಜಘನಂಗಳಾತನ ದಿಟ್ಟಿಯೆಳೆದಕತದಿಂ॥

ಕೊಡದೆ ಚುಂಬನಕೆ ಕೆಂದುಟಿಯ ಮೇಣ್ ನೂಂಕುತ್ತ ೧೪
ಮುಡೆಗಂಟ ಬಿರ್ಚ ತೊಡಗಿದ ಕೈಯನೀ ಬಗೆಯ
ತಡೆಯೊದೊಡಂ ಸ್ತ್ರೀರತಮದು ನೃಪನಂಗಜೇಂಧನಮಾದುದೆಲ್ಲಿ ಡೆಯೊಳು
ನಡೆದ ಭೋಗದ ಕುರುಪುಗಳ ಮುಕುರದೊಳ್ ನೋಳ್ಪ
ಜಲಜಾಕ್ಷಿಯರ ಪಿಂದೆ ನಿಂದು ತನ್ನಯ ನಗೆಯು
ಪದಿನೆಳಲಿಸಿಂದವರ್ ನಾಣ್ಚಿ ತಲೆಬಾಗಿಸುವೊಲೆಸಗಿದಂ ತನ್ಮಹೀಶಂ॥

ಇರುಳಂತದೊಳ್ ಶಯನದಿಂದೆಳ್ದ ಭೂವರನ ೧೫
ಕೊರಳ ನಳಿತೋಳ್ಗಳಿಂದಪ್ಪುತಂ ದಯಿತೆಯರ್
ಚರಣಾಗ್ರದಿಂ ನಿಂದು ಗಮನಕಾಲದ ಚುಂಬನವ ಯಾಚಿಸಿದರಾತನಂ॥
ಪರಿಭೋಗಚಿಹ್ನಮಂಡನವ ಕಂಡತಿಮುದವ
ಧರಿಪಂತೆ ತರುಣನಾಪಾ ಅರಸು ಮುಕುರದೊಳ್
ಮೆರವ ಸುರನಾಥಶೋಭೆಯ ಪಳಿವ ತನ್ನ ನೃಪವೇಷದಿಂ ನಲಿದುದಿಲ್ಲಂ॥

ಕೆಳೆಯರುಜ್ಜುಗದ ನೆವದಿಂದೆ ನಿಲದಂತನ್ಯ ೧೬
ಲಲನೆಯರ ಬಳಿಗೆ ಪೋಪಾತನಂ ಕಾಂತೆಯರ್
ತಿಳಿದತ್ತು ಶಠ! ನಿನ್ನ ಗಮನಚ್ಛಲಮದೆಂದು ಕಚವಿಡಿದು ನಿಲಿಸುಗುಂತಾಂ
ಜಲಜನೇತ್ರೆಯರವನ ನಿರ್ದಯರತಿಶ್ರಮದಿ
ನಲಸತೆಯನಾಂತು ಪರಿರಂಭಣವ್ಯಾಜದಿಂ
ಮಲಗಿವರ್ ಪೀವರಸ್ತನಲುಪ್ತಚಂದನದ ತದ್ವಕ್ಷವಲ್ಲಿ ನಲವಿಂ॥

ಇರುಳೊಳೋರ್ವಳ ಭೋಗಕರಸು ಗುಪ್ತದೆ ಪೋಪು ೧೭
ದರಿದು ದೂತಿಯರಿಂದೆ ತರುಣಿಯರ್ ತತ್ಪಥವ [ರವನಂ॥
ನುರೆ ತಡೆದು ಕಾಮುಕನೆ! ಮರ್ಬಿನೊಳ್ ಮೋಸವೇಕೆಂದು ಕರೆದೊಯ್ವು
ಪೆರೆಯ ಕಿರಣಂಗಳಿಂದೆಂತಂತೆ ಪೆಣ್ಗಳಿಂ
ದೊರೆವ ಸಂಸ್ಪರ್ಶಸುಖಮಂ ಪೊಂದಿ ನಿಶೆಯೊಳೆ [ತಂ॥
ಚ್ಚರವಾಂತು ಪಗಲಲ್ಲಿ ಪವಡಿಸುತೆ ಕುಮುದಾಕರೋಪಮನವ ಪಡೆದನಾ

ಸುಲಿಪಲ್ಲ ಗಾಯದಧರದೊಳಿಟ್ಟ ವೇಣು ವುಗು ೧೮
ಗ್ಗಳ ಗಾಯದಂಕದಲ್ಲಿಟ್ಟ ವೀಣೆಯುಮೊದಗಿ
ಪಳಲಾಂತ ಗಾಯಕಿಯರಾ ವಕ್ರದೃಷ್ಟಿಗಳೊಳಂ ಲೋಭವಾಂತನರಸಂ॥
ಕಲಿಸಿ ರಹದಲ್ಲಂಗಸತ್ವವಚನಾಶ್ರಯದ
ಲಲಿತಾಭಿನಯುವ ಪೆಣ್ಗಳ್ಗವರ ಜಾಣ್ಮೆಯಂ [ಪಂ॥
ಕೆಳೆಯರಿದಿರೊಳ್ ಪ್ರಕಟಿಸುತೆ ನಾಟ್ಯನಿಪುಣರನೆ ಗೆಲಲೆಳಸಿವಂ ತನ್ನ

ನಳಿತೋಳ್ಗಳಲ್ಲಿ ಕುಣಿದಾಡೆ ಕುಟಜಾರ್ಜುನಂ ೧೯
ಗಳ ಮಾಲೆಗಳ್ ನೀಪರಜಮಂಗದೊಳ್ ತೊಳಗೆ [ಳು॥
ಮಳೆಗಾಲದೊಳ್ ವಿಹರಿಸಿದನರಸು ಮತ್ತಬರ್ಹಿಗಳ ಕ್ರೀಡಾದ್ರಿಗಳೊ
ಮುಳಿಸಿಂ ಪರಾಙ್ಮುಖಿಯರಾಗಿ ತಲ್ಪದೊಳಿರ್ದ
ಲಲನೆಯರ್ ಘನನಿನದಕಂಜಿ ಮರಳ್ದೆನ್ನುರ
ಸ್ಥಲವ ತಾವೇ ಸೇರಲೆಂದವರ ಸಂತೈಸುವಾತುರವ ತೊರೆದನವನು॥

ಧರಣಿಪಂ ಸವಿತಾನಸೌಧಂಗಳಲ್ಲಿ ಸುಂ ೨೦
ದರಿಯರಿಂ ತಳ್ತು ಸುರತಶ್ರಮವ ಕಳೆವ ಘನ
ವಿರಹಿತೋಲ್ಲಸಿತಚಂದ್ರಿಕೆಯನನುಭವಿಸಿದಂ ತಾಂ ಶರನ್ನಿಶೆಗಳಲ್ಲಿ॥
ವರಹಂಸಮೇಖಲದ ಸೈಕತನಿತಂಬದಿಂ
ಸರಯು ತಾಂ ತನ್ನ ಕಾಂತಾವಿಲಾಸಮನೆ ಅನು
ಕರಿಸೆ ತದ್ಭೂವರಂ ಹರ್ಮ್ಯವಾತಾಯನಂಗಳಿನದಂ ನೋಡುತಿರ್ದಂ॥

ಅಸಿಯ ರಗರುಸುಧೂಪಪರಿಮಳದೆ ಹೇಮಮಯ ೨೧
ರಶನೆಯಿಂ ತಳ್ತ ಮರ್ಮರರವದ ಹೇಮಂತ
ವಸನಂಗಳುಟ್ಟು ನೀವೀಬಂಧಮೋಚನಾಸಕ್ತನೃಪನಂ ಸೆಳೆದರು॥
ವಸುಧೇಂದ್ರನವನಖಿಳಸುರತಕ್ರಿಯೆಗೆ ತಕ್ಕ
ಶಿಶಿರನಿಶೆಗಳೆ ವಾತರಹಿತಗರ್ಭಾಗಾರ
ವಿಸರದೊಳ್ ತತ್ಕೃತಿಯ ನಚಲದೀಪಾಕ್ಷಿಯಿಂ ಕಂಡ ಸಾಕ್ಷಿಗಳಾದವು॥

ಮಲಯಮಾರುತಜನಿತಮಾದ ಪಲ್ಲವಕಲಿತ ೨೨
ಲಲಿತಚೂತಪ್ರಸೂನವ ಕಂಡು ಲಲನೆಯರ್
ಮುಳಿಸ ನುಳಿದುರೆ ಸ್ನೇಹಪಾಂತರವನಿಪನಲ್ಲಿ ತದ್ವಿರಹಮಂ ಸಹಿಸದೆ।

ನೆಲದೆರೆಯನಾದಯಿತೆಯುರನಂಕವಲ್ಲಾಂತು
ಸಲೆ ಚರರ್ ತೂಗಿದುಯ್ಯಲೆಯುಲ್ಲಿ ರಜ್ಜುಗಳ [ವರು॥
ಸುಳಿದಾಡುತಿರೆ ತೋಳ್ಗಳಿಂದಪ್ಪಿದರ್ ಭಯದೊಳಾ ದೊರೆಯ ಕೊರಳನ

ಮೊಲೆಗಳೊಳ್ ಚಂದನವ ಪೂಸಿ ಮುಕ್ತಾಮಾಲೆ ೨೩
ಗಳ ಧರಿಸಿ ರತ್ನಕಾಂಚಿಗಳ ಜಘನಂಗಳೊಳ್
ತಳೆದಿಂತು ಗ್ರೀಷ್ಮವೇಷವನಾಂತ ಲಲನೆಯರ್ ನೃಪನ ಸೇವಿಸಿದರೊಲವಿಂ॥
ಬಳಿಕಂ ರಸಾಲಪಲ್ಲವಯುತವ ರಕ್ತಪಾ
ಟಲಕುಸುಮಸಂಗತವ ಮಧುವನೀಂಟದ ನೃಪನ
ಜಲಜಬಾಣಂ ವಸಂತಾಪಗಮದಿಂ ಕ್ಷೀಣನಾದೊಡಂ ಸಬಲನಾದಂ॥

ಧರಣೇಶಸಂಗಜಪ್ರೇರಣದೊಳೀತೆರದೆ ೨೪
ತೊರೆದನ್ಯಕೃತಿಯನಿಂದ್ರಿಯಸುಖವ ನುಣುತೆ ತಾಂ [ತಂ॥
ಧರಿಸಿರ್ದ ಕುಟಜಮಾಲ್ಯಾದಿಚಿಹ್ನದೊಳರಿಪಿದಾ ಋತುಗಳಂ ಕಳೆಯು
ನೆರೆ ಮತ್ತನಾಗಿಯುಂ ತಾಂ ಸ್ವಪ್ರಭಾವದಿಂ
ಪರರಾಜರಿಂ ತಿರಸ್ಕೃತಿವಡೆಯದಿರ್ದೊಡಂ
ಸೊರಗಿದಂ ವಕ್ಷಸಾಪವನಾಂತ ಶಶಿಯೊಲಾತಂ ಭೋಗಭವರೋಗದಿಂ॥

ಭಾವಿಸಂ ವೈದ್ಯರೊರೆದುದ ದೋಷಯುತಮೆನಿ ೨೫
ಪ್ಪಾ ವಧೂಮದ್ಯಾದಿಕಾಂಕ್ಷೆಯಂ ತ್ಯಜಿಸನಾ
ಭೂವರಂ ಪ್ರಿಯವಿಷಯಸಂಗದಿಂದಿಂದ್ರಿಯವ ಸೆಳೆವುದತಿಕಷ್ಟಮಲ್ತೆ॥
ತೀವೆ ಮೊಗದೊಳ್ ಬೆಳ್ಪು ದನಿ ಹೀನಮಾಗೆ ಮೇಣ್
ಸಾವಲಂಬನಮಾಗೆ ಗತಿ ಯೊಡವೆ ಮಿತಮಾಗೆ
ಭಾವಜಾವಸ್ಥೆಗೆಣೆಯಾಯ್ತವಂಗುಂಟಾದ ರಾಜಯಕ್ಷ್ಮಾವಸ್ಥೆಯು॥

ಕೆಸರುಳಿವ ಬೇಸಗೆಯ ಮಡುವೊಲಂತ್ಯದ ಕಳೆಯೊ ೨೬
ಳೆಸೆವ ಸಸಿಯಿಂ ತಳ್ತ ನಭದೊಲಲ್ಪಪ್ರಭಾ
ವಶಿಯು ಪ್ರದೀಪಪಾತ್ರದೊಲಾ ಕ್ಷಯಾನ್ವಿತನನಾಂತ ರಘುಕುಲವಿರ್ಪಿನಂ॥
ವ್ಯಸನಶಂಕಿಗಳಾದ ಪ್ರಜೆಗಳ್ಗೆ ಸಚಿವರಾ
ವಸುಧೇಂದ್ರ ನಾತ್ಮಜಪ್ರಾಪ್ತಿಗುರೆ ನೋಂಪಿಗಳ [ರು॥
ನೆಸಗುವಂ ಪ್ರತಿದಿನಂ ವಲಮೆಂದು ಪೇಳುತಂ ತದ್ರುಜೆಯ ಮುಚ್ಚಿರ್ದ

ಜನನಾಥನಖಿಳಕಾಂತಾಸಹಿತನಾದೊಡಂ ೬೭
ಏನುತಸಂತತಿಯು ನೋಡದೆಯೆ ವೈದ್ಯಾಸಾಧ್ಯ
ಮೆನಿಪ ನಿಜರೋಗಮುಂ ಗೆಲದೆ ಮಡಿದಂ ವಾಯುವಂ ಗೆಲದ ದೀಪದಂತೆ॥
ಜನರರಿಯದಂತೆ ತನ್ಮಂತ್ರಿಗಳ್ ರಾಜೋಪ
ವನದೊಳೇ ರೋಗಶಾಂತಿಕ್ರಿಯಾವ್ಯಾಜದಿಂ
ದನಲನಲ್ಲಿಟ್ಟರಾ ನೃಪನನಂತ್ಯೇಷ್ಟಿವಿಧಿವಿದಪುರೋಹಿತರ ಕೂಡಿ॥

ಪುರಜನಪ್ರಮುಖರಿಂ ಕೂಡಿ ಸಚಿವರ್ ತಮ್ಮ ೬೮
ದೊರೆಯರಸಿಯಾಂತಿರ್ದ ಶುಭಗರ್ಭಚಿಹ್ನಮಂ
ನೆರೆ ಪರೀಕ್ಷಿಸಿ ಜವದೊಳಾ ರಾಣಿಕೈಗೆ ರಾಜ್ಯದ ರಮೆಯನೊಪ್ಪಿಸಿದರ್॥
ನರಪಮೃತಿಶೋಕದಿಂದೊಗೆದುಷ್ಣಬಾಷ್ಪದಿಂ
ದುರೆ ತಪ್ತಮಾದವಳ ಗರ್ಭಮದು ಪೊಂಗೊಡದೆ
ಸುರಿದ ತಜ್ಜ್ಯಾಂತ ವಂಶಾಭಿಷೇಕೋದಕದೆ ಶೀತಲತ್ವವನಾಂತುದು॥

ವಸುಧೆ ತನ್ನಯ ಕುಕ್ಷಿಯೊಳ್ ನಭೋಮಾಸದ ೬೯
ಲ್ಲೊಸೆದು ಬಿತ್ತಿದ ಬೀಜಮುಷ್ಟಿಯುಂ ತಳೆದವೊಲ್
ಪ್ರಸವಸಮಯವ ಕಾಂಕ್ಷಿಪ ಪ್ರಜಾವಳಿಯ ಸಂಪದವನಭಿವೃದ್ಧಿಗೆಯ್ಯ॥
ಅಸಮಗರ್ಭವನಾಂತು ಹೇಮಸಿಂಹಾಸನದೊ
ಳೆಸೆವ ತದ್ರಾಜ್ಞಿ ಸತ್ಕ್ರಮದೆ ತಡೆಯಿಲ್ಲದಿಷ
ಬೆಸನದಿಂ ದಾಪ್ತವೃದ್ಧಾಮಾತ್ಯರೊಡನೆ ಪತಿರಾಜ್ಯಮಾಳುತ್ತಿರ್ದಳ್॥

ಸಂಪೂರ್ಣಂ.



ಒಂದೊಂದು ಶ್ಲೋಕಕ್ಕೆ ಒಂದೊಂದು ಷಟ್ಪದಿಯಂತೆ ಕನ್ನಡಿಸಿದ ಶ್ಲೋಕಗಳ ಮತ್ತು ಷಟ್ಪದಿಗಳ ಸಂಖ್ಯೆಗಳ ಪಟ್ಟಿಯು.

| ಸರ್ಗ. | ಸಂಸ್ಕೃತಶ್ಲೋಕ ಸಂಖ್ಯೆ. | ಕನ್ನಡಷಟ್ಪದಿಗಳ ಸಂಖ್ಯೆ |
|---|---|---|
| ೧ | ೧-೯೫ | ೧-೪೯ |
| ೨ | ೭೫ | ೩೮ |
| ೪ | ೮೭-೮೮ | ೪೪-೪೫ |
| ೫ | ೬೩ ರಿಂದ ೭೬ | ೩೨ ರಿಂದ ೪೫ |
| ೬ | ೮೪ | ೪೩ |
| ೭ | ೭೧ | ೩೬ |
| ೮ | ೯೫ | ೪೮ |
| ೧೦ | ೧೫-೮೬ | ೮-೪೪ |
| ೧೧ | ೯೩ | ೪೭ |
| ೧೨ | ೧೦೩-೧೦೪ | ೫೨-೫೩ |
| ೧೩ | ೭೯ | ೪೦ |
| ೧೪ | ೮೭ | ೪೪ |
| ೧೫ | ೧೦೩ | ೫೨ |
| ೧೬ | ೮೭-೮೮ | ೪೪-೪೫ |
| ೧೭ | ೮೧ | ೪೧ |
| ೧೮ | ೫೩ | ೨೭ |
| ೧೯ | ೫೭ | ೨೯ |

## ಶುದ್ಧಿಪತ್ರಿಕೆ.

## ದ್ವಿತೀಯಸರ್ಗದ ೧೧ (A) ನೆಯಪದ್ಯ

ಆರಸಿ ಸಾಕ್ಷತಪಾತ್ರಕರೆ ಪಯಸ್ವಿನಿಯಪ್ಪ
ತುರುಗೆ ಬಲವಂದು ಮೇಣೆರಗಿ ತಚ್ಛೃಂಗದಂ
ತರವ ಪೂಜಿಸಿವಳೆಳಸಿದುದ ನೀಡುವ ಬಾಗಿಲಂ ಸಮರ್ಚಿಸುವತೆರದಿಂ||
ಕರುವಿನೊಳ್ ಮನವರಿದೊಡಂ ಚಲಿಸದಂತೆ ತುರು
ನೆರೆ ಪೂಜೆಯಂ ಗ್ರಹಿಸಿತೆಂಬವರ್ ನಲಿದರೀ
ತೆರದ ಪೂಜ್ಯಾನುಗ್ರಹದ ಕುರುಪೆ ಸನ್ನಿಹಿತಫಲಮಲ್ತೆ ಭಕ್ತಜನಕೆ||

# ಶುದ್ಧಿಪತ್ರಿಕೆ.

| ಪುಟ. | ಪಙ್ಕ್ತಿ | ಅಶುದ್ಧ. | ಶುದ್ಧ. |
|---|---|---|---|
| ೬ | ೬ | ಲಕವೇಷ್ಟನರಾಗಿ | ಲಕವೇಷ್ಟನಗಳಿಂ |
| ೮ | ೨೧ | ನೊಳಕುಂಡ | ನೊಳಕೊಂಡ |
| ,, | ೨೫ | ತೃಪ್ತಿಮಪ್ಪಂ | ತೃಪ್ತಿಯಪ್ಪಂ |
| ೧೦ | ೬ | ಭೋರರಂಬ | ಭೋರೆಂಬ |
| ೧೨ | ೧೫ | ಶೃತಿ | ಶ್ರುತಿ |
| ,, | ೧೬ | ಶೃತ | ಶ್ರುತ |
| ೧೬ | ೨೫ | ಜೇಷ್ಟ | ಜ್ಯೇಷ್ಠ |
| ,, | ೨೭ | ನೊರೆವಸು | ನೊರೆವೆಸು |
| ೧೭ | ೧೦ | ಛತ್ರಾ | ಚಕ್ರಾ |
| ೧೯ | ೪ | ಗರು | ಗುರು |
| ,, | ೧೪ | ಷಷ್ಟ | ಷಷ್ಠ |
| ,, | ೧೯ | ಹರ್ಹ | ಹರ್ಷ |
| ೨೦ | ೧೯ | ಮೇಧತ | ಮೇಧದ |
| ೨೫ | ೧೮ | ಪಕ್ಷಭೇದಕ | ಪಕ್ಷಭೇದಕ |
| ೩೩ | ೧೮ | ಮಧ್ಯ | ಮದ್ಯ |
| ೩೫ | ೬ | ದು ಸಂಚಲಿತ | ದುರಿ ಸಂಚಲಿತ |
| ,, | ,, | ವನಾಳಿಯಿ | ವನಾವಳಿಯಿ |
| ೩೬ | ೨೫ | ಕಲಕೆಲತೆ | ಕಲಕಲಕೆ |
| ೩೯ | ೯ | ಶೃತಿಜ್ಞ | ಶ್ರುತಿಜ್ಞ |
| ,, | ೧೫ | ಪುಂಗಪಂ | ಪುಂಗವಂ |
| ,, | ೨೪ | ತೊಡೆಪಾಸು | ತೊಡೆವಾಸು |
| ೪೦ | ೯ | ನಿನಿಗಿ | ನಿನಗಿ |
| ೪೧ | ೬ | ಶೃತಿ | ಶ್ರುತಿ |
| ೪೩ | ೨ | ಶೃತಿವಿದಂ | ಶ್ರುತಿವಿದಂ |
| ೪೬ | ೧೭-೧೮ | ಘುರ್ಷಣ | ಘರ್ಷಣ |

| ಪುಟ. | ಪಙ್ಕ್ತಿ | ಅಶುದ್ಧ- | ಶುದ್ಧ |
|---|---|---|---|
| ೪೭ | ೨೩ | ಯಧರೋಷ್ಟ | ಯಧರೋಷ್ಠ |
| ,, | ೨೭ | ಕುಲಾಂಬೋಧಿ | ಕುಲಾಂಭೋಧಿ |
| ೪೮ | ೧೬ | ಪುಷ್ಪೋಪ | ಪುಷ್ಪೋಪ |
| ,, | ೨೫ | ದಂಚೆಗೆಳ್ | ದಂಚೆಗಳ್ |
| ೪೯ | ೧೧ | ವಿಷ್ಠರ | ವಿಷ್ಟರ |
| ೫೦ | ೧ | ವೇಷನಾಂತ | ವೇಷವನಾಂ |
| ೫೧ | ೨ | ತಿರ್ಯಕ್ವಿ | ತಿರ್ಯಗ್ವಿ |
| ,, | ೧೬ | ಮಗದ | ಮಗಧ |
| ೫೨ | ೨೦ | ಪಡೆಯರತಿ | ಪಡಿಯರತಿ |
| ೫೩ | ೨೨ | ಬಿಗಿದ | ಬಿಗಿದು |
| ,, | ,, | ವಿಜಿಸುತಸುರ | ವಿಜಿತಸುರ |
| ೫೪ | ೪ | ಲಲನೆ? | ಲಲನೆ! |
| ,, | ೭ | ಮರೆಯಂ | ಮರೆಯ್ಯೈದೆ |
| ,, | ೨೦ | ಯುಮುನೆ | ಯಮುನೆ |
| ೫೬ | ೧೫ | ಭವದೆಯುಂ | ಭವದೊಳಂ |
| ,, | ೬ | ಮನಿಪಂ | ಮುನಿಪಂ |
| ೫೭ | ೩ | ರಸಾಲ | ರಸಾಲವ |
| ,, | ೭ | ಕಕುಸ್ಥ | ಕಕುತ್ಸ್ಥ |
| ,, | ೯ | ಕಾಕುಸ್ಥ | ಕಾಕುತ್ಸ್ಥ |
| ,, | ೧೬ | ಕಕುಸ್ಥ | ಕಕುತ್ಸ್ಥ |
| ೫೮ | ೨೧ | ನಸ್ಪಿದ | ನಪ್ಪಿದ |
| ,, | ೨೪ | ಶೃತಿಕಟು | ಶ್ರುತಿಕಟು |
| ,, | ೨೭ | ಮುತ್ಪಲದೆಯುಂ | ಮುತ್ಪಲದೊಳಂ |
| ೬೦ | ೧೮ | ಅನುಗಣೆಯ | ಅನುಗುಣೆಯ |
| ,, | ೨೫ | ಶೃತಿಸುಖಂ | ಶ್ರುತಿಸುಖಂ |
| ೬೧ | ೧೬ | ಕಂಟಕಿತಮೂಯ್ತು | ಕಂಟಕಿತಮಾಯ್ತು |
| ೬೩ | ೧೨ | ಒರೆಯದ | ಒರೆಯದೆ, |
| ೬೪ | ೨೪ | ಖಡ್ಗಭಿನ್ನ | ಖಡ್ಗಭಿನ್ನ |
| ೬೫ | ೬ | ಜಯಾಜವಾಂತ | ಜಯಾಜಯವಾಂ |
| ,, | ೮ | ಪ್ರೋಕ್ಕನಾರಾತಿ | ಪ್ರೋಕ್ಕನಾವೈರಿ |
| ,, | ೧೫ | ಕಿವಿಯನ್ನಗಂ | ಕಿವಿಯನ್ನೆಗಂ |
| ೬೬ | ೨೭ | ರೂಕ್ಷಾಲಕಾದ್ರಗ | ರೂಕ್ಷಾಲಕಾಗ್ರ |
| ೬೭ | ೧೦ | ಸುದಾಹ | ಸುದ್ವಾಹ |
| ,, | ೨೨ | ಹರೆವ | ಹರೆಯ |
| ೬೮ | ೩ | ಸುಯೌನವ | ಸುಯೌವನವ |